ಅಮೆರಿಕದ

ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿದ್ದ

# ಜೇಮ್ಸ್ ಏಬ್ರಾಮ್ ಗಾರ್ಫೀಲ್ಡ್‌ನ ಚರಿತ್ರೆ

ತೃತೀಯ ಮುದ್ರಣ



ಬೆಂಗಳೂರು

ಕರ್ಣಾಟಕ ಸಾಹಿತ್ಯ ಪರಿಷತ್ತು

೧೯೩೦

[ಬೆಲೆ ೧೨ ಆಣೆ



ಜೇಮ್ಸ್ ಏಬ್ರಾಮ್ ಗಾರ್ಫೀಲ್ಡ್

ಅಮೆರಿಕದ

ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿದ್ದ

# ಜೇಮ್ಸ್ ಏಬ್ರಾಮ್ ಗಾರ್ಫೀಲ್ಡನ ಚರಿತ್ರೆ

[illegible]

ತೃತೀಯ ಮುದ್ರಣ

ಬೆಂಗಳೂರು

**ಕರ್ಣಾಟಕ ಸಾಹಿತ್ಯ ಪರಿಷತ್ತು**

೧೯೪೦

[ಬೆಲೆ ೧೨ ಆಣೆ]

# ಪ್ರಸ್ತಾವನೆ

---

## ಮೊದಲನೆಯ ಮುದ್ರಣ

ಮೈಸೂರು ಸರ್ಕಾರದ ರೈಲ್ವೆಗಳ ಏಜಂಟರವರಿಗೆ ಇಂಜಿನಿಯರ್ ಅಸಿಸ್ಟೆಂಟರಾಗಿರುವ ಮ॥ ರಾ॥ ವೈ. ಕೆ. ರಾಮಚಂದ್ರರಾವ್, ಬಿ.ಎ., ಎಲ್.ಸಿ.ಇ.ಯವರು ಈ ಗಾರ್‌ಫೀಲ್ಡ್ ಚರಿತ್ರೆಯನ್ನು ಕನ್ನಡದಲ್ಲಿ ಬರೆದು, ೧೯೧೬ನೆಯ ಇಸವಿ ಆಗಸ್ಟ್ ೧೪ನೆಯ ತಾರೀಖಿನಲ್ಲಿ ಲಿಖಿತ ಮೂಲಕವಾಗಿ ಈ ಪರಿಷತ್ತಿಗೆ ಉಚಿತವಾಗಿ ಸಮರ್ಪಿಸಿದರು. "ಸಾಧ್ಯವಾಗುವಷ್ಟು ಶೀಘ್ರದಲ್ಲಿ ಈ ಪುಸ್ತಕವನ್ನು ಮುದ್ರಣಕ್ಕೆ ಪರಿಷ್ಕರಿಸುವ ಕಾರ್ಯದಲ್ಲಿ ಪರಿಷತ್ತಿನವರಿಗೆ ಉಚಿತವೆಂದಾಗಲಿ ಆವಶ್ಯಕವೆಂದಾಗಲಿ ಕಾಣಬರುವ ಬದಲಾವಣೆಗಳನ್ನೆಲ್ಲ ಮಾಡಬಹುದು. ಈ ಪುಸ್ತಕದ ಮುದ್ರಣದಿಂದ ಬರಬಹುದಾದ ಲಾಭದ ಮೊಬಲಗನ್ನು ಪರಿಷದ್ಗ್ರಂಥಾವಳಿಯ ಮುದ್ರಣದ ಮೂಲ ಧನವಾಗಿಯೇ ಇಡಬೇಕೆಂದು ಬೇಡಿಕೊಳ್ಳುತ್ತೇನೆ" ಎಂದು ಅವರು ತಮ್ಮ ಇಂಗ್ಲೀಷಿನ ಲೇಖನದಲ್ಲಿ ಬರೆದಿರುತ್ತಾರೆ.

೧೯೧೬ನೆಯ ಇಸವಿ ಸೆಪಟಂಬರ್ ೩ನೆಯ ತಾರೀಖಿನಲ್ಲಿ ಕರ್ಣಾಟಕ ಸಾಹಿತ್ಯ ಪರಿಷತ್ತಿನ ಕಾರ್ಯನಿರ್ವಾಹ ಮಂಡಲಿಯವರು ಮ॥ ರಾ॥ ವೈ. ಕೆ. ರಾಮಚಂದ್ರರಾಯರವರ ಪುಸ್ತಕವನ್ನು ಕೃತಜ್ಞತಾಪೂರ್ವಕವಾಗಿ ಸ್ವೀಕರಿಸಿ, ಅದರ ಪರಿಷ್ಕರಣ ಕಾರ್ಯವನ್ನು ಪರಿಷತ್ತಿನ ಸಂಪಾದಕ ಮಂಡಲಿಯವರಿಗೂ ಪಂಡಿತ ರಾಮಶೇಷಶಾಸ್ತ್ರಿಗಳವರಿಗೂ ಪಂಡಿತ ಎಂ. ಕೃಷ್ಣಪ್ಪನವರಿಗೂ ವಹಿಸಿದರು.

ಪರಿಷತ್ಪತ್ರಿಕೆಯ ಸಂಪಾದಕ ಮಂಡಲಿಗೆ ಅಧ್ಯಕ್ಷರಾಗಿರುವ ಮ॥ ರಾ॥ ಆರ್. ರಘುನಾಥರಾವ್, ಬಿ.ಎ.ಯವರು ಇಂಗ್ಲೀಷ್ ಪುಸ್ತಕಗಳ ಸಹಾಯದೊಡನೆ ಈ ಪುಸ್ತಕವನ್ನು ಪರಿಷ್ಕರಿಸಿದರು. ಅವರು ಬರೆದ ಪ್ರತಿಯನ್ನು ಡಾಕ್ಟರು ಪಿ. ಎಸ್. ಅಚ್ಯುತರಾಯರೂ

ಪಂಡಿತ ಎಂ. ಕೃಷ್ಣಪ್ಪನವರೂ ಓದಿ, ಕೆಲವು ಬದಲಾವಣೆಗಳನ್ನು ಸೂಚಿಸಿದರು. ಆಸ್ಥಾನ ಪಂಡಿತರಾದ ಸರಳಕವಿಸೂರಿ ರಾಜಗೋಪಾಲ ಚಕ್ರವರ್ತಿಗಳವರು ಸಾವಧಾನದಿಂದ ಪುಸ್ತಕವನ್ನು ಆಮೂಲಾಗ್ರವಾಗಿ ಓದಿ, ಕೆಲವು ಬದಲಾವಣೆಗಳನ್ನು ಸೂಚಿಸಿ, ಸ್ಮರಣೀಯವಾದ ಸಹಾಯವನ್ನು ಮಾಡಿರುತ್ತಾರೆ.

ಈ ಪುಸ್ತಕದ ಅಂತ್ಯಭಾಗದಲ್ಲಿ ಹೇಳಿರುವಂತೆ, ಕೋಟ್ಯನುಕೋಟಿ ಜನರು ನಾನಾ ಭಾಷೆಗಳಲ್ಲಿ ಈ ಗಾರ್‌ಫೀಲ್ಡನ ಚರಿತ್ರೆಯನ್ನು ಅತ್ಯಾದರದಿಂದ ಓದುತ್ತಿರುವರು. ನಮ್ಮ ಕರ್ಣಾಟಕ ಬಂಧುವರ್ಗದವರೂ ಈ ಮಹನೀಯನ ಚರಿತೆಯನ್ನು ಪಠಿಸಿ ಸದುದ್ಯಮಗಳನ್ನು ಕೈಕೊಳ್ಳಬೇಕೆಂದು ಈ ಪರಿಷತ್ತಿನವರು ಬಯಸುತ್ತಿರುವರು. ಕರ್ಣಾಟಕ ಸಾಹಿತ್ಯ ಪರಿಷತ್ತಿನ ಸರಳ ಗ್ರಂಥಾವಳಿಯಲ್ಲಿ ಇದು ಮೊದಲನೆಯದಾಗಿರುವುದು.

ಬೆಂಗಳೂರು,
ತಾ|| 1—4—1917.

P. S. ACHYUTA RAO,
ಜಂಟಿ ಗೌರವ ಕಾರ್ಯದರ್ಶಿ.

---

## ಎರಡನೆಯ ಮುದ್ರಣ

ಮೈಸೂರು ಸರ್ಕಾರದವರು ಈ ಪುಸ್ತಕವನ್ನು ೧೯೨೫ನೆಯ ಲೋವರ್ ಸೆಕಂಡರೀ ಪರೀಕ್ಷೆಗೆ ಪಠ್ಯ ಪುಸ್ತಕವನ್ನಾಗಿ ಮರಳಿ ನಿಯಮಿಸಿದುದರಿಂದ ಇದರ ಎರಡನೆಯ ಮುದ್ರಣಕ್ಕೆ ಅವಕಾಶ ದೊರೆಯಿತು. ಇದರಲ್ಲಿಯು ಭಾಷೆಯನ್ನು ಕೆಲವೆಡೆಗಳಲ್ಲಿ ತಿದ್ದಬೇಕೆಂದು ತೋರಿಬಂದುದರಿಂದ ಆವಶ್ಯಕವಾದೆಡೆಗಳಲ್ಲಿ ತಿದ್ದಲಾಗಿದೆ.

ಕರ್ಣಾಟಕ ಸಾಹಿತ್ಯ ಪರಿಷತ್ತು,
ಬೆಂಗಳೂರು.
ರಕ್ತಾಕ್ಷಿ ಸಂ|| ಚೈತ್ರ ಶುದ್ಧ ನವಮಿ
1924.

**ಬೆಳ್ಳಾವೆ ವೆಂಕಟನಾರಾಯಣಪ್ಪ,**
ಸಂಪಾದಕ.

# ಮೂರನೆಯ ಮುದ್ರಣ

ಈ ಪುಸ್ತಕವನ್ನು ಮೈಸೂರು ಹೈಸ್ಕೂಲುಗಳ ನಾಲ್ಕನೆಯ ಫಾರಮ್ಮಿಗೆ ಸಾಮಾನ್ಯ ಪಠ್ಯಪುಸ್ತಕವನ್ನಾಗಿ, ೧೯೩೧ನೆಯ ಇಸವಿಗೆ, ನಿಯಮಿಸಿರುವುದರಿಂದ ಈ ಮೂರನೆಯ ಮುದ್ರಣವನ್ನು ಮಾಡಿಸಲಾಯಿತು. ಎರಡನೆಯ ಮುದ್ರಣದ ಮೊದಲಣ ಮೂರು ಪುಟಗಳಲ್ಲಿ ಕೊಟ್ಟಿರುವ ಕೆಲವು ವಿಷಯಗಳನ್ನು ಕಾಲಾನುಗುಣ್ಯವಾಗಿ ತಿದ್ದಬೇಕಾಗಿ ಬಂದುದರಿಂದ ಅವನ್ನು ತಿದ್ದಲಾಗಿದೆ. ಹೀಗೆ ತಿದ್ದುವುದರಲ್ಲಿ, 'ಎನ್‌ಸೈಕ್ಲೋಪೀಡಿಯಾ ಬ್ರಿಟಾನಿಕಾ' (Encyclopædia Britannica) ಎಂಬ ಪ್ರಸಿದ್ಧವಾದ ವಿಶ್ವಕೋಶದ ಹೊಸ (೧೪ನೆಯ) ಆವೃತ್ತಿಯ ಸಹಾಯವನ್ನು ಪಡೆಯಲಾಗಿದೆ. ಇದಲ್ಲದೆ, ಅಲ್ಲಲ್ಲಿ ಬಿದ್ದಿದ್ದ ಕೆಲವು ಅಕ್ಷರ ಸ್ಖಾಲಿತ್ಯಗಳನ್ನು ತಿದ್ದಿ ಸರಿಪಡಿಸಲಾಗಿದೆ; ಇತರ ಹೆಚ್ಚು ಮಾರ್ಪಾಡುಗಳನ್ನು ಮಾಡಿರುವುದಿಲ್ಲ.

ಕರ್ಣಾಟಕ ಸಾಹಿತ್ಯ ಪರಿಷತ್ತು,
ಬೆಂಗಳೂರು.
೧೫ನೆಯ ಮೇ ೧೯೩೦.

**ಬೆಳ್ಳಾವೆ ವೆಂಕಟನಾರಾಯಣಪ್ಪ,**
ಸಂಪಾದಕ.

———— ————

## ಅಮೆರಿಕದ
## ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿದ್ದ
# ಜೇಮ್ಸ್ ಏಬ್ರಾಮ್ ಗಾರ್ಫೀಲ್ಡನ ಚರಿತ್ರೆ



## ಅಧ್ಯಾಯ ೧

### ಓಹಿಯೋ ಸಂಸ್ಥಾನದ ವರ್ಣನೆ

ನಮ್ಮ ಕಥಾನಾಯಕನಾದ **ಜೇಮ್ಸ್ ಏಬ್ರಾಮ್ ಗಾರ್ಫೀಲ್ಡ್** ಎಂಬ ಮಹನೀಯನು ಉತ್ತರ ಅಮೆರಿಕಾ ಖಂಡದ ಸಂಯುಕ್ತ ಸಂಸ್ಥಾನಗಳೊಂದರಲ್ಲಿ ಹತ್ತೊಂಬತ್ತನೆಯ ಶತಮಾನದ ಮಧ್ಯಭಾಗದಲ್ಲಿ ಹುಟ್ಟಿ ಬಾಳಿದವನು. ಈ ಸಂಸ್ಥಾನ ಸಮುದಾಯವು ಪ್ರಪಂಚದಲ್ಲಿರುವ ಪ್ರಜಾಧಿಪತ್ಯದ ರಾಜ್ಯ(Republic)ಗಳಲ್ಲಿ ಅತ್ಯಂತ ದೊಡ್ಡದು ಮಾತ್ರವಲ್ಲದೆ ಬಹಳ ಮಹತ್ವವುಳ್ಳದು. ಇದರ ವಿಸ್ತೀರ್ಣವು ಉತ್ತರ ಅಮೆರಿಕದ ಅರ್ಧ ಭಾಗಕ್ಕಿಂತಲೂ ಸ್ವಲ್ಪ ಕಡಿಮೆಯಾಗಿಯೂ ಯೂರೋಪ್ ಖಂಡದ ಮುಕ್ಕಾಲು ಪಾಲಿಗಿಂತಲೂ ಸ್ವಲ್ಪ ಹೆಚ್ಚಾಗಿಯೂ ಇರುವುದು. ಆದರೆ ಇದರ ಪ್ರಜಾ ಸಂಖ್ಯೆಯು ಮಾತ್ರ ಯೂರೋಪಿನ ಪ್ರಜಾ ಸಂಖ್ಯೆಯ ನಾಲ್ಕರಲ್ಲಿ ಒಂದು ಭಾಗಕ್ಕಿಂತಲೂ ಕಡಿಮೆಯಾಗಿರುವುದು. ಈ ರಾಷ್ಟ್ರದಲ್ಲಿ ನಲವತ್ತೆಂಟು ಬೇರೆ ಬೇರೆ ಸಂಸ್ಥಾನಗಳಿರುವುವು. ಇದರಲ್ಲಿ ನಡೆಯುತ್ತಿರುವಷ್ಟು ಮಹಾ ಕಾರ್ಯಗಳು ಪೃಥ್ವಿಯ ಇತರ ಯಾವ ದೇಶದಲ್ಲಿಯೂ ನಡೆಯುತ್ತಿಲ್ಲವೆಂದು ಹೇಳಬಹುದು.

ಈ ರಾಷ್ಟ್ರದಲ್ಲಿಯ ಓಹಿಯೋ ಸಂಸ್ಥಾನವು ನಮ್ಮ ಕಥಾನಾಯಕನ ಜನ್ಮಭೂಮಿ. ಇದು ಫಲವತ್ತಾದ ಪ್ರದೇಶವು. ಇದರ

ಭೂಪ್ರದೇಶದ ವಿಸ್ತೀರ್ಣವು ಮೈಸೂರು ಸಂಸ್ಥಾನದ ಒಂದೂವರೆಗೆ ಸ್ವಲ್ಪ ಕಡಿಮೆಯಾಗಿರುವುದು. ಈಗ ಇನ್ನೂರು ವರ್ಷಗಳಿಗೆ ಹಿಂದೆ ಈ ಪ್ರದೇಶದಲ್ಲಿ ತಾಮ್ರ ವರ್ಣದ ಜನರು (Red Indians) ಮಾತ್ರ ಇದ್ದರು. ಈ ಸಂಸ್ಥಾನವು ಈಗ ನೂರಿಪ್ಪತ್ತೈದು ವರ್ಷಗಳ ಕೆಳಗೆ ಸಂಯುಕ್ತ ಸಂಸ್ಥಾನಗಳ ಮಂಡಲಿಗೆ ಸೇರಿದಂದಿನಿಂದ ಇದರ ಜನ ಸಂಖ್ಯೆಯೂ ಸಂಪತ್ತೂ ಹೆಚ್ಚುತ್ತ ಬಂದಿವೆ. ಇದರ ಉತ್ತರಕ್ಕೆ ಸುಮಾರು ಮೂರೂವರೆ ಸಾವಿರ ಚದರ ಮೈಲಿಯಷ್ಟು ವಿಸ್ತೀರ್ಣವುಳ್ಳ ಈರೀ ಎಂಬ ಸಿಹಿನೀರಿನ ಸರೋವರವಿರುವುದು.

ದೇಶಾಭ್ಯುದಯಕ್ಕೆ ಮೂಲಾಧಾರವಾದ ವಿದ್ಯಾಭ್ಯಾಸವು ಈ ಸಂಸ್ಥಾನದಲ್ಲಿ ಬಹಳ ಚೆನ್ನಾಗಿ ನಡೆಯುತ್ತಿದೆ. ಪ್ರತಿ ಹುಡುಗನಿಗೂ ಹುಡುಗಿಗೂ ಆರು ವರ್ಷ ವಯಸ್ಸಿನಿಂದ ಹದಿನಾರು ವರ್ಷ ವಯಸ್ಸಿನ ವರೆಗೆ ವಿದ್ಯಾಭ್ಯಾಸವನ್ನು ಮಾಡಿಸಲೇ ಬೇಕೆಂಬ ಸರ್ಕಾರದ ನಿಯಮ ವಿದೆ. ಈ ಸಂಸ್ಥಾನದಲ್ಲಿ ಪ್ರೌಢ ವಿದ್ಯಾಭ್ಯಾಸಕ್ಕಾಗಿ ಅನೇಕ ಶಾಲೆ ಗಳೂ (Colleges), ಹನ್ನೊಂದು ವಿಶ್ವವಿದ್ಯಾನಿಲಯಗಳೂ (Universities), ಒಟ್ಟು ៥೦ ಇವೆ.

೧೯೨೬ನೆಯ ಇಸವಿಯ ಜೂನ್ ತಿಂಗಳಿಗೆ ಅಂತ್ಯವಾದ ವರುಷ ದಲ್ಲಿ ಓಹಿಯೋ ಸಂಸ್ಥಾನದ ಎಲ್ಲ ವಿದ್ಯಾಶಾಲೆಗಳಲ್ಲಿಯ ಒಟ್ಟು ವಿದ್ಯಾರ್ಥಿಗಳ ಸಂಖ್ಯೆ ೧೨॥೦ ಲಕ್ಷಕ್ಕೆ ಸ್ವಲ್ಪ ಮೀರಿದ್ದಿತು. ಅದೇ ವರುಷ ಮೈಸೂರು ಸಂಸ್ಥಾನದಲ್ಲಿ ಈ ಸಂಖ್ಯೆ ೩।೦ ಲಕ್ಷಕ್ಕೆ ಸ್ವಲ್ಪ ಕಡಿಮೆಯಾಗಿದ್ದಿತು. ಓಹಿಯೋ ಸಂಸ್ಥಾನದಲ್ಲಿ ಓದು ಬರೆಹ ಬಾರ ದವರ ಸಂಖ್ಯೆಯು, ೧೯೨೦ನೆಯ ಇಸವಿಯಲ್ಲಿ, ಒಟ್ಟು ಪ್ರಜಾ ಸಂಖ್ಯೆ ಯಲ್ಲಿ, ನೇಕಡ ೨॥೦ (2·8) ರಷ್ಟು ಮಾತ್ರ ಇದ್ದಿತು.

ಓಹಿಯೋ ಸಂಸ್ಥಾನದ ವಿದ್ಯಾಭ್ಯಾಸದ ಇಲಾಖೆಯ ಅಧ್ಯಕ್ಷರ ವರದಿಯ ಮೇರೆಗೆ, ೧೯೨೬ನೆಯ ಇಸವಿಯ ಜೂನ್ ತಿಂಗಳಿಗೆ ಅಂತ್ಯವಾದ ಒಂದು ವರುಷಕ್ಕೆ ವಿದ್ಯಾಭ್ಯಾಸದ ವೆಚ್ಚಕ್ಕಾಗಿ ಆ ದೇಶ ದಲ್ಲಿ ಹುಟ್ಟುವಳಿಯಾದ ಮೊಬಲಗು ಸುಮಾರು ೧೧॥೦ ಕೋಟಿ

*ಡಾಲರುಗಳು—ಎಂದರೆ, ಸುಮಾರು ೩೫ ಕೋಟಿ ರೂಪಾಯಿಗಳು. ಇದರ ಜೊತೆಗೆ, ಪತ್ರಗಳು ಮತ್ತು ಇತರ ದಾನ ವಸ್ತುಗಳನ್ನು ಮಾರಿದುದರಿಂದ ಬಂದ ಮೊಬಲಗು ಸುಮಾರು ೬ ಕೋಟಿ ಡಾಲರುಗಳು—ಎಂದರೆ, ಸುಮಾರು ೧೮ ಕೋಟಿ ರೂಪಾಯಿಗಳು. ನಮ್ಮ ಮೈಸೂರು ಸಂಸ್ಥಾನದಲ್ಲಿ ಅದೇ ವರುಷದಲ್ಲಿ ವಿದ್ಯಾಭ್ಯಾಸಕ್ಕಾಗಿ ವೆಚ್ಚವಾದ ಮೊಬಲಗು ೬೦॥೦ ಲಕ್ಷ ರೂಪಾಯಿಗಳಿಗೆ ಮಿಾರಲಿಲ್ಲ.

ಓಹಿಯೋ ಸಂಸ್ಥಾನದಲ್ಲಿ ಕೃಷಿಗೆ ಹೆಚ್ಚು ಗಮನಕೊಡುತ್ತಿರುವರು. ೧೯೨೫ನೆಯ ಇಸವಿಯಲ್ಲಿ ಸುಮಾರು ಎರಡೂಕಾಲು ಕೋಟಿ ಎಕರೆಗಳಷ್ಟು ಜಮಾನು ಉತ್ಕೃಷ್ಟವಾಗಿ ಸಾಗುವಳಿಯಾಗುತ್ತಿದ್ದಿತು. ಮುಸುಕಿನ ಜೋಳ, ಗೋಧಿ, ಗೋಧಿಯ ಜಾತಿಗೆ ಸೇರಿದ ಇತರ ಧಾನ್ಯಗಳು, ಉರುಳುಗೆಡ್ಡೆ, ಸೇಬು ಹಣ್ಣು, ಹೊಗೆಯ ಸೊಪ್ಪು—ಇವೇ ವ್ಯವಸಾಯದ ಮುಖ್ಯ ಜಿನಸುಗಳು. ಕುದುರೆಗಳೂ, ದನಗಳೂ, ಕುರಿಗಳೂ, ಕುಕ್ಕುಟ ವರ್ಗಕ್ಕೆ ಸೇರಿದ ಪ್ರಾಣಿಗಳೂ ಬಹಳ ಉತ್ಕೃಷ್ಟ ಸ್ಥಿತಿಯಲ್ಲಿವೆ.

ಭೂಗರ್ಭದ ಸಂಪತ್ತು ಓಹಿಯೋ ಸಂಸ್ಥಾನದಲ್ಲಿ ಹೇರಳವಾಗಿರುವುದು. ೧೯೨೬ನೆಯ ಇಸವಿಯಲ್ಲಿ ಭೂಮಿಯಿಂದ ತೆಗೆದ ಕಲ್ಲಿದ್ದಲಿನಿಂದ ಸುಮಾರು ೩೦ ಕೋಟಿ ರೂಪಾಯಿಗಳೂ, ಕೆರೊಸೀನ್ ಎಣ್ಣೆಗೆ ಮೂಲ ವಸ್ತುವಾದ ಪೆಟ್ರೋಲಿಯಂ (Petroleum) ಎಣ್ಣೆಯಿಂದ ಸುಮಾರು ೩॥೦ ಕೋಟಿ ರೂಪಾಯಿಗಳೂ, ನೆಲದಿಂದ ಸ್ವಾಭಾವಿಕವಾಗಿ ಉಕ್ಕಿ ಬರುವ ಎಣ್ಣೆಯ ಅನಿಲ(Natural gas) ದಿಂದ ಸುಮಾರು ೬॥೦ ಕೋಟಿ ರೂಪಾಯಿಗಳೂ ಉತ್ಪತ್ತಿಯಾಯಿತು. ಕಟ್ಟಡದ ಕಲ್ಲು, ಕಬ್ಬಿಣ ಮುಂತಾದುವು ಹೇರಳವಾಗಿವೆ. ೧೯೨೬ನೆಯ ಇಸವಿಯಲ್ಲಿ ಖನಿಜಗಳಿಂದಾದ ಒಟ್ಟು ಉತ್ಪತ್ತಿಯು ೭೪।೦ ಕೋಟಿ ರೂಪಾಯಿಗಳಿಗೆ ಮಿಾರಿದ್ದಿತು.

---

* ಒಂದು ಡಾಲರಿನ ಬೆಲೆ ಸುಮಾರು ಮೂರು ರೂಪಾಯಿ.

ಕೈಗಾರಿಕೆಯು ಕೆಲಸಗಳು ಅನೇಕವಾಗಿವೆ. ಕಬ್ಬಿಣ ಮತ್ತು ಉಕ್ಕಿನ ಕೆಲಸವೇ ಮುಖ್ಯವಾದ ಕೈಗಾರಿಕೆ. ಮೋಟಾರು ಕಾರುಗಳಿಗೆ ಬೇಕಾದ ರಬ್ಬರಿನ ವಸ್ತುಗಳನ್ನೂ ಮೋಟಾರು ಕಾರುಗಳನ್ನೂ ತಯಾರು ಮಾಡುವುದು ಇದಕ್ಕೆ ಎರಡನೆಯದು. ನಾನಾ ಬಗೆಯ ಯಂತ್ರಗಳನ್ನೂ, ವಿದ್ಯುಚ್ಛಕ್ತಿಯ ಸಲಕರಣೆಗಳನ್ನೂ, ರೈಲ್ವೆಯ ಬಂಡಿಗಳನ್ನೂ ತಯಾರುಮಾಡುವುದು, ಮಾಂಸವನ್ನು ಅಡಕಮಾಡಿಟ್ಟು ಇತರ ದೇಶಗಳಿಗೆ ಕಳುಹಿಸುವುದು, ಕಾಗದವನ್ನು ತಯಾರುಮಾಡುವುದು— ಇವು ಇತರ ಮುಖ್ಯವಾದ ಕೈಗಾರಿಕೆಗಳು. ೧೯೨೫ನೆಯ ಇಸವಿಯಲ್ಲಿ ತಯಾರಾದ ಎಲ್ಲ ಕೈಗಾರಿಕೆಯ ವಸ್ತುಗಳ ಒಟ್ಟು ಬೆಲೆಯು ೧,೬೦೪ ಕೋಟಿ ರೂಪಾಯಿಗಳಿಗೆ ಮಾರಿದ್ದಿತು. ಧನಿಕರ ಹಣವು ವಿಶೇಷವಾಗಿ ಕೈಗಾರಿಕೆಯ ಕೆಲಸಗಳಲ್ಲಿ ಬಂಡವಲವಾಗಿ ವಿನಿಯೋಗಿಸಲ್ಪಟ್ಟಿದೆ.

ಓಹಿಯೋ ಸಂಸ್ಥಾನದಲ್ಲಿ ೧೯೨೫ನೆಯ ಇಸವಿಯ ಅಂತ್ಯದಲ್ಲಿ ಸುಮಾರು ಒಂಬತ್ತು ಸಾವಿರ ಮೈಲಿಗಳಷ್ಟು ಆವಿಯ ಯಂತ್ರದ ರೈಲು ಮಾರ್ಗವೂ, ಸುಮಾರು ನಾಲ್ಕು ಸಾವಿರ ಮೈಲಿಗಳಷ್ಟು ವಿದ್ಯುಚ್ಛಕ್ತಿಯ ಯಂತ್ರದ ರೈಲು ಮಾರ್ಗವೂ, ವ್ಯಾಪಾರದ ಸೌಕರ್ಯಕ್ಕಾಗಿ ಜಲ ಮಾರ್ಗಗಳೂ ಇದ್ದುವು. ವಿಸ್ತೀರ್ಣದಲ್ಲಿ ಈ ಸಂಸ್ಥಾನದ ಮುಕ್ಕಾಲಿನಷ್ಟಿರುವ ಮೈಸೂರು ದೇಶದಲ್ಲಿ ರೈಲು ಮಾರ್ಗವು ೬೦೦ ಮೈಲಿಗಳಿಗೆ ಹೆಚ್ಚಾಗಿಲ್ಲ.

ಓಹಿಯೋವಿನ ಐಶ್ವರ್ಯವು ಇಷ್ಟು ಹೆಚ್ಚಾಗಿ ಬೆಳೆದಿರುವುದು ಕಳೆದ ಒಂದು ನೂರು ವರ್ಷಗಳೊಳಗೆಯೇ. ನಮ್ಮ ಕಥಾನಾಯಕನ ಜನನ ಕಾಲದಲ್ಲಿ ಈ ದೇಶದ ಐಶ್ವರ್ಯವು ಬಹಳ ಕಡಿಮೆಯಾಗಿದ್ದಿತು.

ಜನರಲ್ಲಿ ಸತ್ಯಸಂಧತೆಯೂ ದೇಶವಾತ್ಸಲ್ಯವೂ ಕಾರ್ಯತತ್ಪರತೆಯೂ ಪರಸ್ಪರ ಸಹಾಯ ಬುದ್ಧಿಯೂ ವಿಶೇಷವಾಗಿರುವುದರಿಂದ ಈ ದೇಶವು ಕ್ರಮೇಣ ವೃದ್ಧಿಹೊಂದುತ್ತಾ ಬರುತ್ತಿದೆ.

## ಅಧ್ಯಾಯ ೨

## ತಂದೆ ತಾಯಿಗಳು ಮತ್ತು ಬಾಲ್ಯ

ಉತ್ತರ ಅಮೆರಿಕಾ ಖಂಡದ ಸಂಯುಕ್ತ ಸಂಸ್ಥಾನಗಳಲ್ಲೊಂದಾಗಿ ಪ್ರಾಮುಖ್ಯವನ್ನು ಪಡೆದಿರುವ ನ್ಯೂಯಾರ್ಕ್ ಎಂಬ ಸಂಸ್ಥಾನಕ್ಕೆ ಸೇರಿದ ವರ್ಸ್ಟರ್ ಎಂಬ ಊರಿನಲ್ಲಿ ಈಗ ಸುಮಾರು ನೂರಮೂವತ್ತೈದು ವರ್ಷಗಳ ಹಿಂದೆ ಥಾಮಸ್ ಗಾರ್ಫೀಲ್ಡನೆಂಬ ಒಬ್ಬ ಬಡ ರೈತನಿದ್ದನು. ಆತನಿಗೆ ೧೭೯೯ನೆಯ ಇಸವಿಯಲ್ಲಿ ಏಬ್ರಾಮ್ ಗಾರ್ಫೀಲ್ಡನೆಂಬ ಮಗನೊಬ್ಬನು ಹುಟ್ಟಿದನು. ಈ ಹುಡುಗನೇ ಮುಂದೆ ನಮ್ಮ ಕಥಾನಾಯಕನಿಗೆ ಜನ್ಮವನ್ನಿತ್ತವನು. ಏಬ್ರಾಮನಿಗೆ ಎರಡು ವರ್ಷ ತುಂಬುವುದರೊಳಗಾಗಿ ತಂದೆಯು ಮೃತನಾಗಲು, ನಾಲ್ಕಾರು ಮಕ್ಕಳನ್ನು ಪಡೆದಿದ್ದ ಆತನ ಹೆಂಡಿತಿಯು ಬಹು ಕಷ್ಟಕ್ಕೆ ಗುರಿಯಾದಳು. ಆಕೆ ಪಡುವ ಕಷ್ಟನಿಷ್ಠುರಗಳನ್ನು ನೋಡಿ ಉದಾರ ಮತಿಯಾದ ನೆರೆಯ ಗೃಹಸ್ಥನೊಬ್ಬನು ಕನಿಕರದಿಂದ ಏಬ್ರಾಮನನ್ನು ತನ್ನ ಮನೆಗೆ ಎತ್ತಿಕೊಂಡು ಹೋಗಿ ತನ್ನ ಮಕ್ಕಳಂತೆಯೇ ಸಾಕುತ್ತ ಬಂದನು.

ಏಬ್ರಾಮಿಗೆ ಹತ್ತು ವರ್ಷ ತುಂಬುವಷ್ಟರಲ್ಲಿ, ಪತಿವಿಹೀನಳಾಗಿದ್ದ ಬಾಲೋ ಎಂಬ ಕುಲಸ್ತ್ರೀಯೊಬ್ಬಳು ನ್ಯೂಹ್ಯಾಂಪ್‌ಷಯರ್ ಎಂಬ ಸ್ಥಳದಿಂದ, ಎಲಿಜೆಯೆಂಬ ಚೆಲುವೆಯಾದ ತನ್ನ ಮಗಳೊಡನೆ, ಅದೇ ಊರಿಗೆ ವಾಸಕ್ಕೆ ಬಂದಳು. ಆ ಹುಡುಗಿಗೆ ಆಗ ಒಂಬತ್ತು ವರ್ಷ ವಯಸ್ಸಾಗಿದ್ದಿತು. ಏಬ್ರಾಮನೂ ಎಲಿಜೆಯೂ ಒಡನಾಡಿಗಳಾಗಿದ್ದುದರಿಂದ ಅವರಿಗೆ ಪರಸ್ಪರ ಸ್ನೇಹವು ಬೆಳೆಯುತ್ತ ಬಂದಿತು. ಹೀಗೆ ಐದು ವರ್ಷಗಳು ಕಳೆಯುವಷ್ಟರಲ್ಲಿ ಎಲಿಜೆಯ ತಾಯಿಗೆ ಓಹಿಯೋ ಸಂಸ್ಥಾನಕ್ಕೆ ಹೋಗಿ ನೆಲೆಗೊಳ್ಳಬೇಕೆಂಬ ಅಪೇಕ್ಷೆಯುಂಟಾಯಿತು. ಆ ದೇಶದ ತೃಣ ಕಾಷ್ಠ ಜಲ ಸಮೃದ್ಧಿಯನ್ನೂ ವಾಯು ಗುಣವನ್ನೂ ಭೂಗರ್ಭದ ಸಂಪತ್ತನ್ನೂ ಎಲ್ಲರೂ ಕೊಂಡಾಡುತ್ತಿದ್ದರು. ನ್ಯೂಯಾರ್ಕು ಸಂಸ್ಥಾನದಿಂದ ನೂರಾರು ಮಂದಿ ಗೃಹಸ್ಥರು ಆ ಸ್ಥಳಕ್ಕೆ

ಅತ್ಯಾದರದಿಂದ ಹೊರಡುತ್ತಿದ್ದರು. ಇದನ್ನು ನೋಡಿ ಬಾಲೋ ಎಂಬ ಸ್ತ್ರೀಯೂ ಆಯೆಡೆಗೆ ಹೊರಡಬೇಕೆಂದು ನಿಶ್ಚಯಿಸಿದಳು. ಈ ಕಾರಣದಿಂದ ಏಬ್ರಾಮಿಗೆ ಎಲಿಜೆಯ ಅಗಲಿಕೆಯುಂಟಾಯಿತು. ಎಲಿಜೆಯು ಅವನನ್ನು ಬಿಟ್ಟು ಹೋದರೂ ಅವಳ ಭಾವ ಚಿತ್ರವು ಮಾತ್ರ ಏಬ್ರಾಮಿನ ಮನಸ್ಸಿನಲ್ಲಿ ನೆಲೆಗೊಂಡಿದ್ದಿತು. ಐದು ವರ್ಷಗಳಾದನಂತರ ಏಬ್ರಾಮಿಗೂ ಓಹಿಯೋವಿಗೆ ಹೋಗಬೇಕೆಂಬ ಅಪೇಕ್ಷೆ ಹುಟ್ಟಿತು. ಆ ಸುಭಿಕ್ಷದ ನಾಡಿನಲ್ಲಿ ಧನಿಕನಾಗಿ ಬಾಳಬೇಕೆಂಬ ಬಯಕೆಯು ಇದಕ್ಕೆ ಕಾರಣವಾಗಿರಬಹುದು; ಎಲಿಜೆಯ ನೆನಪೂ ಆತನನ್ನು ಆಯೆಡೆಗೆ ಎಳೆದಿರಬಹುದು. ಆಗ ಏಬ್ರಾಮಿಗೆ ಇಪ್ಪತ್ತು ವರ್ಷ ವಯಸ್ಸು. ದೃಢಾಂಗನಾದ ಆ ಯುವಕನು ಧೈರ್ಯೋತ್ಸಾಹಗಳೊಡನೆ ಓಹಿಯೋ ದೇಶಕ್ಕೆ ಹೊರಟು, ಅಲ್ಲಲ್ಲಿ ಕೆಲವು ಕಾಲವಿದ್ದು, ಕೊನೆಗೆ ಈರೀ ಸರೋವರದ ದಡದಲ್ಲಿರುವ ಕ್ಲೀವ್ಲಾಂಡು ಪಟ್ಟಣಕ್ಕೆ ಸ್ವಲ್ಪ ದೂರದಲ್ಲಿರುವ ನ್ಯೂಬರ್ಗ್ ಎಂಬ ಊರಿನಲ್ಲಿ ಕೂಲಿಯ ಕೆಲಸಕ್ಕೆ ನಿಂತನು. ಓಹಿಯೋ ದೇಶದಲ್ಲಿ ಆಗ ಪ್ರಜೆಗಳು ವಿರಳವಾಗಿದ್ದುದರಿಂದಲೂ ಜಮೀನುದಾರರು ಬಹಳವಾಗಿದ್ದುದರಿಂದಲೂ ಕೂಲಿಯು ಹೆಚ್ಚಾಗಿ ದೊರೆಯುತ್ತಿದ್ದಿತು. ಆದುದರಿಂದ ಏಬ್ರಾಮನು ತನ್ನಲ್ಲಿದ್ದ ಹಣದ ಜೊತೆಗೆ ಮತ್ತಷ್ಟು ಹಣವನ್ನು ಶೀಘ್ರದಲ್ಲಿ ಸೇರಿಸಿದನು. ಮದುವೆ ಮಾಡಿಕೊಂಡು ಗೃಹಸ್ಥನಾಗಿ ತಾನೂ ಜಮೀನ್ದಾರನಾಗಬೇಕೆಂಬ ಆಸೆಯು ಆತನಿಗೆ ಹೆಚ್ಚಿತು. ಎಲಿಜೆಯ ಭಾವ ಚಿತ್ರವು ಮನಸ್ಸಿನಲ್ಲಿ ನೆಲೆಗೊಂಡಿದ್ದುದರಿಂದ ಆತನು ಆಕೆ ಇರುವ ಸ್ಥಳವನ್ನು ವಿಚಾರಿಸಲು ಪ್ರಾರಂಭಿಸಿದನು. ಆಕೆಯ ನೆಲೆಯು ತಿಳಿಯುಬರುವ ವರೆಗೂ ಏಬ್ರಾಮಿಗೆ ಚಿತ್ತಶಾಂತಿಯಿರಲಿಲ್ಲ. ಓಹಿಯೋ ದೇಶದ ದಕ್ಷಿಣ ಪ್ರಾಂತದಲ್ಲಿ ಸಾನೆಸ್‌ವಿಲ್ ಎಂಬ ಪಟ್ಟಣದಲ್ಲಿ ಆಕೆ ಇರುವಳೆಂಬ ಸಂಗತಿಯು ತಿಳಿದ ಕೂಡಲೆ ಆತನು ತವಕದಿಂದ ಅಲ್ಲಿಗೆ ಹೊರಟನು. ಒಬ್ಬರನ್ನೊಬ್ಬರು ಸಂಧಿಸಿ ಇಬ್ಬರೂ ಆನಂದ ಭರಿತರಾದರು. ಬಾಲಕ ಬಾಲಿಕೆಯರ ಒಡನಾಟವು ಕೆಲವು ಸಂದರ್ಭಗಳಲ್ಲಿ ಪ್ರೇಮಾತಿಶಯವನ್ನು ಹುಟ್ಟಿಸುವುದು ಹೊಸದಲ್ಲವಷ್ಟೆ! ೧೮೨೦ನೆಯ ಆದಿ ಭಾಗದಲ್ಲಿ ಏಬ್ರಾಮನು ಎಲಿಜೆಯನ್ನು

ಮದುವೆ ಮಾಡಿಕೊಂಡು ಆಕೆಯೊಡನೆ ಸಂಭ್ರಮದಿಂದ ನ್ಯೂಬರ್ಗಿಗೆ ಬಂದು ಸೇರಿದನು. ಅಲ್ಲಿ ಮರದ ಮುಂಡಿಗೆಗಳಿಂದ ಕಟ್ಟಿದ ಒಂದು ಸಣ್ಣ ಗುಡಿಸಿಲಿನಲ್ಲಿ ಅವರಿಬ್ಬರೂ ಸಂಸಾರ ಮಾಡತೊಡಗಿದರು. ಆ ಗುಡಿಸಿಲು ೨೦ ಅಡಿ ಉದ್ದವೂ ೧೮ ಅಡಿ ಅಗಲವೂ ಇದ್ದಿತು. ಪ್ರೇಮಾತಿಶಯದಿಂದ ತುಂಬಿ ತುಳುಕುತ್ತಿದ್ದ ಅವರ ಮನಸ್ಸಿಗೆ ಕೊಠಡಿಗಳಿಲ್ಲದ ಆ ಗುಡಿಸಿಲೇ ರಾಜ ಭವನವಾಗಿದ್ದಿತು. ಅಲ್ಲಿಯೇ ಆ ದಂಪತಿಗಳು ಒಂಬತ್ತು ವರ್ಷ ಕಾಲ ಸುಖದಿಂದಿರುವಲ್ಲಿ, ಅವರಿಗೆ ಒಂದು ಗಂಡು ಮಗುವೂ ಎರಡು ಹೆಣ್ಣು ಮಕ್ಕಳೂ ಜನಿಸಿದುವು. ಗಂಡು ಮಗುವಿಗೆ ಥಾಮಸ್ ಗಾರ್‌ಫೀಲ್ಡ್ ಎಂಬ ಹೆಸರನ್ನೂ ದೊಡ್ಡ ಮಗಳಿಗೆ ಮೆಹಿಟಾಬೆಲ್ ಎಂಬ ಹೆಸರನ್ನೂ ಇಟ್ಟರು. ವಿವೇಕಿಗಳಾದ ಆ ದಂಪತಿಗಳು ಮಿತ ವ್ಯಯದಿಂದ ಕೊಂಚ ಹಣವನ್ನು ಶೇಖರ ಮಾಡಿಟ್ಟುಕೊಂಡಿದ್ದರು. ಆದರೂ ಮೂರು ಮಕ್ಕಳೊಡನೆ ಆ ಚಿಕ್ಕ ಮನೆಯಲ್ಲಿ ಸಂಸಾರ ಮಾಡುವುದು ಕಷ್ಟವಾಯಿತು. ಅವರಿದ್ದ ನ್ಯೂಬರ್ಗಿಗೆ ಪಶ್ಚಿಮದಲ್ಲಿ ಒಂದು ದೊಡ್ಡ ಕಾಡಿದ್ದಿತು. ಅಲ್ಲಿ ಆರೆಂಜೆಂಬ ಹೆಸರಿನ ಪಾಳೆಯವೊಂದು ಸ್ಥಾಪಿತವಾಗುತ್ತಿದ್ದು, ಸರ್ಕಾರದವರು ತಮ್ಮ ದೇಶವನ್ನು ಉತ್ತಮ ಸ್ಥಿತಿಗೆ ತರಬೇಕೆಂದು ಅಲ್ಲಿಯ ಜಮೀನುಗಳನ್ನು ಬಹಳ ಸುಲಭ ಕ್ರಯಕ್ಕೆ ಕೊಡುತ್ತಿದ್ದುದಲ್ಲದೆ, ರೈತರಿಗೆ ಅನೇಕ ಅನುಕೂಲ್ಯಗಳನ್ನೂ ಕಲ್ಪಿಸಿ ಕೊಡುತ್ತಿದ್ದರು. ಎಲಿಜೆಯ ತಂಗಿಯು ತನ್ನ ಗಂಡನಾದ ಏಮಾಸಿನೊಡನೆ ಅಲ್ಲಿಗೆ ಹೊರಟಿದ್ದಳು. ಈ ಸಂದರ್ಭದಲ್ಲಿ ಏಬ್ರಾಮನು ತನ್ನ ಹೆಂಡತಿಯೊಡನೆ ಆಲೋಚನೆ ಮಾಡಿ, ತಾನೂ ತನ್ನ ಷಡ್ಡಕನ ಜೊತೆಯಲ್ಲಿ ವಾಸಮಾಡುವುದಕ್ಕೆ ಹೊರಡಲು ಸಿದ್ಧನಾದನು. ಆ ಪ್ರದೇಶದಲ್ಲಿ ಐವತ್ತು ಎಕರೆಯ ಕಾಡೊಂದನ್ನು, ಎಕರೆಗೆ ಎರಡು ಡಾಲರುಗಳಂತೆ, ಬೆಲೆಗೆ ತೆಗೆದುಕೊಂಡು ಏಬ್ರಾಮನು ಅಲ್ಲಿಗೆ ಹೊರಟನು.

ಆರೆಂಜ್ ಎಂಬ ಪಾಳೆಯದಲ್ಲಿ ಏಬ್ರಾಮನು ತನ್ನ ಷಡ್ಡಕನೊಡನೆ ಒಂದೇ ಗುಡಿಸಿಲಿನಲ್ಲಿ ಕೆಲವು ಕಾಲ ವಾಸಮಾಡಿಕೊಂಡಿದ್ದನು. ಸಂಸಾರವು ಬೆಳೆಯುತ್ತಿದ್ದುದರಿಂದ ಏಬ್ರಾಮನಿಗೆ ಇದಕ್ಕಿಂತಲೂ ಸ್ವಲ್ಪ ದೊಡ್ಡದಾದ ಮನೆಯು ಬೇಕಾಗಿದ್ದಿತು. ಆದುದರಿಂದ ಆತನು ತನ್ನ

ಸಂಸಾರಕ್ಕಾಗಿಯೇ ೨೦ ಅಡಿಯ ಉದ್ದವೂ ೨೦ ಅಡಿಯ ಅಗಲವೂ ಇರುವ ಗುಡಿಸಿಲೊಂದನ್ನು ಕಟ್ಟಲಾರಂಭಿಸಿದನು. ಗೋಡೆಯನ್ನು ಕಟ್ಟುವುದಕ್ಕೆ, ಇಟ್ಟಿಗೆಗೆ ಬದಲಾಗಿ ಮರದ ತುಂಡುಗಳನ್ನು ಉಪಯೋಗಿಸಿದನು. ಚಳಿಗೂ ಗಾಳಿಗೂ ತಡೆಯಾಗಿರುವಂತೆ ತುಂಡುಗಳ ಮಧ್ಯದಲ್ಲಿದ್ದ ಸಂದುಗಳಿಗೆ ಮಣ್ಣನ್ನು ಮೆತ್ತಿದನು. ಮುಂಭಾಗದಲ್ಲಿ ಆ ಮನೆಯು ೧೨ ಅಡಿಯಷ್ಟೂ ಹಿಂಭಾಗದಲ್ಲಿ ೮ ಅಡಿಯಷ್ಟೂ ಎತ್ತರವಾಗಿದ್ದಿತು. ಆತನು ಮನೆಗೆ ಒಂದು ಬಾಗಿಲನ್ನೂ ಮೂರು ಕಿಟಕಿಗಳನ್ನೂ ಇಟ್ಟು ಒಳಗಡೆ ಒಂದು ಮೂಲೆಯಲ್ಲಿ ಅಡಿಗೆಯೊಲೆಯನ್ನು ಹಾಕಿ, ಹೊಗೆಯು ಹೋಗುವುದಕ್ಕೆ ಬೆಳಕು ಮಾಳಿಗೆಯನ್ನು ಕಟ್ಟಿದನು; ಇನ್ನೊಂದು ಮೂಲೆಯಲ್ಲಿ ಒಂದು ಅಟ್ಟವನ್ನು ಕಟ್ಟಿ, ಹುಲ್ಲನ್ನು ಹಾಸಿ, ಮಕ್ಕಳಿಗೆ ಮಲಗುವ ಸ್ಥಳವನ್ನು ಮಾಡಿ, ಬಾಚಿಯಿಂದ ಕೆತ್ತಿದ ಕೊರಡುಗಳನ್ನು ನೆಲಕ್ಕೆ ಹಾಸಿದನು; ಮೇಲು ಛಾವಣಿಗೆ ಉದ್ದವಾದ ಗುಂಡು ರಂಬೆಗಳನ್ನುಪಯೋಗಿಸಿ, ಅವುಗಳು ತೊಂಗದಿರುವಂತೆ ಅಲ್ಲಲ್ಲಿ ಕವಲುರೆಂಬೆಗಳನ್ನು ನಟ್ಟು ಅಡ್ಡ ತೊಲೆಯನ್ನು ಹಾಕಿದನು. ಆ ಮನೆಯು ಬೇಸಗೆಯಲ್ಲಿ ತಣ್ಣಗೂ, ಮಾಗಿಯಲ್ಲಿ ಬೆಚ್ಚಗೂ ಇದ್ದಿತು. ಇಂತಹ ಕಟ್ಟಿಗೆಯ ಗುಡಿಸಿಲಿನಲ್ಲಿ ೧೮೩೧ನೆಯ ಇಸವಿಯ ನವೆಂಬರು ೧೯ರಲ್ಲಿ ಆ ದಂಪತಿಗಳಿಗೆ ನಾಲ್ಕನೆಯ ಮಗುವಾದ ನಮ್ಮ ಕಥಾನಾಯಕನು ಹುಟ್ಟಿದನು.

ಈ ಮಗುವಿಗೆ ಜೇಮ್ಸ್ ಏಬ್ರಾಮ್ ಗಾರ್ಫೀಲ್ಡ್ ಎಂದು ನಾಮಕರಣ ಮಾಡಿದರು. ಜೇಮ್ಸ್ಸಿಗೆ ಹದಿನೆಂಟು ತಿಂಗಳು ತುಂಬುವ ಸಮಯದಲ್ಲಿ ಬೇಸಗೆಯು ಪ್ರಾರಂಭವಾಯಿತು. ಆ ಬೇಸಗೆಯಲ್ಲಿ ಒಂದು ದಿನ ಕಾಡು ಕಿಚ್ಚಿನ ಪ್ರಭೆಯು ದೂರದಲ್ಲಿ ಗೋಚರವಾಯಿತು. ಆಗ ಗಾಳಿಯ ಗತಿಯನ್ನು ಪರೀಕ್ಷಿಸುವಲ್ಲಿ, ಆ ಕಿಚ್ಚು ಏಬ್ರಾಮನ ಮನೆಯ ಕಡೆಗೆ ಬರುವಂತೆ ತೋರಬಂದಿತು. ಕಾಡಿನಲ್ಲಿ ಕಟ್ಟಿದ್ದ ಮರದ ಮನೆಗಳು ಅನೇಕವಾಗಿ ಕಿಚ್ಚಿನಿಂದ ಸುಟ್ಟು ಬೂದಿಯಾಗಿದ್ದುದನ್ನು ಏಬ್ರಾಮನು ಕಂಡಿದ್ದನು. ಹೇಗಾದರೂ ಮಾಡಿ ತನ್ನ ಮನೆಯನ್ನು ಉಳಿಸಿಕೊಳ್ಳುವುದು ಅವನಿಗೆ ಅತ್ಯಾವಶ್ಯಕವಾದ ಕೆಲಸ

ವಾಯಿತು. ಕಾಯ ಪುಷ್ಟಿಯುಳ್ಳ ಏಬ್ರಾಮನು ಸನಿಕೆಯನ್ನು ತೆಗೆದು ಕೊಂಡು ತನ್ನ ಮಕ್ಕಳಲ್ಲಿಬ್ಬರನ್ನು ಸಹಾಯಕ್ಕೆ ಕರೆದುಕೊಂಡು, ಕಿಚ್ಚನ್ನು ತಡೆಯಬೇಕೆಂಬ ದೃಢ ಸಂಕಲ್ಪ ಮಾಡಿ ಹೊರಟನು. ಕಿಚ್ಚು ಹತ್ತಿರ ಹತ್ತಿರಕ್ಕೆ ಬರಸಾಗಿತು. ಏಬ್ರಾಮನು ಆಯಾಸವನ್ನು ಲಕ್ಷಿಸದೆ ತನ್ನ ಸಾಹಸವನ್ನು ದ್ವಿಗುಣಿಸಿದನು. ಒಂದೊಂದು ವೇಳೆ ಅವನ ಪ್ರಯತ್ನಗಳು ನಿಷ್ಫಲವಾಗುವಂತೆ ಕಾಣಬಂದುವು. ಆದರೂ ಧೈರ್ಯಗುಂದದೆ ಕಿಚ್ಚಿನೊಡನೆ ಹೆಣಗಾಡಿ ಅದನ್ನು ತನ್ನ ಮನೆಯ ಕಡೆಗೆ ಬಾರದಂತೆ ತಡೆದನು. ಮೈಯೆಲ್ಲ ಬೆವತು ಆಯಾಸದಿಂದ ಬೆಂಡಾಗಿ ಹೋಯಿತು. ಆತನು ತಂಗಾಳಿಗೆ ತನ್ನ ಮೈಯನ್ನೊಡ್ಡಿ ವಿಶ್ರಮಿಸಿಕೊಂಡನು. ಗಾಳಿಯ ಶೈತ್ಯವು ಕ್ಷಣ ಕ್ಷಣಕ್ಕೆ ಹೆಚ್ಚಿತು. ರಾತ್ರಿಯ ಹೊತ್ತಿಗೆ ಏಬ್ರಾಮನ ಮೈಯಲ್ಲಿ ನೋವು ಹುಟ್ಟಿ ಗಂಟಲು ಕಟ್ಟಿಕೊಂಡಿತು; ವ್ಯಥೆಯು ಹೆಚ್ಚುತ್ತ ಬಂದಿತು; ರೋಗವು ಬಲಿಯಿತು. ಸಮೀಪದಲ್ಲಿ ಬುದ್ಧಿವಂತರಾದ ವೈದ್ಯರಾರೂ ಇರಲಿಲ್ಲ. ಬೆಳಗಾದ ಮೇಲೆ ನೆರೆಯ ಸಾಮಾನ್ಯ ಜನರು ಬಂದು ಮಾಡಿದ ಚಿಕಿತ್ಸೆಯಿಂದ ಗುಣವಾವುದೂ ತೋರಲಿಲ್ಲ. ಎಲಿಜೆಯು ತನ್ನ ಅಸಾಧಾರಣವಾದ ಪ್ರೀತಿ ಸಹನೆಗಳೊಡನೆ ಪತಿ ಶುಶ್ರೂಷೆಯನ್ನು ಮಾಡಿದಳು. ಯಾವ ಪ್ರಯತ್ನವೂ ಫಲಿಸಲಿಲ್ಲ. ಕೊನೆಗೆ ಏಬ್ರಾಮನು ತನ್ನ ಪ್ರಿಯ ಪತ್ನಿಯನ್ನು ದೃಷ್ಟಿಸಿ ನೋಡುತ್ತ, "ಪ್ರಿಯೇ! ನಾವು ಕೋಮಲವಾದ ಸಸಿಗಳು ನಾಲ್ಕನ್ನು ಕಾಡಿನಲ್ಲಿ ತಂದಿಟ್ಟಿರುವೆವು; ಅವುಗಳ ಲಾಲನ ಪಾಲನೆಗಳು ನಿನ್ನನ್ನೇ ಸೇರಿವೆ. ನಿನಗೆ ಸಹಾಯಕನಾಗಿರುವ ಭಾಗ್ಯವನ್ನು ದೇವರು ನನಗೆ ಕರುಣಿಸಲಿಲ್ಲ" ಎಂದು ಹೇಳಿ ಪ್ರಾಣವನ್ನು ಬಿಟ್ಟನು.

ಆಹಾ! ದೈವ ಸಂಕಲ್ಪವನ್ನು ಯಾರು ತಾನೇ ಮೀರಲಾಪರು? ತನ್ನ ತಂದೆಗಾದಂತೆಯೇ ಜೇಮ್ಸನಿಗೂ ಬಾಲ್ಯದಲ್ಲಿಯೇ ಪಿತೃವಿಯೋಗವುಂಟಾಯಿತು. ಬಾಲ್ಯಾವಸ್ಥೆಯಲ್ಲಿದ್ದುದೇ ಆ ಮಗುವಿಗೆ ಒಂದು ಭಾಗಕ್ಕೆ ಒಳ್ಳೆಯದಾಯಿತು: ಗಂಡನಲ್ಲಿ ಅಷ್ಟು ಪ್ರೇಮವನ್ನಿಟ್ಟಿದ್ದ ತನ್ನ ತಾಯಿಗೆ ಬಂದೊದಗಿದ ಸಂತಾಪವನ್ನು ಆ ಶಿಶುವು ಅರಿಯಲಿಲ್ಲ.

ಸುಖ ಸಂತೋಷಗಳಿಂದ ನಲಿಯುತ್ತಿದ್ದ ಆ ಮನೆಗೆ ಬಂದ ಕಷ್ಟ ಪರಂಪರೆಗಳನ್ನು ವರ್ಣಿಸಲು ಸುಲಭವಲ್ಲ. ಎಲಿಜೆಗೆ ದೈವ ಸಹಾಯವೊಂದೇ ಉಳಿಯಿತು. ಸುತ್ತಲೂ ಹತ್ತು ಮೈಲಿಯ ದೂರದಲ್ಲಿ ನಾಲ್ಕಾರೇ ಮನೆಗಳಿದ್ದುವು. ಆ ನೆರೆಯವರ ಸಹಾಯದಿಂದ ಎಲಿಜೆಯು ತನ್ನ ಪತಿಯ ದೇಹವನ್ನು ತಮ್ಮ ಗೋದುವೆಯ ಹೊಲದ ಒಂದು ಮೂಲೆಯಲ್ಲಿ ಹೂತು, ಕಣ್ಣೀರ ಕಾಲುವೆಯನ್ನು ಹರಿಸಿದಳು. ಆ ಸಾಧ್ವೀ ಮಣಿ ತನ್ನ ಪತಿಯ ಆಜ್ಞೆಯನ್ನು ನಡೆಯಿಸಲು ಕಂಕಣಬದ್ಧಳಾಗಿ, ತನ್ನ ದುಃಖವನ್ನು ತನ್ನ ಮಕ್ಕಳಿಗೆ ಲೇಶವೂ ತೋರಿಸದೆ ಅವರನ್ನು ಸಲಹುತ್ತ ಬಂದಳು.

. ಕಾಲ ಚಕ್ರದ ಗತಿಯನ್ನು ತಡೆಯುವರಾರು? ಮಾಗಿಯ ಕಾಲವು ಪ್ರಾಪ್ತವಾಯಿತು. ಘನೀಭೂತವಾದ ಹಿಮವು ರಾಶಿ ರಾಶಿಯಾಗಿ ಬಿದ್ದಿತು. ಮನೆಯೊಳಗೆ ದಾರಿದ್ರ್ಯದ ಹಾವಳಿ! ಹೊರಗಡೆ ತೋಳ ಕಿರುಬಗಳ ಕಾಟ! ವಾಸ ಸ್ಥಾನವು ಕಾಡು! ನೆರೆಯವರಿರುವುದು ದೂರದಲ್ಲಿ! ಈ ಕಷ್ಟಗಳ ಜೊತೆಗೆ ಮತ್ತೊಂದು ಕಷ್ಟವೂ ತಲೆದೋರಿತು. ಎಲಿಜೆಯು ಎಷ್ಟೆಷ್ಟು ಮಿತ ವ್ಯಯವನ್ನು ಮಾಡಿದರೂ ಮಕ್ಕಳಿಗೆ ಹೊಟ್ಟೆ ತುಂಬುವಂತೆ ಆಹಾರವನ್ನು ಕೊಡುವುದಕ್ಕೂ ಅವಕಾಶವು ಕಡಿಮೆಯಾಯಿತು. ವೀರ ಮಾತೆಯಾದುದರಿಂದ ಈ ಕಷ್ಟ ಪರಂಪರೆಗಳನ್ನೆಲ್ಲ ತಾಳ್ಮೆಯೊಡನೆ ಸಹಿಸಿಕೊಂಡು ಆಕೆಯು ಮಕ್ಕಳನ್ನು ಸಲಹುತ್ತ ಬಂದಳು. ಆದರೆ ಸಾಲಗಾರರ ತಗಾದೆಯು ಹೆಚ್ಚಿತು. ಆಗ ಎಲಿಜೆಯು ತನ್ನ ತಂಗಿಯ ಗಂಡನಾದ ಏಮಾಸಿಗೆ ತನ್ನ ದುಃಖ ಪರಂಪರೆಯನ್ನು ವಿವರಿಸಿದಳು. ಅವರಿಬ್ಬರಿಗೂ ಕೆಳಗೆ ವಿವರಿಸುವ ಸಂವಾದವು ನಡೆಯಿತು :—

ಏಮಾಸ್.—ಅಮ್ಮಾ! ನಿನ್ನ ಕಷ್ಟಗಳು ಸಾಧಾರಣವಾದ್ದುವುಗಳಲ್ಲ. ನಾಲ್ಕು ಸಣ್ಣ ಮಕ್ಕಳನ್ನು ಕಟ್ಟಿಕೊಂಡು ನೀನು ಜಮೀನಿನ ಸಾಗುವಳಿಯನ್ನು ಮಾಡಲಾರೆ. ಇರುವ ಆಸ್ತಿಯನ್ನು ಮಾರಿ ಸಾಲವನ್ನು ತೀರಿಸಿ ಉಳಿದ ಹಣದೊಡನೆ ನಿನ್ನ ಬಂಧುಗಳನ್ನು ಸೇರುವುದೇ ಮೇಲಲ್ಲವೆ?

ಎಲಿಜೆ.—ಏನು! ನನ್ನ ಪತಿಯನ್ನು ಆ ಗೋರಿದುವೆಯ ಹೊಲದ ಮೂಲೆಯಲ್ಲಿಯೇ ಬಿಟ್ಟು ನಾನು ಮಾತ್ರ ಹೊರಟು ಹೋಗಬೇಕೇ? ಅದು ನನ್ನಿಂದ ಆಗದ ಕೆಲಸ.

ಏಮಾಸ್.—ಹಾಗಾದರೆ ಏನು ಮಾಡಬೇಕೆಂದಿದ್ದೀಯೆ?

ಎಲಿಜೆ.—ನನ್ನ ದುರವಸ್ಥೆಯನ್ನು ಕೇಳು: ಇರುವ ಆಸ್ತಿಯನ್ನು ಮಾರಿ ಸಾಲವನ್ನು ತೀರಿಸಿದ ಮೇಲೆ ನನ್ನ ಪ್ರಯಾಣಕ್ಕೆ ಸಾಕಾಗುವಷ್ಟು ಮಾತ್ರ ಹಣವು ಮಿಗುವುದು. ಹೋದೆಡೆಯಲ್ಲಿ ಅಂಗೈಯಗಲ ಭೂಮಿಯನ್ನು ಕೊಳ್ಳುವುದಕ್ಕೂ ನನ್ನ ಹತ್ತಿರ ಹಣವು ಮಿಗುವುದಿಲ್ಲ.

ಏಮಾಸ್.—ನಿನ್ನ ನಂಟರಿಷ್ಟರು ನಿನಗೆ ಸಹಾಯವನ್ನು ಮಾಡಬಹುದಲ್ಲಾ!

ಎಲಿಜೆ.—ನಂಟರಿಷ್ಟರ ದಾನ ಧರ್ಮವನ್ನು ನೆಮ್ಮಿ ನಾನಿರಲಾರೆನು. ಆರೋಗ್ಯವೊಂದಿದ್ದರೆ ಮಕ್ಕಳ ಸಂರಕ್ಷಣೆಗಾಗಿ ದುಡಿಯುವುದಕ್ಕೆ ದೇವರ ದಯೆಯಿಂದ ನನಗೆ ತಕ್ಕಷ್ಟು ಶಕ್ತಿಯುಂಟಾಗಬಹುದೆಂದು ದೃಢವಾಗಿ ನಂಬಿದ್ದೇನೆ. ನನ್ನ ಪತಿಯು ಪ್ರಾಣವನ್ನು ತೆತ್ತು ನಮಗೆ ಈ ಮನೆಯನ್ನು ಉಳಿಸಿರುವನು. ಇದರಲ್ಲಿರುವ ಒಂದೊಂದು ಮರದ ತುಂಡೂ ನನ್ನ ಭಾಗಕ್ಕೆ ಪವಿತ್ರ ವಸ್ತುವಾಗಿದೆ. ನನ್ನ ಪತಿಯ ಸಮಾಧಿಯನ್ನೂ ಈ ಮನೆಯನ್ನೂ ಆಣಿಯಾಗಿಟ್ಟುಕೊಂಡಿರಬೇಕೆಂದು ನನಗೆ ಆಸೆಯಿದೆ.

ಏಮಾಸ್.—ಹಾಗಾದರೆ ನೀನು ಭೂಮಿಯನ್ನು ಮಾರುವುದೇ ಇಲ್ಲವೊ?

ಎಲಿಜೆ.—ಎಲ್ಲವನ್ನೂ ಮಾರುವುದಿಲ್ಲ; ಸಾಲವನ್ನು ತೀರಿಸುವುದಕ್ಕೆ ಎಷ್ಟನ್ನು ಮಾರಬೇಕೊ ಅಷ್ಟನ್ನು ಮಾತ್ರ ಮಾರುವೆನು.

ಏಮಾಸ್.— ಆ ಆಲೋಚನೆ ನನಗೆ ಹೊಳೆಯಲಿಲ್ಲ. ನಿನ್ನ ಭೂಮಿಗೆ ಸರಿಯಾದ ಗಿರಾಕಿಯನ್ನು ಹೊಂದಿಸಿ ಕೊಡುತ್ತೇನೆ. ಈ ವಿಚಾರದಲ್ಲಿ ನೀನೂ ಆಲೋಚನೆಯನ್ನು ಮಾಡುತ್ತಿರು.

ಹೀಗೆ ಹೇಳಿ ಏಪರಾಸನು ಹೊರಟುಹೋದನು. ಬಳಿಕ ಎಲಿಜೆಯು ಪರಮ ಭಕ್ತಿಯಿಂದ, "ಜಗನ್ನಿಯಾಮಕನೇ! ಪರಮ ದಯಾಳುವೇ! ಅನಾಥೆಯಾದ ನನಗೆ ನೀನೇ ಗತಿ; ನಿನ್ನ ಸಂಕಲ್ಪವು ನನಗೆ ತೋರಿಬರುವುದಾದರೆ ಅದರಂತೆಯೇ ನಡೆದುಕೊಳ್ಳುವೆನು; ದಾರಿಯನ್ನು ತೋರಿಸು"-ಎಂದು ಅನನ್ಯ ಭಾವದಿಂದ ಪ್ರಾರ್ಥಿಸಿದಳು. ಉತ್ತರ ಕ್ಷಣದಲ್ಲಿಯೇ ಅವಳ ಬುದ್ಧಿಗೆ ಏನೋ ತೋರಿ ಹರ್ಷವುಂಟಾಗಿ ಧೈರ್ಯವು ಹೆಚ್ಚಿತು.

ಆಗ ಎಲಿಜೆ ತನ್ನ ದೊಡ್ಡ ಮಗನಾದ ಥಾಮಸ್ಸನನ್ನು ಕರೆದು, ಸಂಸಾರದ ತೊಂದರೆಗಳನ್ನು ತಿಳಿಯಿಸಿ, ಅವನ ಸಲಹೆಯನ್ನು ಕೇಳಿದಳು. ಅವನು ಹದಿಮೂರೇ ವರ್ಷದವನಾದರೂ ಅನುಭವಶಾಲಿಯಂತೆ ಮಾತಾಡತೊಡಗಿದನು.

ಥಾಮಸ್ಸ್.—ಅಮ್ಮಾ! ನಾನು ಹೊಲವನ್ನು ಳುತ್ತೇನೆ, ಪೈರು ಹಾಕುತ್ತೇನೆ, ಮರವನ್ನು ಕಡಿಯುತ್ತೇನೆ, ಹಾಲನ್ನು ಕರೆಯುತ್ತೇನೆ, ದನಗಳನ್ನು ಕಾಯುತ್ತೇನೆ, ಇದಲ್ಲದೆ ನೀನು ಹೇಳುವ ಇತರ ಕೆಲಸಗಳನ್ನೂ ಮಾಡುತ್ತೇನೆ; ಚಿಂತಿಸದೆ ಧೈರ್ಯದಿಂದಿರು.

ಎಲಿಜೆ.—(ಮುಗುಳು ನಗೆಯೊಡನೆ) ನೀನು ಇನ್ನೂ ಮಗು; ಒಂಟಿಯಾಗಿ ಎಲ್ಲ ಕೆಲಸವನ್ನೂ ನಿರ್ವಹಿಸಲಾರೆ. ನಾವಿಬ್ಬರೂ ಸೇರಿ ಕೆಲಸ ಮಾಡೋಣ. (ವ್ಯಸನದೊಡನೆ) ನೋಡು! ನಿಮ್ಮ ತಂದೆಯು ಕಟ್ಟಿದ ಈ ಮನೆಯನ್ನು ಬಿಟ್ಟುಹೋಗಬೇಕೆಂದರೆ ನನಗೆ ಕಾಲೇ ಬರುವುದಿಲ್ಲ.

ಥಾಮಸ್ಸ್.—ನನಗೂ ಬರುವುದಿಲ್ಲ. ಈ ಮನೆಯನ್ನು ಬಿಟ್ಟು ನಾವೇಕೆ ಹೋಗಬೇಕು? ಕಷ್ಟಪಟ್ಟು ಚೆನ್ನಾಗಿ ಕೆಲಸ ಮಾಡುತ್ತೇನೆ, ಚಿಂತಿಸಬೇಡ.

ಎಲಿಜೆಯು ಸಂತುಷ್ಟಳಾದಳು. ಕಾಲ ಕ್ರಮದಲ್ಲಿ ಬೇಸಗೆಯು ಬಂದಿತು. ಭೂಮಿಯನ್ನು ಬೆಲೆಗೆ ತೆಗೆದುಕೊಳ್ಳುವುದಕ್ಕೆ ಸರಿಯಾದ

ಗಿರಾಕಿಯೂ ದೊರೆತನು. ಎಲಿಜೆಯು ಇಪ್ಪತ್ತು ಎಕರೆಯನ್ನು ಮಾರಿ ತನಗಿದ್ದ ಸಾಲವನ್ನೆಲ್ಲ ತೀರಿಸಿದಳು. ಥಾಮಸ್ಸು ನೆರೆಯ ಗೃಹಸ್ಥನೊಬ್ಬನಿಂದ ಒಂದು ಕುದುರೆಯನ್ನು ತಂದು ನೆಲವನ್ನುತ್ತು ಗೋದುವೆ, ಉರುಳುಗೆಡ್ಡೆ, ಕಾಯಿಪಲ್ಯ ಮುಂತಾದುವುಗಳನ್ನು ಬೆಳೆಯಲು ಭೂಮಿಯನ್ನು ಹದ ಮಾಡಿದನು; ತಾಯಿಗೆ ಮಾತು ಕೊಟ್ಟಂತೆಯೇ ಪ್ರಾತಃಕಾಲದಿಂದ ಸಾಯಂಕಾಲದ ವರೆಗೂ ದುಡಿಯುತ್ತಿದ್ದನು. ಈ ಬಾಲಕನ ಕಾರ್ಯತತ್ಪರತೆಯನ್ನು ಕಂಡು ನೆರೆಯವರು ಬೆರಗಾದರು. ತಾಯಿಯೂ ತಂಗಿಯೂ ತಂತಮ್ಮ ಶಕ್ತಿಮೀರಿ ಅವನಿಗೆ ಸಹಾಯ ಮಾಡುತ್ತ ಬಂದರು. ಎಲ್ಲರೂ ಕಲೆತು ಗೋದುವೆಯನ್ನು ಬಿತ್ತಿ ಹೊಲದ ಸುತ್ತಲೂ ಬೇಲಿಯನ್ನು ಹಾಕಿದರು; ಒಳ್ಳೆಯ ಬೆಳೆಯು ಕೈಸೇರುವುದೆಂಬ ನಂಬಿಕೆಯುಂಟಾಯಿತು. ಅಷ್ಟರಲ್ಲಿಯೇ ಎಲಿಜೆಗೆ ಬೇರೊಂದು ಚಿಂತೆಯು ಪ್ರಾಪ್ತವಾಯಿತು. ಮನೆಯಲ್ಲಿದ್ದ ಗೋದುವೆಯು ಪೂರಯಿಸುತ್ತ ಬಂದಿತು; ಬೇರೆ ಕೊಂಡುಕೊಳ್ಳಲು ಕೈಯಲ್ಲಿ ಹಣವಿರಲಿಲ್ಲ. ಎಚ್ಚರಿಕೆಯಿಂದ ದಿನಗಟ್ಟಲೆಯ ತಿಂಡಿಯನ್ನು ಕಡಿಮೆ ಮಾಡಿದ ಹೊರತು ಮನೆಯಲ್ಲಿದ್ದ ಗೋದುವೆಯು ಸುಗ್ಗಿಯ ಕಾಲದ ವರೆಗೆ ಸಾಕಾಗುವಂತೆ ತೋರಲಿಲ್ಲ. ಆಗ ಎಲಿಜೆಯು ಲೆಕ್ಕವನ್ನು ಹಾಕಿ ನೋಡಿದಳು. ತಾನು ದಿನವೂ ಮೂರು ಹೊತ್ತು ಊಟ ಮಾಡುವುದನ್ನು ಬಿಟ್ಟು ಎರಡೇ ಹೊತ್ತು ಊಟ ಮಾಡಬೇಕೆಂದು ತೋರಿತು; ರಾತ್ರಿಯ ಊಟವನ್ನು ಬಿಡುವಂತೆ ಗೊತ್ತುಮಾಡಿಕೊಂಡಳು. ಆದರೆ ಇದನ್ನು ಮಕ್ಕಳಿಗೆ ತಿಳಿಸಲಿಲ್ಲ. ಹೆಂಗುಸಾದರೂ ಗಂಡಾಳಿಗಿಂತ ಹೆಚ್ಚಾಗಿ ಕೆಲಸ ಮಾಡುತ್ತಿದ್ದ ಆಕೆಯು ರಾತ್ರಿಯ ಊಟವನ್ನು ಬಿಟ್ಟಿರುವುದು ಪ್ರಯಾಸವಾಯಿತು. ಆದರೆ, ಮಾಡಿದ ಸಂಕಲ್ಪವನ್ನು ಸಾಧಿಸಿದಳು. ಹೀಗೆ ಎರಡು ವಾರಗಳು ಕಳೆದುವು. ಉಳಿದ ಗೋದುವೆಯನ್ನು ನೋಡುವಲ್ಲಿ, ತಾನು ಹಾಕಿದ್ದ ಲೆಕ್ಕವು ತಪ್ಪೆಂದು ಆಕೆಗೆ ಗೊತ್ತಾಯಿತು. ಒಂದು ಹೊತ್ತಿನ ಊಟವನ್ನು ಬಿಟ್ಟಿರುವುದೇ ಕಷ್ಟವಾಗಿರುವಲ್ಲಿ ಮತ್ತೊಂದು ಹೊತ್ತಿನ ಊಟವನ್ನೂ ಬಿಡಬೇಕಾಗಿ ಬಂದಿತು. ತರುವಾಯ, ದಿನಕ್ಕೆ ಒಂದೇ ಹೊತ್ತು ಊಟಮಾಡಿ ಜೀವಿಸುತ್ತ

ಮಕ್ಕಳಿಗೆ ತನ್ನ ಕಷ್ಟವನ್ನು ಸ್ವಲ್ಪವೂ ತೋರ್ಪಡಿಸದೆ, ಪತಿಯ ಆಜ್ಞಾನುಸಾರವಾಗಿ ಆಕೆಯು ಮಕ್ಕಳನ್ನು ಸಾಕುತ್ತಿದ್ದಳು. ಆತ್ಮ ಸುಖ ತ್ಯಾಗವೂ ಪತಿ ವಾಕ್ಯ ಪರಿಪಾಲನಾ ತತ್ಪರತೆಯೂ ಮಕ್ಕಳ ಮೇಲಣ ಮಮತೆಯೂ ಧೈರ್ಯಸ್ಥೈರ್ಯಾದಿ ಗುಣಗಳೂ ದೈವ ಭಕ್ತಿಯೂ ಆ ಸತ್ಕುಲ ಪ್ರಸೂತೆಯಲ್ಲಿ ಇಲ್ಲದಿದ್ದ ಪಕ್ಷಕ್ಕೆ ೧೮೩೩ಳಸೆಯ ಇಸವಿಯಲ್ಲಿಯೇ ಗಾರ್ಫೀಲ್ಡನ ಮನೆತನವು ಕೊನೆಗಾಣುತ್ತಿದ್ದಿತು.

ಆ ವರ್ಷ ಎಲಿಜೆಯ ಹೊಲದಲ್ಲಿ ಅತಿಶಯವಾದ ಬೆಳೆಯಾಯಿತು. ಅದನ್ನು ನೋಡಿ ನೋಡಿ ಆಕೆಯು ಹಿಗ್ಗಿದಳು. "ಭಗವಂತನು ಅನಾಥ ರಕ್ಷಕನೇ ಸರಿ! ಮರೆ ಹೊಕ್ಕವರನ್ನು ತೊರೆಯುವವನಲ್ಲವೆಂಬುದೂ ಸುಳ್ಳಲ್ಲ. ದೇವರನ್ನು ನಂಬಿದವರು ಕೆಡುವುದಿಲ್ಲ" ಎಂದು ಹೇಳಿ ಕೊಳ್ಳುತ್ತ ಆಕೆಯು ಪರಮ ಭಕ್ತಿಯಿಂದ ಜಗದ್ರಕ್ಷಕನನ್ನು ನಿತ್ಯವೂ ಸ್ತುತಿಸುತ್ತಿದ್ದಳು.

ಎಲಿಜೆಯು ಸತ್ಕುಲ ಪ್ರಸೂತೆಯೆಂದು ನಾವು ಹೇಳಿರುವುದು ಅತಿಶಯೋಕ್ತಿಯಲ್ಲ. ಸುಮಾರು ಇನ್ನೂರು ವರ್ಷಗಳಿಂದಲೂ ಆಕೆಯ ಮನೆತನದವರು ಉತ್ತರ ಅಮೆರಿಕಾ ಖಂಡದಲ್ಲಿ ಸನ್ಮಾನಿತರಾಗಿ ಬಾಳಿದವರು: ಕೆಲವರು ಧರ್ಮೋಪದೇಶಕರಾಗಿದ್ದರು; ಉಳಿದವರು ವೈದ್ಯರಾಗಿಯೋ ವಕೀಲರಾಗಿಯೋ ಅಧಿಕಾರಿಗಳಾಗಿಯೋ ಬಾಳಿ, ಸದ್ಗುಣ ಶಿಖಾಮಣಿಗಳೆಂಬ ಖ್ಯಾತಿಯನ್ನು ಪಡೆದಿದ್ದರು. ಅವರಲ್ಲಿ ಕೆಲವರು ಬಡವರಾದರೂ ತಮ್ಮ ಸದ್ವರ್ತನೆಯನ್ನಾಗಲಿ ಸತ್ಯಸಂಧತೆಯನ್ನಾಗಲಿ ದೈವ ಭಕ್ತಿಯನ್ನಾಗಲಿ ಬಿಟ್ಟಿರಲಿಲ್ಲ. ಹೀಗಿದ್ದುದರಿಂದ, ದೈವ ಭಕ್ತಿಯೂ ಸತ್ಯ ಸಂಧತೆಯೂ ಕಷ್ಟ ಸಹಿಷ್ಣುತೆಯೂ ಕಾರ್ಯ ತತ್ಪರತೆಯೂ ವಿವೇಕವೂ ಕಾರ್ಯ ನಿರ್ವಾಹ ಶಕ್ತಿಯೂ ಧೈರ್ಯ ಸ್ಥೈರ್ಯಗಳೂ ಎಲಿಜೆಯಲ್ಲಿ ನೆಲೆಗೊಂಡಿದ್ದುದು ಸಹಜವಾಗಿಯೇ ಇದ್ದಿತು.

## ಅಧ್ಯಾಯ - ೩

# ಸದ್ವರ್ತನೆಯ ಶಿಕ್ಷೆ ಮತ್ತು ಅಕ್ಷರಾಭ್ಯಾಸ

ಆ ಕಾಲದಲ್ಲಿ ಆರೆಂಜೆಂಬ ಪಾಳೆಯದ ಪ್ರಾಂತದಲ್ಲಿ ಸ್ಥಿರವಾದ ಪಾಠ ಶಾಲೆ ಯಾವುದೂ ಇರಲಿಲ್ಲ. ಎಲಿಜೆಯು ಮನೆಯಲ್ಲಿಯೇ ತನ್ನ ಮಕ್ಕಳಿಗೆ ಸ್ವಲ್ಪ ಸ್ವಲ್ಪ ಓದು ಬರೆಹಗಳನ್ನು ಕಲಿಸುತ್ತಿದ್ದುದಲ್ಲದೆ, ಶ್ರದ್ಧಾಪೂರ್ವಕವಾಗಿ ದೈವ ಭಕ್ತಿಯನ್ನೂ ಸದ್ವರ್ತನೆಯನ್ನೂ ಬಾಲ್ಯದಿಂದಲೂ ಅವರಲ್ಲಿ ಬೆಳೆಯಿಸುತ್ತಿದ್ದಳು. ಆ ಕಾಡಿಗೆ ಬರುವುದಕ್ಕೆ ಮೊದಲು ಥಾಮಸ್ಸೂ ಹುಡುಗಿಯರೂ ಕೆಲವು ಕಾಲ ಪಾಠಶಾಲೆಗೆ ಹೋಗುತ್ತಿದ್ದರು. ಆರೆಂಜೆಂಬ ಪಾಳೆಯಕ್ಕೆ ಬಂದು ನಿಂತಮೇಲೆ ಅದೂ ತಪ್ಪಿ ಹೋಯಿತು. ಹೀಗೆ ಕೆಲವು ವರ್ಷಗಳು ಕಳೆದನಂತರ ಒಂದು ದಿನ ಅವರ ಮನೆಗೆ ಸುಮಾರು ಒಂದೂವರೆ ಮೈಲಿಯ ದೂರದಲ್ಲಿ ಪಾಠಶಾಲೆಯೊಂದು ಸ್ಥಾಪಿತವಾಗುವುದೆಂಬ ಸುದ್ದಿಯು ತಿಳಿಯಬಂದಿತು. ಅದು ನಿಜವೆಂದು ತಿಳಿದ ಕೂಡಲೆ ಥಾಮಸ್ಸು, "ಅಮ್ಮಾ! ಇನ್ನುಮೇಲೆ ಜೇಮ್ಸ್ ಪಾಠಶಾಲೆಗೆ ಹೋಗಬೇಕು, ಸುಮ್ಮನಿರುವುದು ಸರಿಯಲ್ಲ" ಎಂದನು. "ಅಪ್ಪಾ! ನೀನೂ ಹೋಗುವುದಕ್ಕನುಕೂಲವಾದರೆ ಚೆನ್ನಾಗಿರುತ್ತದೆ" ಎಂದು ಎಲಿಜೆಯು ಹೇಳಿದಳು. "ಅಹುದು, ಚೆನ್ನಾಗಿಯೇ ಇರುತ್ತದೆ; ಆದರೆ ಈಗ ನಾನು ಉರುಳುಗೆಡ್ಡೆಯನ್ನು ಅಗೆಯಬೇಕು, ನೆಲವನ್ನುಳಬೇಕು; ಪಾಠಶಾಲೆಗೆ ಹೋದರೆ ಇವುಗಳನ್ನು ಮಾಡುವವರು ಯಾರು? ಜೇಮ್ಸೂ ಹುಡುಗಿಯರೂ ಪಾಠಶಾಲೆಗೆ ಹೋಗಲಿ, ಎಲ್ಲರಿಗೂ ಅನ್ನ ಬಟ್ಟೆಗಳನ್ನು ಒದಗಿಸಿಕೊಡುವ ಭಾರವು ನನಗಿರಲಿ" ಎಂದು ಥಾಮಸ್ಸು ಉತ್ಸಾಹದಿಂದ ಹೇಳಿದನು. ಹಿರಿಯ ಮಗನ ಸ್ವಾರ್ಥ ತ್ಯಾಗ ಬುದ್ಧಿಯನ್ನು ನೋಡಿ ಎಲಿಜೆಯು ಸಂತೋಷಪಟ್ಟಳು.

ಎಲಿಜೆಯು ಜೇಮ್ಸ್‌ಗೆ ಇದುವರೆಗೂ ಯಾವುದನ್ನೂ ವಿಶೇಷವಾಗಿ ಕಲಿಸಿರಲಿಲ್ಲ. ಇತರರಾಡುವ ಮಾತುಗಳನ್ನೂ ತನ್ನ ತಾಯಿ ಹೇಳುವ ಬೈಬಲ್ಲಿನ ಕಥೆಗಳನ್ನೂ ಕೇಳಿ ಕೇಳಿ ಅವನು ಇತರ ಹುಡುಗರಿಗಿಂತಲೂ

ಹೆಚ್ಚಾದ ತಿಳಿವಳಿಕೆಯುಳ್ಳವನಾಗಿದ್ದನು. ಅವನಿಗೆ ಅಸಾಧಾರಣವಾದ ಜ್ಞಾಪಕ ಶಕ್ತಿಯಿದ್ದಿತು. ವಿಷಯಗಳನ್ನು ಗ್ರಹಿಸುವುದಕ್ಕಾಗಿ ಅವನು ನೂರಾರು ಪ್ರಶ್ನೆಗಳನ್ನು ಹಾಕುತ್ತಿದ್ದನು. ಅವನ ಚಟುವಟಿಕೆಯನ್ನೂ ವಿಚಾರ ಪರತೆಯನ್ನೂ ನೋಡಿ ಎಲ್ಲರೂ ಅವನು ಪ್ರಖ್ಯಾತ ಪುರುಷನಾಗುವನೆಂದು ಹೇಳುತ್ತಿದ್ದರು. ಹೀಗಿರುವಲ್ಲಿ, ಅವನು ಮನೆಯವರಿಗೆ ಅಚ್ಚುಮೆಚ್ಚಾಗಿದ್ದುದು ಆಶ್ಚರ್ಯವಲ್ಲ.

ಜೇಮ್ಸನನ್ನು ಪಾಠಶಾಲೆಗೆ ಕಳುಹಿಸುವುದು ಉಚಿತವೆಂದು ಮನೆಯವರೆಲ್ಲರೂ ನಿಶ್ಚಯಿಸಿದರು. ''ಮೂರು ವರ್ಷ ವಯಸ್ಸಿನ ಜೇಮ್ಸ್ ಒಂದೂವರೆ ಮೈಲಿ ದೂರ ನಡೆದು ಪಾಠಶಾಲೆಗೆ ಹೋಗುವುದು ಸಾಧ್ಯವಲ್ಲ; ಏನು ಮಾಡಬೇಕು?'' ಎಂದು ತಾಯಿಯೂ ಅಣ್ಣನೂ ಆಲೋಚಿಸುತ್ತಿದ್ದಾಗ, ''ಇದಕ್ಕೇಕೆ ಇಷ್ಟು ಆಲೋಚನೆ? ಅವನನ್ನು ನಾನು ಎತ್ತಿಕೊಂಡು ಹೋಗುತ್ತೇನೆ'' ಎಂದು ಅವನ ಅಕ್ಕನಾದ ಮೆಹಿಟಾಬೆಲಿಯು ಹೇಳಿದಳು. ''ಅದು ನಿನಗೆ ಸಾಧ್ಯವಲ್ಲ'' ಎಂದು ಎಲಿಜೆಯೂ ಥಾಮಸ್ಸೂ ಹೇಳಲು, ''ಹಾಗೇಕೆನ್ನುವಿರಿ? ಅವನೇನು ಭಾರ? ನಾನು ಸುಲಭವಾಗಿ ಎತ್ತಿಕೊಂಡು ಹೋಗುತ್ತೇನೆ, ನೀವು ಚಿಂತಿಸದಿರಿ'' ಎಂದಳು. ಎಲಿಜೆಯೂ ಥಾಮಸ್ಸೂ ನಗುತ್ತ, ''ಆಗಲಮ್ಮಾ, ಜೇಮ್ಸ್ ಒಂದು ಹುಲ್ಲುಕಡ್ಡಿಯಷ್ಟು ಹಗುರವಾಗಿದ್ದಾನೆ. ನೀನು ಅವನನ್ನು ಎತ್ತಿಕೊಂಡು ಹೋಗಬಹುದು, ನಾವು ಯಾರೂ ಆಕ್ಷೇಪಿಸುವುದಿಲ್ಲ'' ಎಂದು ಉತ್ತರಕೊಟ್ಟರು.

ಪಾಠಶಾಲೆಯು ಪ್ರಾರಂಭವಾದ ದಿವಸ ಮೆಹಿಟಾಬೆಲಿಯು ಸಡಗರದಿಂದ ಜೇಮ್ಸನನ್ನು ಹೆಗಲ ಮೇಲೆ ಕುಳ್ಳಿರಿಸಿಕೊಂಡು ಹೊರಟಳು. ಆ ದಿವಸ ಆ ಮನೆಯಲ್ಲಿ ಎಲ್ಲರೂ ಆನಂದದಿಂದಿದ್ದರು. ಥಾಮಸ್ಸಿನ ಸಡಗರವೂ ಅತಿಶಯವಾಗಿದ್ದಿತು. ಅವನು ಬಹಳ ಉತ್ಸಾಹದಿಂದ ಮನೆಯ ಕೆಲಸಗಳೆಲ್ಲವನ್ನೂ ಮಾಡಿದನು.

ಮಕ್ಕಳು ಪಾಠಶಾಲೆಗೆ ಹೊರಟುಹೋದ ಮೇಲೆ ಎಲಿಜೆಯು ಗೃಹಕೃತ್ಯಗಳನ್ನು ನೋಡಿಕೊಂಡು ಮಕ್ಕಳ ಬಟ್ಟೆಗಳಿಗಾಗಿ ಹತ್ತಿ

ಯನ್ನು ನೂಲುವುದಕ್ಕೆ ಕುಳಿತಳು. ಸಾಯಂಕಾಲವಾಗುತ್ತ ಬಂದಿತು. ಹಾಡನ್ನು ಹೇಳುತ್ತ ಎಲಿಜೆಯು ರಾಟೆಯನ್ನು ಗಿರ್ರನೆ ತಿರುಗಿಸು ತ್ತಿರುವಾಗ ಪಾಠಶಾಲೆಗೆ ಹೋಗಿದ್ದ ಮಕ್ಕಳು ಓಡುತ್ತ ಬಂದು ಮನೆಯೊಳಗೆ ಒಟ್ಟಾಗಿ ನುಗ್ಗಿ ಅತ್ಯಾತುರದಿಂದ, "ಅಮ್ಮಾ ಅಮ್ಮಾ! ಬಲು ಸೊಗಸಾಗಿದ್ದಿತು! ಈ ಹೊತ್ತು" ಎಂದು ಒಬ್ಬ ಹುಡುಗಿಯು ಹೇಳುವಷ್ಟರಲ್ಲಿಯೇ ಮತ್ತೊಬ್ಬಳು, "ಇಪ್ಪತ್ತು ಮಂದಿ ಹುಡುಗರಿದ್ದರು; ಎಷ್ಟೋ ಮಂದಿ ಹುಡುಗರು ನಮಗಿಂತಲೂ ದೂರ ದಿಂದ ನಡೆದು ಬರುತ್ತಾರೆ" ಎಂದು ಹೇಳಿದಳು. ಜೇಮ್ಸ್ ಈ ಮಾತುಗಳನ್ನು ಕೇಳುತ್ತ ತನ್ನ ತಾಯಿಯನ್ನಪ್ಪಿಕೊಂಡು ಆಕೆಯ ಹಿಂದುಗಡೆ ನಿಂತಿದ್ದನು. ಮಕ್ಕಳು ಒಟ್ಟೊಟ್ಟಿಗೆ ಮಾತಾಡುವುದನ್ನು ಕೇಳಲು ಎಲ್ಲರಿಗೂ ಹಿತವಲ್ಲವೆ! ಮಕ್ಕಳ ಆತುರವು ಕಡಿಮೆಯಾದ ಮೇಲೆ ಎಲಿಜೆಯು, "ಸರಿ, ಜೇಮ್ಸ್‌ಗೆ ಪಾಠಶಾಲೆಯು ಹೇಗಿದ್ದಿತು? ಅಲ್ಲಿ ಅವನು ಏನೇನು ಮಾಡಿದನು?" ಎಂದು ಕೇಳಿದಳು. ಅದಕ್ಕೆ ಒಬ್ಬ ಹುಡುಗಿಯು, "ಅವನಿಗೂ ಚೆನ್ನಾಗಿದ್ದಿತು, ನಮಗೂ ಚೆನ್ನಾ ಗಿದ್ದಿತು. ಅವನು ಅಕ್ಷರಗಳೆಲ್ಲವನ್ನೂ ಬಾಯಿಂದ ಹೇಳಿದನು. ಉಪಾಧ್ಯಾಯರು ಅ ಎಂದು ಬರೆಯಲು, ಜೇಮ್ಸ್ "ಇದು ಅ ಎಂದು ನಿಮಗೆ ಹೇಗೆ ಗೊತ್ತು? ಎಂದು ಉಪಾಧ್ಯಾಯರನ್ನೇ ಕೇಳಿಬಿಟ್ಟನು" ಎಂದು ಹೇಳಿದಳು. ಆಗ ತಾನೆ ಮನೆಯೊಳಗೆ ಬಂದ ಥಾಮನ್ನು, "ಅದೇ ಅವನ ಸ್ವಭಾವ; ಜೇಮ್ಸ್‌ಗೆ ಉತ್ತರ ಕೊಡುವುದರಲ್ಲಿ ಉಪಾ ಧ್ಯಾಯನು ಬಳಲಿಹೋಗುವನು. ಆ ಸಂಗತಿ ಹಾಗಿರಲಿ; ಉಪಾ ಧ್ಯಾಯನು ಜೇಮ್ಸ್‌ನ ಪ್ರಶ್ನೆಗೆ ಏನುತ್ತರ ಕೊಟ್ಟನು?" ಎಂದು ಕೇಳಿದುದಕ್ಕೆ ಆ ಹುಡುಗಿಯು, "ನಾನು ನಿನ್ನಷ್ಟು ಹುಡುಗನಾಗಿ ದ್ದಾಗ ನನ್ನ ಉಪಾಧ್ಯಾಯರು ನನಗೆ ಹಾಗೆ ಹೇಳಿಕೊಟ್ಟರು ಎಂದು ಉತ್ತರಕೊಟ್ಟರು" ಎಂದು ಹೇಳಿದಳು. ಈ ರೀತಿಯಲ್ಲಿ ಆ ದಿನದ ಪಾಠಶಾಲೆಯ ವೃತ್ತಾಂತವನ್ನು ಮಕ್ಕಳು ತಿಳಿಸಿದನಂತರ ಎಲಿಜೆಯು, "ಮಕ್ಕಳಿರಾ! ನೀವು ಪಾಠಶಾಲೆಯಲ್ಲಿ ಉಪಾಧ್ಯಾಯರಿಗೆ ವಿಧೇಯ ರಾಗಿ ನಡೆದುಕೊಂಡು ಅಕ್ಕರೆಯಿಂದ ಪಾಠಗಳನ್ನು ಕಲಿಯಿರಿ. ಈ

ಕಾಡಿನಲ್ಲಿ ಪಾಠಶಾಲೆಗಳು ಸಿಕ್ಕುವುದೇ ಕಷ್ಟ. ಅವಕಾಶವು ದೊರೆತಾಗ ನಾವು ಸಾಧ್ಯವಾಗುವಷ್ಟು ಪ್ರಯೋಜನವನ್ನು ಪಡೆಯುವುದಕ್ಕೆ ಪ್ರಯತ್ನಿಸಬೇಕು '' ಎಂದು ಬುದ್ಧಿವಾದವನ್ನು ಹೇಳಿದಳು.

ಮಕ್ಕಳು ಪಾಠಶಾಲೆಗೆ ಕ್ರಮವಾಗಿ ಹೋಗುತ್ತಿದ್ದರು. ಜೇಮ್ಸ್‌ಗಿದ್ದ ಅಸಾಧಾರಣವಾದ ಜ್ಞಾಪಕ ಶಕ್ತಿಯನ್ನೂ ಅವನಿಗಿದ್ದ ಬೈಬಲ್ಲಿನ ಕಥಾ ಪರಿಚಯವನ್ನೂ ವಿಷಯ ಗ್ರಹಣಕ್ಕಾಗಿ ಅವನು ಹಾಕುತ್ತಿದ್ದ ಅನೇಕಾನೇಕ ಪ್ರಶ್ನೆಗಳನ್ನೂ ನೋಡಿ ಸರ್ವರೂ ಇವನು ಅಸಾಧಾರಣವಾದ ಪ್ರಜ್ಞೆಯುಳ್ಳ ಹುಡುಗನು ಎಂದು ಶ್ಲಾಘಿಸುತ್ತಿದ್ದರು. ಪಾಠಶಾಲೆಯ ಬಾಲಕರೆಲ್ಲರೂ ಜೇಮ್ಸ್‌ನ ಕಥೆಗಳನ್ನು ಕೇಳಿ ಬೆರಗಾಗಿ ಅವನಲ್ಲಿ ವಿಶೇಷ ಪ್ರೀತಿಯನ್ನಿಟ್ಟಿದ್ದರು. ಅನೇಕ ವೇಳೆ ದೊಡ್ಡ ಹುಡುಗರು ಆ ನಾಲ್ಕು ವರ್ಷದ ವಯಸ್ಸಿನ ಬಾಲಕನನ್ನು ಮೇಜಿನ ಮೇಲೆ ಕುಳ್ಳಿರಿಸಿ, '' ನೀನೇ ಉಪಾಧ್ಯಾಯನಂತೆ, ನಾವೇ ಶಿಷ್ಯರಂತೆ. ಪ್ರಶ್ನೆಗಳನ್ನು ಹಾಕಿರಿ, ಉಪಾಧ್ಯಾಯರೇ! '' ಎಂದು ಆಟವನ್ನಾಡುತ್ತಿದ್ದರು. ಬೈಬಲ್ಲಿನ ಕಥಾ ಭಾಗದಲ್ಲಿ ಜೇಮ್ಸ್ ಹಾಕುತ್ತಿದ್ದ ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಕೊಡುವುದು ದೊಡ್ಡವರಿಗೂ ಸುಲಭವಾಗಿರಲಿಲ್ಲ; ಉತ್ತರವನ್ನು ಕೊಡುವುದಕ್ಕೆ ದೊಡ್ಡ ಹುಡುಗರಿಗೆ ಬಾರದಿದ್ದಾಗ ತಾನೇ ಸದುತ್ತರವನ್ನು ಕೊಡುತ್ತಿದ್ದನು. ಅವನಿಗೆ ಅತಿಶಯವಾದ ಅನುಕರಣ ಶಕ್ತಿಯೂ ಇದ್ದಿತು. ಅಸಾಧಾರಣವಾದ ಜ್ಞಾಪಕ ಶಕ್ತಿ, ಅತಿಶಯವಾದ ಅನುಕರಣ ಶಕ್ತಿ, ಭಾವ ಪ್ರದರ್ಶಕ ಶಕ್ತಿ—ಈ ಮೂರೂ ಶಕ್ತಿಗಳು ಜೇಮ್ಸ್‌ಗಿದ್ದುದರಿಂದ ದೊಡ್ಡ ಹುಡುಗರು ಪಾಠಶಾಲೆಯಲ್ಲಿ ಒಪ್ಪಿಸಿದ ಪಾಠಗಳನ್ನು ತನ್ನ ಮನೆಯವರ ಮುಂದೆ ಅವನು ಅನುಕರಿಸಿ ಪ್ರದರ್ಶಿಸುತ್ತಿದ್ದನು. ಈ ಶಕ್ತಿತ್ರಯವು ಮುಂದಿನ ಏಳಿಗೆಗೆ ಚಿಹ್ನೆಯೆಂದು ಭಾವಿಸಿ ಎಲಿಜೆಯು ಅವನನ್ನು ಪ್ರೋತ್ಸಾಹಿಸಿದಳು.

ಹೀಗೆ ಪಾಠಶಾಲೆಯಲ್ಲಿ ಮೂರು ತಿಂಗಳು ಕಳೆಯಿತು. ಚಳಿಗಾಲ ಬರಲು, ಜೇಮ್ಸ್ ಮನೆಯಲ್ಲಿಯೇ ನಿಂತನು; ಹುಡುಗಿಯರು ಮಾತ್ರ ಶಾಲೆಗೆ ಹೋಗುತ್ತಿದ್ದರು. ಆ ಕಾಲದಲ್ಲಿ ಮೇಣದ ಬತ್ತಿಯೇ ಆಗಲಿ ಕೈದೀಪಗಳೇ ಆಗಲಿ ಆ ಪ್ರಾಂತದಲ್ಲಿ ಸುಲಭದ ಬೆಲೆಗೆ ಸಿಕ್ಕುತ್ತಿರಲಿಲ್ಲ.

ಚಳಿಗಾಲದಲ್ಲಿ ಹಿಮವು ರಾಶಿ ರಾಶಿಯಾಗಿ ಬೀಳುತ್ತಿದ್ದಿತು. ಮನೆಯು ಬೆಚ್ಚಗಿರಬೇಕೆಂದು ಒಂದು ಗೊತ್ತಾದ ಸ್ಥಳದಲ್ಲಿ ಬೆಂಕಿಯನ್ನುರಿಸುತ್ತಿದ್ದರು. ಆ ಬೆಂಕಿಯೇ ಮನೆಗೆ ಶಾಕವನ್ನೂ ಬೆಳಕನ್ನೂ ಕೊಡುತ್ತಿದ್ದಿತು. ಈ ಬೆಳಕಿನಲ್ಲಿ ಕುಳಿತು ಜೇಮ್ಸ್ ಅಕ್ಷರ ಸಂಯೋಜನವನ್ನು ಬಹು ಶ್ರದ್ಧೆಯಿಂದ ಕಲಿಯುತ್ತಿದ್ದನು. ಒಂದು ದಿನ ಒಂದು ಪುಸ್ತಕದಲ್ಲಿ, "ಮಳೆಯ ಹನಿಗಳು ಪಟ ಪಟನೆ ಉದುರಿದುವು" ಎಂಬ ವಾಕ್ಯವನ್ನು ಓದಿ ಬಹಳ ಸಂಭ್ರಮದಿಂದ ತನ್ನ ತಾಯನ್ನು ಕುರಿತು, "ಅಮ್ಮ ಅಮ್ಮ! ಮಳೆಯ ಹನಿಗಳು ಪಟ ಪಟನೆ ಉದುರಿದುವು ಎಂದು ಈ ಪುಸ್ತಕದಲ್ಲಿ ಬರೆದಿದೆ; ಇದು ನಿಜ, ನಾನು ಅದನ್ನು ಅನೇಕ ವೇಳೆ ಕೇಳಿದ್ದೇನೆ. ಮಾತುಗಳು ಬಂದರೆ, ನಡೆದ ಅನೇಕ ವಿಷಯಗಳನ್ನು ಹೇಳಬಹುದು" ಎಂದು ಹೇಳಿದನು. ತಾಯಿಯು, "ಅಹುದು ಮಗೂ! ನೀನು ಮಹಾ ಪಂಡಿತನಾಗುತ್ತೀಯೆ" ಎಂದು ಶ್ಲಾಘಿಸಿದಳು. ಪದಗಳು ವಸ್ತು ನಿರ್ದೇಶವನ್ನು ಮಾಡುವುದಲ್ಲದೆ ಕಾರ್ಯಗಳನ್ನೂ ವರ್ಣಿಸುವುವು ಎಂದೂ, ಭಾವ ಪ್ರದರ್ಶಕಗಳಾಗಿಯೂ ಇರುವುವೆಂದೂ, ಆಗತಾನೆ ಅವನ ಬುದ್ಧಿಗೆ ಹೊಳೆಯಿತು. ಇಂತಹ ಪದಗಳು ಪುಸ್ತಕಗಳಲ್ಲಿ ದೊರೆಯುವುದರಿಂದ ಜೇಮ್ಸ್ ಕಂಡ ಕಂಡ ಪುಸ್ತಕಗಳನ್ನು ಆದರದಿಂದೋದಿ ಅವುಗಳಲ್ಲಿಯ ಮುಖ್ಯಾಂಶಗಳನ್ನು ಗ್ರಹಿಸುತ್ತ ಬಂದನು; ಅವನ ಬುದ್ಧಿಯು ವಿಕಸಿತವಾಗುತ್ತ ಬಂದಿತು. ಮಗನ ವಿದ್ಯಾಸಕ್ತಿಯನ್ನೂ ದೃಢ ಸಂಕಲ್ಪವನ್ನೂ ನೋಡಿ ತಾಯಿಯು, ದೇವರ ಕೃಪೆಯೊಂದಿದ್ದರೆ ಈ ಮಗುವು ಪಂಡಿತನಾಗುವುದರಲ್ಲಿ ಸಂಶಯವಿಲ್ಲವೆಂದು ಹೇಳಿಕೊಂಡು ಸಂತೋಷಪಡುತ್ತಿದ್ದಳು.

ಎಲಿಜೆಯ ಮನಸ್ಸಿಗೆ ಸಂತೋಷವನ್ನುಂಟುಮಾಡಿದ ಇನ್ನೊಂದು ಸಂಗತಿಯನ್ನು ಇಲ್ಲಿ ಹೇಳಬೇಕಾಗಿದೆ: ೧೮೩೫ರಲ್ಲಿ ಎಲಿಜೆಯ ನೆರೆಗೆ ಇನ್ನೊಂದು ಸಂಸಾರವು ಬಂದು ಸೇರಿತು. ಆ ಮನೆಯವರಿಗೆ ಬಟ್ಟೆಗಳನ್ನು ಹೊಲಿಯುವುದಕ್ಕೂ ಉಳುಮೆಯ ಕೆಲಸಕ್ಕೂ ಇತರರ ಸಹಾಯವು ಬೇಕಾಗಿದ್ದಿತು. ಎಲಿಜೆಯ ಗಾಂಭೀರ್ಯವನ್ನೂ ಸದ್ವೃತ್ತಿಯನ್ನೂ ನೋಡಿ, ಅವರು ಹೊಲಿಗೆಯ ಕೆಲಸವನ್ನು ಆಕೆಗೆ ಕೊಡುತ್ತ

ಬಂದರು ; ಬೇಕಾದಾಗೆಲ್ಲ ಥಾಮುಸ್ಸನ್ನೇ ಕೂಲಿಯ ಕೆಲಸಕ್ಕೆ ಕರೆಯು ತ್ತಲೂ ಇದ್ದರು. ಇವುಗಳಿಂದ ಎಲಿಜೆಗೆ ಮನೆಯ ತಾಪತ್ರಯಗಳು ಕಡಿಮೆಯಾದುವು. ತಾಯಿಗೆ ಹಣವನ್ನು ಸಂಪಾದಿಸಿಕೊಡಲು ಇನ್ನೊಂದು ಮಾರ್ಗವು ಸಿಕ್ಕಿತೆಂದು ಥಾಮುಸ್ಸು ಸಂತೋಷಪಟ್ಟನು. ಮೊದಲನೆಯ ದಿನದ ಕೂಲಿಯನ್ನು ತೆಗೆದುಕೊಂಡು ಥಾಮುಸ್ಸು ಹಿಗ್ಗುತ್ತ ಮನೆಗೆ ಓಡಿಬಂದು, "ಅಮ್ಮಾ! ಈಗ ಪುಟ್ಟ ಜೇಮ್ಸ್‌ಗೆ ಒಂದು ಜೊತೆ ಬೂಟ್ಸನ್ನು ಮಾಡಿಸು ; ಮಗು ಹಿಮದಲ್ಲಿ ಬರಿಯ ಕಾಲಿನಿಂದ ಓಡಾಡುತ್ತಿದೆ ; ಬೂಟ್ಸಿಲ್ಲದೆ ಹಿಂದಿನ ಮಾಗಿಯಲ್ಲಿ ಅವನು ಪಾಠಶಾಲೆಗೆ ಹೋಗುವುದನ್ನು ನಿಲ್ಲಿಸಬೇಕಾಯಿತು" ಎಂದನು. ತಾಯಿಯು, "ಆಗಲಿ, ಮಾಡಿಸುತ್ತೇನೆ. ನಿನ್ನ ತಮ್ಮನಲ್ಲಿ ನಿನಗಿರುವ ಪ್ರೀತಿಯನ್ನು ನೋಡಿ ನನಗೆ ಬಹಳ ಸಂತೋಷವಾಗಿದೆ" ಎಂದು ಹೇಳಿದಳು. ಜೇಮ್ಸ್‌ಗೆ ಅದುವರೆಗೂ ಒಂದು ಜೊತೆ ಬೂಟ್ಸು ಕೂಡ ಇರಲಿಲ್ಲ. ಹೊಸ ಬೂಟ್ಸು ಬರುವ ಸುದ್ದಿಯನ್ನು ಕೇಳಿ ಅವನು ಸಂತೋಷದಿಂದ ಕುಣಿದಾಡಿದನು. ಮಾತನಾಡಿಸಿದವರಿಗೆಲ್ಲ, "ನನಗೆ ಹೊಸ ಜೊತೆ ಬೂಟ್ಸು ಬರುತ್ತದೆ, ನಮ್ಮಣ್ಣನು ಮಾಡಿಸಿಕೊಡು ತ್ತಾನೆ" ಎಂದು ಹೇಳುತ್ತಬಂದನು. ಆ ಕಾಲದಲ್ಲಿ ಆ ಪ್ರಾಂತದಲ್ಲ ಬೂಟ್ಸಿನ ಅಂಗಡಿಗಳು ಇರಲೇ ಇಲ್ಲ. ಮೋಚಿಯುವರು ಹಳ್ಳಿ ಹಳ್ಳಿಗೆ ಹೋಗಿ ಬೂಟ್ಸುಗಳನ್ನು ಮಾಡಿಕೊಟ್ಟು, ಅವರವರ ಮನೆಗಳಲ್ಲಿಯೇ ಊಟಮಾಡಿ, ಬೂಟ್ಸುಗಳ ಬೆಲೆಯನ್ನು ತೆಗೆದುಕೊಂಡು ಹೋಗು ತ್ತಿದ್ದರು. ಥಾಮುಸ್ಸು ಮೋಚಿಯುವನನ್ನು ಆರೆಂಜಿಗೆ ಕರೆಯಿಸಿ ಜೇಮ್ಸ್‌ಗೆ ಬೂಟ್ಸನ್ನು ಮಾಡಿಸಿಕೊಟ್ಟನು. ಅವುಗಳನ್ನು ಹಾಕಿಕೊಂಡು ಜೇಮ್ಸು ಹೆಮ್ಮೆಯಿಂದ ಓಡಾಡಿದನು ; ನೆರೆಯವರ ಮನೆಗಳಿಗೆ ಹೋಗಿ ತನ್ನ ಬೂಟ್ಸನ್ನು ತೋರಿಸಿ, "ಇವುಗಳನ್ನು ನಮ್ಮ ಅಣ್ಣನು ಮಾಡಿಸಿ ಕೊಟ್ಟನು" ಎಂದು ಹೇಳುತ್ತಬಂದನು. ಮೂವತ್ತು ವರ್ಷಗಳ ಮೇಲೆ ಸಂಯುಕ್ತ ಸಂಸ್ಥಾನದ ಕಾಂಗ್ರೆಸ್ ಸಭೆಗೆ ಪ್ರಜಾ ಪ್ರತಿನಿಧಿಗಳಿಂದ ಚುನಾಯಿಸಲ್ಪಟ್ಟಾಗ ಅನುಭವಿಸಿದ ಸಂತೋಷಕ್ಕಿಂತಲೂ ಹೆಚ್ಚಾದ ಸಂತೋಷವನ್ನು ಜೇಮ್ಸು ಈಗ ಅನುಭವಿಸಿದನೆಂದು ಹೇಳಬಹುದಾಗಿದೆ.

ಎಲಿಜೆಗೆ ಬೈಬಲ್ಲಿನಲ್ಲಿ ಸಂಪೂರ್ಣವಾದ ನಂಬಿಕೆಯೂ ಪ್ರೀತಿಯೂ ಇದ್ದಿತು. **ಡಿಸೈಪಲ್ಸ್** (ಶಿಷ್ಯಕೋಟಿ) ಎಂಬ ಹೆಸರಿನ ಕ್ರಿಸ್ತ ಪಂಗಡಕ್ಕೆ ಅವಳೂ ಅವಳ ಅನುಬಂಧಿಗಳೂ ಸೇರಿದ್ದರು. ಆ ಶಿಷ್ಯಕೋಟಿಯು ನಂಬಿದ್ದ ಸಿದ್ಧಾಂತಗಳು ಯಾವುವೆಂದರೆ:—

(೧) ಜಗತ್ಪಿತೃವೇ ಭಗವಂತನು.

(೨) ಭಗವಂತನ ಪುತ್ರನಾದ ಏಸುಕ್ರಿಸ್ತನ ಕೃಪೆಯಿಲ್ಲದೆ ಗತಿಯಿಲ್ಲ.

(೩) ಕ್ರಿಸ್ತನು ದೇವಾಂಶ ಪುರುಷನು.

(೪) ಭಗವದಂಶವು (Holy Spirit) ಪಾಪಿಷ್ಠರನ್ನು ಪುಣ್ಯಶಾಲಿಗಳನ್ನಾಗಿಯೂ ಸನ್ಮಾರ್ಗ ಪ್ರವರ್ತಕರನ್ನಾಗಿಯೂ ಮಾಡುವುದು.

(೫) ಬೈಬಲ್ಲಿನ ಪ್ರಾಚೀನ ನವೀನ ಭಾಗಗಳು (Old and New Testaments) ಅಪೌರುಷೇಯಗಳು.

(೬) ಮರಣಾನಂತರದಲ್ಲಿ ದುಷ್ಟರಿಗೆ ನರಕವೂ ಶಿಷ್ಟರಿಗೆ ಸ್ವರ್ಗವೂ ಬರುವುದು.

(೭) ದೇವರ ಭಜನೆಗೆ ತಕ್ಕ ಫಲವು ದೊರೆಯುವುದು.

(೮) ಬೈಬಲ್ಲಿನಲ್ಲಿರುವ ಮತವೊಂದೇ ನಂಬಿಕೆಗೆ ಅರ್ಹವಾದುದು.

ಮೇಲಣ ಸಿದ್ಧಾಂತಗಳೆಲ್ಲವನ್ನೂ ಎಲಿಜೆಯು ನಂಬಿದ್ದಳು. ನಂಬಿದುದನ್ನು ಆಚರಣೆಗೆ ತರುವುದು ಆಕೆಯ ಸ್ವಭಾವವಾಗಿದ್ದಿತು. ಕಾಪಟ್ಯವು ಆಕೆಯಲ್ಲಿ ಎಳ್ಳಷ್ಟೂ ಇರಲಿಲ್ಲ. ಇಂತಹ ಸುಶೀಲೆಯು ಜೇಮ್ಸ್‌ಗೆ ಪ್ರಥಮ ಗುರುವಾಗಿದ್ದುದು ಅವನ ಏಳಿಗೆಗೆ ಮುಖ್ಯಕಾರಣವಾಯಿತು. ಜೇಮ್ಸ್ ಎಲಿಜೆಯ ವಾಕ್ಯವನ್ನು ದೇವತಾ ವಾಕ್ಯವೆಂದು ಭಾವಿಸಿದ್ದನು.

## ಅಧ್ಯಾಯ ೪

# ಬಹುಮಾನವಾಗಿ ಬಂದ ಬೈಬಲ್ಲು

ಜೇಮ್ಸ್ ದೃಢಾಂಗನಾಗಿ ಬೆಳೆಯುತ್ತಿದ್ದನು. ಅವನಿಗೆ ಐದನೆಯ ವರ್ಷವು ನಡೆಯುತ್ತಿದ್ದಿತು. ಮಗುವನ್ನು ಮಾಗಿಯಲ್ಲಿ ದೂರದಲ್ಲಿರುವ ಪಾಠಶಾಲೆಗೆ ಎತ್ತಿಕೊಂಡು ಹೋಗಿಬರುವುದು ಕಷ್ಟವಾಗುತ್ತ ಬಂದಿತು. "ಪಾಠಶಾಲೆಯು ಸಮೀಪದಲ್ಲಿಯೇ ಇದ್ದರೆ ಇದರ ಕಷ್ಟವು ತಪ್ಪುವುದು, ಇದಕ್ಕೇನು ಮಾಡಲಿ?" ಎಂದು ಎಲಿಜೆಯು ಆಲೋಚಿಸಿ, ಸಮೀಪದಲ್ಲಿಯೂ ದೂರದಲ್ಲಯೂ ವಾಸವಾಗಿರುವ ನೆರೆಯವರ ಲೆಕ್ಕವನ್ನು ಹಾಕಿ, ಪಾಠಶಾಲೆಯನ್ನು ಕಟ್ಟುವುದಕ್ಕೆ ಆಗುವ ವೆಚ್ಚಮುಂತಾದುವನ್ನು ಗೊತ್ತುಮಾಡಿಕೊಂಡು, ತನ್ನ ತಂಗಿಯ ಗಂಡನಾದ ಏಮಾಸಿನೊಡನೆ ಪಾಠಶಾಲೆಯ ಪ್ರಸ್ತಾವವನ್ನು ಎತ್ತಿದಳು. "ಪಾಠಶಾಲೆಯನ್ನು ಕಟ್ಟುವ ಆಲೋಚನೆಯು ಫಲಿಸುವಂತೆ ತೋರುವುದಿಲ್ಲ; ಇಲ್ಲಿ ಪಾಠಶಾಲೆಯನ್ನು ಕಟ್ಟಿದರೆ ಕೆಲವರಿಗಂತೂ ಅದು ದೂರವಾಗಿಯೇ ಇರುತ್ತದೆ" ಎಂದು ಆತನು ಉತ್ತರಕೊಟ್ಟನು. "ಹಾಗಲ್ಲ; ಕೆಲವರಿಗೆ ದೂರವಾಗಿದ್ದರೂ ಬಹುಮಂದಿಗೆ ಹತ್ತಿರವಾಗಿರುವುದು. ನನ್ನ ಮಕ್ಕಳು ನಾಲ್ಕಿವೆ, ನಿನ್ನವು ಆರು; ನಾನು ನನ್ನ ಜಮೀನಿನಲ್ಲಿ ಕಟ್ಟಡಕ್ಕೆ ಸ್ಥಳವನ್ನು ಕೊಡುತ್ತೇನೆ. ಎಳೆಂಟು ಮಂದಿ ಆಳುಗಳು ಮೂರು ದಿವಸದ ಮಟ್ಟಿಗೆ ಕೆಲಸ ಮಾಡಿದರೆ ಮರದ ತುಂಡುಗಳ ಕಟ್ಟಡವೊಂದು ತಯಾರಾಗುವುದು. ಮಕ್ಕಳಿಗೆ ಪಾಠವನ್ನು ಅಕ್ಕರೆಯಿಂದ ಕಲಿಸುವುದಕ್ಕೆ ಒಬ್ಬ ಚತುರನಾದ ಉಪಾಧ್ಯಾಯನನ್ನು ನ್ಯೂಹ್ಯಾಂಪ್ಷೈರಿನಿಂದ ಮುಂದಿನ ಮಾಗಿಯ ಕಾಲಕ್ಕೆ ಕರೆಯಿಸುತ್ತೇನೆ; ನೆರೆಯವರೊಂದಿಗೆ ಆಲೋಚನೆಯನ್ನು ಮಾಡು; ಎಂಟು ಮನೆಯವರು ಒಪ್ಪಿದರೆ ಸಾಕು" ಎಂದು ಎಲಿಜೆಯು ಹೇಳಿದಳು. "ನೀನು ಹೇಳುವುದು ಉಚಿತವಾಗಿರುವಂತೆ ಕಾಣುತ್ತದೆ; ಆಲೋಚಿಸಿ ನೋಡುವಲ್ಲಿ ನಿನ್ನ ಪ್ರಯತ್ನವು ಫಲಿಸುವಂತೆಯೂ ತೋರುವುದು; ನಿನ್ನ ಸಲಹೆಯನ್ನು ಒಪ್ಪಿದೆನು; ನೆರೆಯವರೊಡನೆಯೂ ಮಾತಾಡುವೆನು" ಎಂದು ಏಮಾಸು ಎಲಿಜೆಗೆ ಹೇಳಿ ಹೊರಟುಹೋದನು.

ಸುಗುಣೆಯಾದ ಎಲಿಜೆಗೆ ಎಲ್ಲ ವಿಧದಲ್ಲಿಯೂ ಸಹಾಯ ಮಾಡಲು ಸಿದ್ಧರಾಗಿದ್ದ ನೆರೆಯವರು ಆಕೆಯ ಸಲಹೆಯನ್ನು ಕೊಂಡಾಡಿ ಆಕೆಯ ಜಮೀನಿನಲ್ಲಿ ಇಪ್ಪತ್ತೈದು ಮಂದಿ ವಿದ್ಯಾರ್ಥಿಗಳಿಗೆ ಅವಕಾಶವಿರುವಂತೆ ೨೦ ಅಡಿ ಚದುರವುಳ್ಳ ಮನೆಯೊಂದನ್ನು ಮರದ ತುಂಡುಗಳಿಂದ ಕೂಡಲೆ ಕಟ್ಟಿದರು. ನ್ಯೂಹ್ಯಾಂಪ್‌ಷೈರಿನಿಂದ ಒಬ್ಬ ಉಪಾಧ್ಯಾಯನೂ ಬಂದನು. ಉಪಾಧ್ಯಾಯರು ಒಂದೊಂದು ಮನೆಯಲ್ಲಿ ಕೆಲಕೆಲವು ದಿವಸ ಸರದಿಯ ಮೇರೆಗೆ ಊಟಮಾಡುತ್ತ ಪಾಠಶಾಲೆಯಲ್ಲಿ ಪಾಠ ಹೇಳುವ ಪದ್ಧತಿಯು ಅನೇಕ ವರ್ಷಗಳಿಂದ ಆ ಪ್ರಾಂತದಲ್ಲಿ ಆಚರಣೆಯಲ್ಲಿದ್ದಿತು. ಹೊಸದಾಗಿ ಬಂದ ಉಪಾಧ್ಯಾಯನಿಗೆ ಮೊದಲನೆಯ ಸರದಿ ಎಲಿಜೆಯ ಮನೆಯಲ್ಲಾಯಿತು. ಆತನು ವಿಶೇಷ ವಿದ್ಯಾವಂತನಲ್ಲದಿದ್ದರೂ ಉದಾರ ಮತಿಯಾಗಿಯೂ ಲೋಕ ಹಿತೈಷಿಯಾಗಿಯೂ ಇದ್ದನು; ಬಾಲಕರಿಗೆ ಉಪಕಾರ ಮಾಡಲು ತವಕ ಪಡುತ್ತಿದ್ದನು. ಜೇಮ್ಸನನ್ನು ನೋಡಿದೊಡನೆಯೇ ಆತನಿಗೆ ಅವನಲ್ಲಿ ವಿಶೇಷ ವಾತ್ಸಲ್ಯವುಂಟಾಯಿತು. ಪಾಠಶಾಲೆಗೆ ಜೇಮ್ಸನನ್ನು ಜೊತೆಯಲ್ಲಿ ಕರೆದುಕೊಂಡು ಹೋಗುತ್ತಿದ್ದಾಗ ಜೇಮ್ಸ್ ಸಿಪಾಯಿಯಂತೆ ದಾಪು ಕಾಲನ್ನು ಹಾಕಿಕೊಂಡು ಗಂಭೀರವಾಗಿ ನಡೆಯುತ್ತಿದ್ದುದನ್ನು ನೋಡಿ ಉಪಾಧ್ಯಾಯನು, "ಜಿಮ್ಮಾ! ಅಕ್ಕರೆಯಿಂದ ಓದಿದರೆ ನೀನೂ ಒಂದು ದಿನ ದಳವಾಯಿಯಾಗಬಹುದು" ಎಂದು ಹೇಳಿ ಬೆನ್ನುತಟ್ಟಿ ತನ್ನ ಪ್ರೀತಿಯನ್ನು ತೋರ್ಪಡಿಸಿದನು; ಜೇಮ್ಸಿಗೆ ಪರಮ ಸಂತೋಷವಾಯಿತು; ದಳವಾಯಿ ಎಂಬ ಪದಕ್ಕೆ ಅವನಿಗೆ ಅರ್ಥವು ಮಾತ್ರ ತಿಳಿಯಲಿಲ್ಲ. ಉಪಾಧ್ಯಾಯನು ಆ ಮಾತನ್ನು ಹೇಳಿ, ತನ್ನ ಬೆನ್ನಿನ ಮೇಲೆ ತಟ್ಟಿ ಪ್ರೀತಿಸಿದುದರಿಂದ, 'ದಳವಾಯಿ' ಎಂಬವನು ಬಹಳ ದೊಡ್ಡಮನುಷ್ಯನಾಗಿಯೇ ಇರಬೇಕೆಂದು ಅವನು ನಿಶ್ಚಯಿಸಿದನು; 'ದಳವಾಯಿ' ಎಂಬ ಶಬ್ದದ ಅರ್ಥವನ್ನು ಮನೆಗೆ ಹೋಗುತ್ತಲೆ ತಾಯಿಯನ್ನು ಕೇಳಿ ತಿಳಿದುಕೊಳ್ಳಬೇಕೆಂದು ಅವನು ತವಕಪಡುತ್ತಿದ್ದನು.

ಪಾಠಶಾಲೆಯಿಂದ ಮನೆಗೆ ಬಂದ ಕೂಡಲೆ ಜೇಮ್ಸ್ ತನ್ನ ತಾಯಿಯ ಬಳಿಗೆ ಓಡಿ ಹೋಗಿ, "ಅಮ್ಮಾ! ದಳವಾಯಿಯೆಂದರೇನು?

'ಅಕ್ಕರೆಯಿಂದ ಓದಿದರೆ ನೀನೂ ಒಂದು ದಿನ ದಳವಾಯಿಯಾಗ ಬಹುದು' ಎಂದು ಹೇಳಿ ನಮ್ಮ ಉಪಾಧ್ಯಾಯರು ನನ್ನ ಬೆನ್ನನ್ನು ತಟ್ಟಿದರಲ್ಲಾ! ಹಾಗೆಂದರೇನು?'' ಎಂದು ಕೇಳಿದನು. ಎಲಿಜೆಯು, ''ಮಗುವೇ! ದಳವಾಯಿಯು ಸೈನ್ಯಕ್ಕೆ ಅಧಿಪತಿ; ಅವನು ಯುದ್ಧ ಕಾಲದಲ್ಲಿ ಸೈನ್ಯವನ್ನು ನಡೆಯಿಸುವನು; ಅವನ ಆಜ್ಞೆಯಂತೆ ಲಕ್ಷೋಪ ಲಕ್ಷ ಶಿಪಾಯಿಗಳು ಯುದ್ಧ ಮಾಡುವರು. ಅವನು ಜರತಾರಿಯ ಕವಚವನ್ನು ಹಾಕಿಕೊಂಡು ಕುದುರೆಯನ್ನೇರಿ ಕೈಯಲ್ಲಿ ಕತ್ತಿಯನ್ನು ಹಿಡಿದಿರುವನು. ಸೈನಿಕರಿಗಾದರೋ ಸಾಮಾನ್ಯವಾದ ಉಡುಪಿರು ತ್ತದೆ. ಅವರು ಬಂದೂಕನ್ನು ಹಿಡಿದುಕೊಂಡು ನಡೆದು ಹೋಗುತ್ತಾರೆ. ನಮ್ಮ ವಂಶೀಯರಲ್ಲಿ ಯಾರೂ ಈಗಿನ ವರೆಗೆ ದಳವಾಯಿಯಾಗಿ ಬಾಳ ದಿದ್ದರೂ, ಅನೇಕರು ದಳವಾಯಿಗೆ ಕಡಿಮೆಯಾದ ಅಧಿಕಾರದಲ್ಲಿದ್ದು ಮಾತೃಭೂಮಿಯ ಸೇವೆಯನ್ನು ಮಾಡಿ ಪ್ರಖ್ಯಾತರಾಗಿದ್ದಾರೆ. ನಮ್ಮ ದೇಶವು ಈಗ ನೆಮ್ಮದಿಯಾಗಿದೆ; ಯುದ್ಧ ಸಂಭವವು ಇಲ್ಲ. ಸಾವಿರಾರು ಜನರನ್ನು ನಿಮಿಷ ಮಾತ್ರದಲ್ಲಿ ಕೊಲ್ಲುವ ಆ ಯುದ್ಧವೆಂಬುದು ಘೋರ ವಾದುದು. ನೀನು ಪಂಡಿತನಾಗಿ, ಕೀರ್ತಿವಂತನಾಗಿ, ನರವಧೆಯನ್ನು ಮಾಡದೆಯೇ, ದಳವಾಯಿಯಂತೆ ಖ್ಯಾತಿವಂತನಾಗಬಹುದು. ನಿಮ್ಮ ಪೂರ್ವಿಕರು ಮಾನವ ಪಶುಗಳಾಗಿರಲಿಲ್ಲ; ಧೀರರೆನಿಸಿಕೊಂಡು ಲೋಕ ಮಾನ್ಯರಾಗಿ ಬಾಳಿದರು. ನಿಮ್ಮ ಮುತ್ತಜ್ಜನಾದ ಸಾಲೊಮನ್ ಗಾರ್‌ಫೀಲ್ಡ್ ಎಂಬಾತನು ನಮ್ಮ ದೇಶದ ಸ್ವಾತಂತ್ರ್ಯ ಪದವಿಗಾಗಿ ಹಿಂದೆ ನಡೆದ ಮಹಾ ಕದನದಲ್ಲಿ ಗಣ್ಯನಾಗಿದ್ದನು. ನಿಮ್ಮಜ್ಜನಾದ ಥಾಮಸ್ ಗಾರ್‌ಫೀಲ್ಡನು ನ್ಯೂಯಾರ್ಕ್ ಸಂಸ್ಥಾನದ ಕಾಡುಗಳನ್ನೂ, ನಿಮ್ಮ ತಂದೆಯಾದ ಏಬ್ರಾಮ್ ಗಾರ್‌ಫೀಲ್ಡನು ಓಹಿಯೋ ಸಂಸ್ಥಾನದ ಕಾಡುಗಳನ್ನೂ ಊರುಗಳನ್ನಾಗಿ ಮಾಡುವ ಕಾರ್ಯದಲ್ಲಿ ಪ್ರಥಮ ಪ್ರವರ್ತಕರಾಗಿದ್ದರು. ಧೀರನಾದ ನಿಮ್ಮ ತಂದೆಯು ಅಕಾಲ ಮೃತ್ಯು ವಿಗೆ ತುತ್ತಾದುದರಿಂದ, ನಾವು ಈ ರಿಕ್ತ ಸ್ಥಿತಿಯಲ್ಲಿ ಕಷ್ಟಪಡುತ್ತಿದ್ದೇವೆ. ನೀನು ದಳವಾಯಿಯಾಗುವ ಪಕ್ಷಕ್ಕೆ, ನಿಮ್ಮ ಪೂರ್ವಿಕರೆಲ್ಲರಿಗಿಂತಲೂ ಖ್ಯಾತಿವಂತನಾಗುವೆ. ಮಾತೃಭೂಮಿಯ ಕ್ಷೇಮಕ್ಕಾಗಿ ಪ್ರಾಣ

ವನ್ನು ತೆರುವುದಕ್ಕೆ ಎಲ್ಲರೂ ಸಿದ್ಧರಾಗಿಯೇ ಇರಬೇಕು '' ಎಂದಳು. ತಾಯಿಯ ಮಾತುಗಳನ್ನು ಜೇಮ್ಸ್ ಸ್ತಬ್ಧನಾಗಿ ನಿಂತು ಕೇಳಿದನು. ಅವನ ಕಣ್ಣುಗಳು ಹೊಳೆಯುತ್ತಿದ್ದುವು, ಮೈ ಹುರಿದುಂಬಿತು ; ತಾಯಿ ಹೇಳಿದ ಪೂರ್ವಿಕರ ವೃತ್ತಾಂತವು ಅವನ ಮನಸ್ಸಿನಲ್ಲಿ ನೆಲೆಗೊಂಡಿತು.

ಉಪಾಧ್ಯಾಯನಿಗೆ ಜೇಮ್ಸಿನಲ್ಲಿ ಪರಮ ವಿಶ್ವಾಸವಿದ್ದಿತೆಂದು ಹಿಂದೆಯೇ ಹೇಳಿರುವೆವಲ್ಲವೆ! ಹುಡುಗರು ಅತ್ತಿತ್ತ ನೋಡದೆ ಪುಸ್ತಕದಲ್ಲಿಯೇ ದೃಷ್ಟಿಯನ್ನಿಟ್ಟಿದ್ದರೆ ಬೇಗನೆ ಪಾಠವನ್ನು ಕಲಿಯುವರೆಂದು ಭಾವಿಸಿ ಆ ಉಪಾಧ್ಯಾಯನು, ''ಹುಡುಗರು ಅತ್ತಿತ್ತ ನೋಡುತ್ತಿದ್ದರೆ ವ್ಯಾಸಂಗಕ್ಕೆ ಭಂಗವುಂಟಾಗುವುದು ; ಆದಕಾರಣ ಹುಡುಗರು ಅತ್ತಿತ್ತ ನೋಡಕೂಡದು '' ಎಂಬ ನಿಬಂಧನೆಯನ್ನು ಮಾಡಿದನು. ಈ ನಿಬಂಧನೆಯಂತೆ ನಡೆಯುವುದು ಬಾಲಕರೆಲ್ಲರಿಗೂ ಕಷ್ಟವಾಯಿತು ; ಜೇಮ್ಸಿಗಾದರೋ ಬಹು ಕಷ್ಟವಾಯಿತು. ಏಕೆಂದರೆ, ಅವನ ಕಣ್ಣುಗಳೂ ಕಿವಿಗಳೂ ಪುಸ್ತಕಗಳಿಗಿಂತ ಅತಿಶಯವಾಗಿ ಹೊಸಹೊಸ ಪಾಠಗಳನ್ನು ಅವನಿಗೆ ಕಲಿಸುತ್ತಿದ್ದುವು. ಅತ್ತಿತ್ತ ನೋಡದೆ ಪುಸ್ತಕವನ್ನೇ ನೋಡುತ್ತ ಕುಳಿತಿರುವುದು ಅವನ ಪ್ರಕೃತಿಯಲ್ಲಿಯೇ ಇರಲಿಲ್ಲ. ಆದರೆ ಉಪಾಧ್ಯಾಯನ ಅಪ್ಪಣೆಯಂತೆ ನಡೆದುಕೊಂಡರೆ ತಾನು ಉತ್ತರೋತ್ತರ ದಳವಾಯಿಯಾಗಬಹುದೆಂದು ಅವನು ನಂಬಿದ್ದುದರಿಂದ ಉಪಾಧ್ಯಾಯನ ಮಾತನ್ನು ಮೀರಬಾರದೆಂದು ನಿರ್ಧರ ಮಾಡಿಕೊಂಡಿದ್ದರೂ, ಪುಸ್ತಕವನ್ನೇ ನೋಡುತ್ತ ಕುಳಿತಿರುವುದು ಅವನಿಗೆ ಸಾಧ್ಯವಾಗಲಿಲ್ಲ. ಶಾಲೆಯಲ್ಲೊಬ್ಬನು ಪದ್ಯವೊಂದನ್ನು ಅದರ ಭಾವವು ಹೊರಪಡುವಂತೆ ಹೇಳತೊಡಗಿದರೆ, ಜೇಮ್ಸಿನ ಕಣ್ಣುಗಳು ಆ ವಿದ್ಯಾರ್ಥಿಯ ಕಡೆಗೆ ಹೋಗಿ ಅವನ ಅಭಿನಯ ಮುಂತಾದುವನ್ನೂ, ಕಿವಿಗಳು ಆ ವಿದ್ಯಾರ್ಥಿಯ ಉಚ್ಚಾರಣ ಕ್ರಮ ಮುಂತಾದುವನ್ನು ಪರೀಕ್ಷಿಸುತ್ತಿದ್ದುವು. ಉಪಾಧ್ಯಾಯನು ಎಚ್ಚರಿಸಲು, ಜೇಮ್ಸ್ ತಲೆಯನ್ನು ತಗ್ಗಿಸಿ ಪುಸ್ತಕವನ್ನು ಮತ್ತೊಮ್ಮೆ ನೋಡುವುದಕ್ಕೆ ಪ್ರಾರಂಭಿಸುತ್ತಿದ್ದನು. ಹೀಗೆ ಅನೇಕ ವೇಳೆ ನಡೆಯಿತು. ಸ್ವಾಭಾವಿಕವಾಗಿ ಕಣ್ಣು ಕಿವಿಗಳನ್ನು ಉಪಯೋಗಿಸುವುದಕ್ಕೆ ಅವಕಾಶವಿಲ್ಲದಂತಾಗಿ, ಉಪಾಧ್ಯಾಯನ ನಿಬಂ

ಘನೆಯಂತೆಯೇ ನಡೆಯಬೇಕೆಂಬ ಚಿಂತೆಯಿಂದ, ಜೇಮ್ಸ್ ತನ್ನ ಪಾಠದ ಅರ್ಥ ಮುಂತಾದುವನ್ನು ಚೆನ್ನಾಗಿ ಪರಿಶೀಲಿಸದೆ ಬಿಟ್ಟನು. ಅವನ ಚಟುವಟಿಕೆಯೂ ಕಡಿಮೆಯಾಯಿತು, ಬುದ್ಧಿಯೂ ಮಂದವಾಗುತ್ತ ಬಂದಿತು; ಉಪಾಧ್ಯಾಯನಿಗೆ ಜೇಮ್ಸಿನ ವಿಷಯದಲ್ಲಿ ಅಸಮಾಧಾನ ವುಂಟಾಯಿತು. ಆತನು ಒಂದು ದಿವಸ ಎಲಿಜೆಯ ಮನೆಗೆ ಬಂದಿದ್ದಾಗ ಆಕೆಯನ್ನು ನೋಡಿ, "ತಾಯಿ! ನಿಮ್ಮ ಮನಸ್ಸಿಗೆ ಖೇದವನ್ನುಂಟು ಮಾಡಬೇಕೆಂಬ ಅಭಿಪ್ರಾಯವು ನನಗಿಲ್ಲ; ಜೇಮ್ಸ್ ಗಂಭೀರ ಪ್ರಕೃತಿ ಯುವನಾಗಿಯೇ ಇದ್ದಾನೆ; ಆದರೂ—" ಎಂದು ಹೇಳಿ ಮುಂದಣ ಮಾತನ್ನು ನಿಲ್ಲಿಸಿದನು.

ಎಲಿಜೆಯು ಅವನ ರೀತಿಯನ್ನು ನೋಡಿ ಅಸಮರ್ಪಕವಾದ ಏನೋ ಒಂದು ವಿಷಯವಿರಬೇಕೆಂದು ಭಾವಿಸಿ, "ಸಂಕೋಚಪಡ ಬೇಡಿರಿ, ಮುಂದಣ ಮಾತನ್ನು ಹೇಳಿರಿ" ಎಂದಳು. "ಮತ್ತೇನೂ ಇಲ್ಲ; ಜೇಮ್ಸ್ ಪಾಠಶಾಲೆಯಲ್ಲಿ ಅತ್ತಿತ್ತ ನೋಡದೆ ಕುಳಿತಿರುವುದೂ ಇಲ್ಲ, ಪಾಠಗಳನ್ನು ಸಮರ್ಪಕವಾಗಿ ಕಲಿಯುವುದೂ ಇಲ್ಲ; ಅವ ನನ್ನು ಒಳ್ಳೆಯ ವಿದ್ಯಾರ್ಥಿಯನ್ನಾಗಿ ಮಾಡುವುದು ಅಸಾಧ್ಯವೆಂದು ತೋರುತ್ತದೆ" ಎಂದು ಉಪಾಧ್ಯಾಯನು ಹೇಳಿದನು.

ಆ ಮಾತನ್ನು ಕೇಳಿ ಎಲಿಜೆಯು ಗುಂಡಿನೇಟು ತಗಲಿದವಳಂತೆ ಸ್ತಬ್ಧಳಾದಳು. ಜೇಮ್ಸ್ ಪಂಡಿತನಾಗುವನೆಂದು ನಂಬಿದ್ದ ಆಕೆಗೆ ಈ ಸಂಗತಿಯು ಬಹಳ ಖೇದವನ್ನುಂಟುಮಾಡಿತು. ಇದರಿಂದ ಆಕೆಯು, "ಅಯ್ಯೋ, ನನ್ನ ಪುಣ್ಯವೇ!" ಎಂದುಕೊಂಡು ಖಿನ್ನಳಾದಳು.

ನಡೆದುದನ್ನೆಲ್ಲ ನೋಡುತ್ತಿದ್ದ ಜೇಮ್ಸ್ ಬಿಕ್ಕಿ ಬಿಕ್ಕಿ ಅಳುವುದಕ್ಕೆ ಪ್ರಾರಂಭಿಸಿ, ತನ್ನ ತಾಯಿಯ ತೊಡೆಯ ಮೇಲೆ ಮುಖವನ್ನಿಟ್ಟು ಕಣ್ಣೀರನ್ನು ಧಾರೆಯಾಗಿ ಸುರಿಸುತ್ತ, "ಅಮ್ಮಾ! ನಾ-ನು ಇನ್ನು ಮೇಲೆ ಒಳ್ಳೆಯ ಹುಡುಗನಾ–ಆ–ಗಿ ಇರುತ್ತೇ–ಏ–ನೆ; ವಿಧೇಯನಾ–ಆ–ಗಿಯೇ ಇರಬೇಕೆಂದು ನನ್ನ ಅಭಿಲಾಷೆ" ಎಂದು ಅಳುವನ್ನು ತಡೆದು ಕೊಂಡು ಹೇಳಿದನು. ಜೇಮ್ಸ್ ಹೇಳಿದ ಕೊನೆಯ ವಾಕ್ಯದಿಂದ ನಿಶ್ಚ

ಯಾಂಶವು ವ್ಯಕ್ತವಾಗುವುದು : ಐದಾರು ವರ್ಷದ ಮಕ್ಕಳನ್ನು ಕಿವುಡ-
ರಾದ ಕುರುಡರಂತೆ ಕುಳ್ಳಿರಿಸುವುದು ಸಾಧ್ಯವೂ ಅಲ್ಲ, ಸರಿಯೂ ಅಲ್ಲ.

ಜೇಮ್ಸಿನ ರೀತಿಯನ್ನು ನೋಡಿ ಎಲಿಜೆಯ ಮನಸ್ಸು ಕರಗಿ,
"ಕಿವುಡನಾದ ಕುರುಡನಂತೆ ಕುಳ್ಳಿರುವುದು ಜೇಮ್ಸಿಗೆ ಅಸಾಧ್ಯವಾಗಿರ-
ಬಹುದು; ಹುಟ್ಟಿದಂದಿನಿಂದಲೂ ಅವನು ಎಂದೂ ಸುಮ್ಮನೆ ಕುಳಿತವ-
ನಲ್ಲ" ಎಂದು ಉಪಾಧ್ಯಾಯನಿಗೆ ಹೇಳಿದಳು.

ಉಪಾಧ್ಯಾಯನು ಉತ್ತರವನ್ನು ಕೊಡುವುದಕ್ಕಾರಂಭಿಸುವುದಕ್ಕೆ
ಮೊದಲೇ ಜೇಮ್ಸು ತನ್ನ ತಾಯಿಯ ಬಿನ್ನ ಮುಖವನ್ನು ನೋಡಿ,
"ಅಮ್ಮಾ! ಅತ್ತಿತ್ತ ನೋಡದೆ ಎಷ್ಟು ಕಷ್ಟವಾದರೂ ಸಹಿಸಿಕೊಂಡು
ಕುಳಿತಿರುವೆನು; ನೀನು ಚಿಂತಿಸದಿರು" ಎನ್ನುತ್ತ ಮತ್ತೊಮ್ಮೆ ಬಿಕ್ಕಿ-
ಬಿಕ್ಕಿ ಅಳುವುದಕ್ಕಾರಂಭಿಸಿದನು.

ಒಂದು ಹೊಸ ಭಾವವು ಮನಸ್ಸಿಗೆ ಹೊಳೆದವನಂತೆ ಉಪಾಧ್ಯಾ-
ಯನು ಆಲೋಚನಾಪರನಾಗಿ, "ತಾಯಿ! ನೀವು ಹೇಳುವಂತೆಯೇ
ಇರಬಹುದು" ಎಂದನು.

"ಜೇಮ್ಸು ಇದುವರೆಗೂ ಒಂದು ದಿನವಾದರೂ, ನಾನು ಕಂಡಂತೆ
ಪಾಠದಲ್ಲಿ ತಪ್ಪಿದವನಲ್ಲ" ಎಂದು ಎಲಿಜೆಯು ಹೇಳಿದಳು.

"ಇಲ್ಲ, ಪಾಠದಲ್ಲಿ ತಪ್ಪುವುದಿಲ್ಲ; ಪಾಠಗಳನ್ನೆಲ್ಲ ಕಲಿಯುತ್ತೇ-
ನಮ್ಮಾ! ನೀನು ಸಂಕಟಪಡದಿರು" ಎಂದು ಹೇಳುತ್ತ ಜೇಮ್ಸು
ಮತ್ತೊಮ್ಮೆ ಅಳುವುದಕ್ಕಾರಂಭಿಸಿದನು.

"ಕಲಿಯಬೇಕೆಂದೇ ನಿನ್ನ ಸಂಕಲ್ಪವಿರುವುದು; ಆ ವಿಷಯದಲ್ಲಿ
ನನಗೆ ಸಂಶಯವಿಲ್ಲ; ಆದರೆ ಸಂಕಲ್ಪಿಸಿದಂತೆ ಅನೇಕರು ಕಾರ್ಯವನ್ನು
ಸಾಧಿಸಲಾರರು; ನಿನ್ನ ವಿಚಾರವೂ ಹಾಗೆಯೇ ಇರಬಹುದು" ಎಂದು
ಎಲಿಜೆಯು ಜೇಮ್ಸನ್ನು ಸಮಾಧಾನಪಡಿಸಿದಳು.

ಉಪಾಧ್ಯಾಯನು ಮಗುವಿನ ದುಃಖವನ್ನು ನೋಡಲಾರದೆ,
"ಮಗುವೇ! ನಾವಿಬ್ಬರೂ ಸ್ನೇಹಿತರು; ನಮ್ಮನಮಗೆ ಮನಸ್ತಾಪವು
ಬರಬಾರದು; ಇನ್ನೊಂದು ವೇಳೆ ನಿನ್ನನ್ನು ಪಾಠದಲ್ಲಿ ಪರೀಕ್ಷಿಸುತ್ತೇನೆ;

ಅಳಬೇಡ, ಮಕ್ಕಳು ಅಳಬಾರದು, ನಗುತ್ತಿರಬೇಕು" ಎನ್ನುತ್ತ ಜೇಮ್ಸ್‌ನನ್ನು ಸಮಾಧಾನಪಡಿಸಿದನು.

ಉಪಾಧ್ಯಾಯನಿಗೆ ತನ್ನ ತಪ್ಪು ತಿಳಿಯಬಂದಿತು. ಮರು ದಿನ ಶಾಲೆಯಲ್ಲಿ ಅವನು ಜೇಮ್ಸ್‌ನನ್ನು ನಿರಾತಂಕವಾಗಿರುವಂತೆ ಬಿಟ್ಟನು. ಜೇಮ್ಸ್ ಅತ್ತಿತ್ತ ನೋಡುತ್ತ ಸಂತೋಷದಿಂದ ಪಾಠವನ್ನು ಕಲಿಯುತ್ತ ಬಂದನು; ಅವನ ಸಹಜವಾದ ಪ್ರತಿಭೆಯು ಬೆಳೆಯುವುದಕ್ಕೆ ಅವಕಾಶವಾಯಿತು. ಅವನು ಪ್ರತಿ ದಿನವೂ ಹೊಸ ಹೊಸ ವಿಷಯಗಳನ್ನು ಗ್ರಹಿಸುತ್ತ ಆ ಪಾಠಶಾಲೆಯಲ್ಲಿ ಅಗ್ರಗಣ್ಯನಾದನು. ಕೆಲವು ದಿವಸಗಳು ಕಳೆದ ಮೇಲೆ ಉಪಾಧ್ಯಾಯನು ಎಲಿಜೆಯ ಮನೆಗೆ ಮರಳಿ ಹೋದನು. ಅವನನ್ನು ಕಂಡ ಕೂಡಲೆ ಎಲಿಜೆಯು, "ಅಯ್ಯಾ! ಪಾಠಶಾಲೆಯಲ್ಲಿ ಜೇಮ್ಸ್ ಹೇಗಿದ್ದಾನೆ?" ಎಂದು ಪ್ರಶ್ನೆಮಾಡಿದಳು.

ಉಪಾಧ್ಯಾಯ.—ಪಾಠಶಾಲೆಗೆ ಭೂಷಣಪ್ರಾಯನಾಗಿದ್ದಾನೆ.

ಎಲಿಜೆ.—ಬಹಳ ಸಂತೋಷ.

ಉಪಾಧ್ಯಾಯ.—ಅವನ ಚಟುವಟಿಕೆಗೆ ಕೊನೆಯೇ ಇಲ್ಲ; ವ್ಯಾಸಂಗವನ್ನು ಬಹಳ ಚೆನ್ನಾಗಿ ಮಾಡುತ್ತಿದ್ದಾನೆ; ಸೂಕ್ಷ್ಮ ವಿಷಯಗಳನ್ನು ಯಾರೂ ಅವನಷ್ಟು ಬೇಗನೆ ಗ್ರಹಿಸುತ್ತಿಲ್ಲ.

ಎಲಿಜೆ.—ಅತ್ತಿತ್ತ ನೋಡಕೂಡದೆಂಬ ನಿಯಮವೇನಾಯಿತು?

ಉಪಾಧ್ಯಾಯ.—ಹೋಯಿತು; ಜೇಮ್ಸ್‌ನ ವಿಷಯದಲ್ಲಿ ನೀವು ಹೇಳಿದುದೇ ನಿಜವಾಯಿತು. ಅವನನ್ನು ನಿರ್ಬಂಧಪಡಿಸಿದರೆ ಅವನು ಯಾವುದನ್ನೂ ಕಲಿಯನು. ನನ್ನ ನಿಯಮದಂತೆ ನಡೆಯಬೇಕೆಂದು ಅವನು ಬಹಳ ಪ್ರಯತ್ನಪಟ್ಟನೆಂದು ಊಹಿಸುತ್ತೇನೆ.

ಎಲಿಜೆ.—ಮಕ್ಕಳೆಲ್ಲ ಒಂದೇ ಬಗೆಯಾಗಿರುವುದಿಲ್ಲ. ಜೇಮ್ಸ್ ನನ್ನ ಇತರ ಮಕ್ಕಳಂತಲ್ಲ; ಸುಮ್ಮನೆ ಒಂದು ಕ್ಷಣವೂ ಇರಲಾರನು. ಅವನಲ್ಲಿ ಸಾಹಸವೂ ಕಾರ್ಯತತ್ಪರತೆಯೂ ಅತಿಶಯವಾಗಿವೆ; ಅವನು ಒಳ್ಳೆಯ ವಿದ್ಯಾವಂತನಾಗಬಹುದೆಂದು ತೋರುವುದು.

ಉಪಾಧ್ಯಾಯ.—ವಿದ್ಯಾವಂತನಾಗುವುದೊಂದೇ ಅಲ್ಲ; ಯಾವಾಗಲೂ

ತನ್ನ ಹೆಸರು ಲೋಕದಲ್ಲಿ ನೆಲೆಗೊಳ್ಳುವಂತೆ ಮಾಡುವನು;
ಇದಕ್ಕೆ ಸಂದೇಹವಿಲ್ಲ; ನನ್ನ ಮಾತನ್ನು ನಂಬಿರಿ.

ಎಲಿಜೆ.—ದೇವರ ದಯೆಯಿಂದ ಹಾಗಾಗುವುದಾದರೆ ಪರಮಸಂತೋಷ.

ಉಪಾಧ್ಯಾಯನು ಪಾಠಶಾಲೆಯಲ್ಲಿ ಕೆಲಸ ಮಾಡುವುದಕ್ಕೆ ಪ್ರಾರಂಭಿಸಿದ ದಿವಸ ಹುಡುಗರನ್ನೆಲ್ಲ ಸೇರಿಸಿ, "ಮಕ್ಕಳಿರಾ! ಎಲ್ಲರೂ ಶ್ರದ್ಧೆಯಿಂದೋದಿ ಒಳ್ಳೆಯವರೆನ್ನಿಸಿಕೊಳ್ಳಬೇಕು. ಇಗೋ ಕೇಳಿರಿ! ಈ ಮಾಗಿಯ ಕೊನೆಯಲ್ಲಿ ಯಾವನು ವ್ಯಾಸಂಗದಲ್ಲಿಯೂ ನಡತೆಯಲ್ಲಿಯೂ ಅತ್ಯುತ್ತಮನೆನಿಸಿಕೊಳ್ಳುವನೋ ಅವನಿಗೆ ಈ ಪುಟ್ಟ ಬೈಬಲ್ ಪುಸ್ತಕವನ್ನು ಬಹುಮಾನವಾಗಿ ಕೊಡುವೆನು" ಎಂದು ವಾಗ್ದಾನ ಮಾಡಿದನು. ಅನೇಕರು ಈ ಬಹುಮಾನವನ್ನು ಪಡೆಯುವುದಕ್ಕೆ ಸ್ಪರ್ಧೆಯಿಂದ ಓದಿದರು. ಆದರೆ ಜೇಮ್ಸ್ಗೆ ಸಮನಾಗಿ ಯಾವನೂ ಬರಲಿಲ್ಲ. ಪಾಠಶಾಲೆಯ ಕೊನೆಯ ದಿವಸ ಉಪಾಧ್ಯಾಯನು ಜೇಮ್ಸ್‌ನನ್ನು ಕರೆದು, "ಇಗೋ! ಈ ಬೈಬಲ್ಲನ್ನು ನಿನಗೆ ಬಹುಮಾನವಾಗಿ ಕೊಟ್ಟಿರುತ್ತೇನೆ. ಯಾವ ಹುಡುಗನ ಮೇಲೆಯೂ ನನ್ನ ಆಕ್ಷೇಪಣೆಯಿಲ್ಲ; ಎಲ್ಲರೂ ತೃಪ್ತಿಕರವಾಗಿ ಓದಿರುತ್ತಾರೆ. ಆದರೆ ವ್ಯಾಸಂಗದಲ್ಲಿಯಾಗಲಿ ನಡತೆಯಲ್ಲಿಯಾಗಲಿ ಯಾರೂ ನಿನಗೆ ಸಮವಾಗಿ ಬಂದಿಲ್ಲ. ಈ ಪುಸ್ತಕವನ್ನು ಚೆನ್ನಾಗಿ ಓದಿ ಖ್ಯಾತಿವಂತನಾಗಿ ಬಾಳು" ಎಂದು ಆಶೀರ್ವಾದ ಮಾಡಿದನು.

ಜೇಮ್ಸ್ ಸಂತೋಷಪಟ್ಟುದಲ್ಲದೆ ಅವನ ಸಹಪಾಠಿಗಳೆಲ್ಲರೂ ಸಂತೋಷಪಟ್ಟರು; ಎಲಿಜೆಯ ಸಂತೋಷಕ್ಕಾದರೋ ಪಾರವೇ ಇರಲಿಲ್ಲ.

ಹೀಗೆ ಜೇಮ್ಸ್ ಅಭಿವೃದ್ಧಿ ಹೊಂದುತ್ತ ಬರಲು, ಅವನು ಪ್ರತಿಯೊಬ್ಬ ಉಪಾಧ್ಯಾಯನ ಪ್ರೀತಿಗೂ ಪಾತ್ರನಾದನು. ಅವನು ತನ್ನ ಕೈಗೆ ಸಿಕ್ಕಿದ ಪುಸ್ತಕಗಳನ್ನೋದದೆ ಬಿಡುತ್ತಿರಲಿಲ್ಲ. ಪಾಠಶಾಲೆಯು ಮಾಗಿಯ ಕಾಲದಲ್ಲಿ ಮಾತ್ರ ಇದ್ದುದರಿಂದ ಆಗ ಅವನು ಅಲ್ಲಿಗೆ ಹೋಗುತ್ತಿದ್ದನು. ಉಳಿದ ಕಾಲದಲ್ಲಿ, ಆರೇ ವರ್ಷದವನಾಗಿದ್ದರೂ, ಅವನು ತನ್ನ ಅಣ್ಣನಿಗೆ ಬೇಸಾಯದ ಕೆಲಸದಲ್ಲಿ ಕೈಯಲ್ಲಾದ ಮಟ್ಟಿಗೆ ಸಹಾಯ ಮಾಡುತ್ತಿದ್ದನು. ಹೀಗೆ ಎರಡು ವರ್ಷಗಳು ಕಳೆದುವು.

## ಅಧ್ಯಾಯ ೫

# ವ್ಯವಸಾಯದ ಹುಡುಗ

ಜೇಮ್ಸ್‌ಗೆ ಎಂಟು ವರ್ಷ ತುಂಬಿತು. ಅವನ ಅಣ್ಣನು ಆಗಾಗ ಕೂಲಿಯ ಕೆಲಸಕ್ಕೆ ಹೊರಗೆ ಹೋಗುತ್ತಿದ್ದನು. ಅವನಿಲ್ಲದ ವೇಳೆಯಲ್ಲಿ ಜೇಮ್ಸ್ ದನಕರುಗಳನ್ನು ನೋಡಿಕೊಳ್ಳುವುದು, ಹಾಲನ್ನು ಕರೆಯುವುದು, ಕಾಯಿ ಪಲ್ಯಗಳನ್ನು ಬೆಳೆಯುವುದು, ಧಾನ್ಯವನ್ನು ಒಕ್ಕುವುದು, ಸೌದೆಯನ್ನು ಸೀಳುವುದು—ಇವೇ ಮೊದಲಾದ ಕೆಲಸಗಳಲ್ಲಿ ಯಾವುದನ್ನಾದರೂ ಮಾಡುತ್ತಿದ್ದನು. ಥಾಮಸ್ ಹೊರಗೆ ಸಂಪಾದನೆ ಮಾಡುತ್ತಿದ್ದುದರಿಂದ ಮನೆಯಲ್ಲಿ ಹೆಚ್ಚು ಸುಖಕ್ಕೆ ಅವಕಾಶವುಂಟಾಯಿತು. ಮಕ್ಕಳು ದೊಡ್ಡವರಾಗುತ್ತ ಬರಲು, ಅವರ ಬಟ್ಟೆಗಳಿಗೂ ಪುಸ್ತಕಗಳಿಗೂ ಹೆಚ್ಚು ಹೆಚ್ಚು ಹಣವು ಬೇಕಾಗುತ್ತಿದ್ದಿತು. ಒಂದು ದಿನ ಎಲಿಜೆಯು ಜೇಮ್ಸ್‌ನನ್ನು ಹತ್ತಿರ ಕುಳ್ಳಿರಿಸಿಕೊಂಡು, "ಅಪ್ಪಯ್ಯಾ! ನಿನಗೆ ಈಗ ಎಂಟು ವರ್ಷ ವಯಸ್ಸು, ನಿಮ್ಮಣ್ಣನಿಗೆ ಹದಿನೇಳು ವರ್ಷ; ಅವನಿಗೆ ಹನ್ನೊಂದು ತುಂಬುವುದಕ್ಕೆ ಮೊದಲೇ ನಿಮ್ಮ ತಂದೆಯು ಅಕಾಲ ಮೃತ್ಯುವಿಗೆ ತುತ್ತಾದನು. ಅಂದಿನಿಂದ ಥಾಮಸ್ಸಿನ ಮೇಲೆ ಸಂಸಾರ ಭಾರವು ಬಿದ್ದಿರುವುದು. ಇನ್ನು ಕೆಲವು ವರ್ಷಗಳಲ್ಲಿ ಥಾಮಸ್ ತನ್ನ ಜೀವನೋಪಾಯಕ್ಕಾಗಿ ಮನೆಯನ್ನು ಬಿಟ್ಟು ಹೊರಡುವನು. ಆಗ ನೀನು ಬೇಸಾಯದ ಕೆಲಸಗಳನ್ನು ಒಂಟಿಯಾಗಿ ನಿರ್ವಹಿಸಲು ಸಿದ್ಧನಾಗಬೇಕು" ಎಂದು ಹೇಳಿದಳು.

ಜೇಮ್ಸ್.—ಅವುಗಳೆಲ್ಲವನ್ನೂ ನಾನು ಮಾಡಬಲ್ಲೆನು.

ಎಲಿಜೆ.—ಆದರೆ ಮನಸ್ಸಿಟ್ಟು ಕಲಿಯದಿದ್ದರೆ ಬೇಸಾಯದ ಕೆಲಸವು ತೃಪ್ತಿಕರವಾಗಿ ನಡೆಯುವುದಿಲ್ಲ. ಕೆಲಸವು ಚೆನ್ನಾಗಿ ನಡೆಯಬೇಕಾದರೆ ಅಭ್ಯಾಸವು ಬೇಕು.

ಜೇಮ್ಸ್.—ನಮ್ಮಣ್ಣನಿಗೆ ಆ ಕೆಲಸಗಳನ್ನು ಮಾಡಲು ಹೇಗೆ ತಿಳಿದು ಬಂದಿತೊ ಹಾಗೆಯೇ ನನಗೂ ಬರುವುದು.

ಎಲಿಜೆ.—ನಿನಗೂ ಅಷ್ಟು ವಯಸ್ಸಾದಾಗ—

ಜೇಮ್ಸ್.—ಅಹುದು, ಅವನಿಗೆ ಆಗಿದ್ದಷ್ಟು ವಯಸ್ಸು ನನಗೂ ಆದಾಗ—

ಎಲಿಜೆ.—ಬೇಸಾಯಕ್ಕಿಂತಲೂ ಮೇಲಾದ ಕೆಲಸವನ್ನು ನೀನು ಮುಂದಕ್ಕೆ ನಿರ್ವಹಿಸಬೇಕೆಂಬ ಆಸೆ ನನಗೆ ಬಹಳವಾಗಿದೆ.

ಜೇಮ್ಸ್.—ಬೇಸಾಯಕ್ಕಿಂತಲೂ ಮೇಲಾದ ಕೆಲಸವೂ ಉಂಟೆ?

ಎಲಿಜೆ.—ಉಂಟು: ಉಪಾಧ್ಯಾಯನ ಕೆಲಸ, ಧರ್ಮೋಪದೇಶಕನ ಕೆಲಸ. ಉಪಾಧ್ಯಾಯನಾಗಬೇಕೆಂಬ ಬಯಕೆಯು ನಿನಗಿಲ್ಲವೊ?

ಜೇಮ್ಸ್.—ಇದೆ; ತಕ್ಕ ವಯಸ್ಸು ಬಂದಾಗ ನಾನೂ ಉಪಾಧ್ಯಾಯನಾಗಬೇಕು.

ಎಲಿಜೆ.—ಆದರೆ ಸಂತೋಷ. ನಿಮ್ಮಣ್ಣನಷ್ಟು ವಯಸ್ಸು ಬಂದಾಗ, ಯೋಗ್ಯತೆ ಇದ್ದರೆ, ನೀನೂ ಉಪಾಧ್ಯಾಯನಾಗಬಹುದು.

ಜೇಮ್ಸ್.—(ಆಶ್ಚರ್ಯದೊಡನೆ) ಹದಿನೇಳು ವರ್ಷ ವಯಸ್ಸಿಗೇನೆ?

ಎಲಿಜೆ.—ಅಹುದು, ಹದಿನೇಳಕ್ಕೊ ಹದಿನೆಂಟಕ್ಕೊ. ಎಷ್ಟೋ ಮಂದಿ ಆ ವಯಸ್ಸಿಗೆ ಉಪಾಧ್ಯಾಯರಾಗಿರುತ್ತಾರೆ. (ನಿಟ್ಟುಸಿರನ್ನು ಬಿಟ್ಟು) ನಾವಿರುವ ಸ್ಥಿತಿಯಲ್ಲಿ ನೀನು ಉಪಾಧ್ಯಾಯನಾಗುವ ಬಯಕೆ ಏಕೆ? ಮೊದಲು ಬೇಸಾಯದ ಕೆಲಸವು ಕೈಗೂಡಲಿ.

ಜೇಮ್ಸ್.—(ಮಾತನ್ನು ಥಟ್ಟನೆ ನಿಲ್ಲಿಸಿ) ನಾನು ಹೋಗಿ ಹಸುಗಳನ್ನು ಮನೆಗೆ ಅಟ್ಟಿಕೊಂಡು ಬರುವೆನು.

ಹೀಗೆಂದು ಹೇಳಿ ಜೇಮ್ಸ್ ಹೊರಟುಹೋದನು.

ಜೇಮ್ಸ್‌ನಲ್ಲಿ ಆತ್ಮಾವಲಂಬನವು ಚೆನ್ನಾಗಿ ಅಂಕುರಿಸುತ್ತ ಬಂದಿತು. "ನನ್ನ ಕೈಯಲ್ಲಾಗದು" ಎಂಬುದು ಅವನ ಬಾಯಿಂದ ಯಾವಾಗಲೂ ಬರುತ್ತಿರಲಿಲ್ಲ. ಒಬ್ಬನು ಮಾಡಿದುದನ್ನು ತಾನೂ ಮಾಡಬಲ್ಲೆನೆಂದು ಅವನು ಭಾವಿಸಿದ್ದನು. "ಮಾಡಬಲ್ಲೆನು" ಎಂದು ಹೇಳಿದುದನ್ನು ಅವನು ಮಾಡದೆ ಬಿಡುತ್ತಿರಲಿಲ್ಲ.

ಎಲಿಜೆಯೂ ಜೇಮ್ಸ್‌ನಿಗೆ ಆತ್ಮಾವಲಂಬನದ ಮಾಹಾತ್ಮ್ಯವನ್ನು ಬೋಧಿಸುತ್ತಿದ್ದಳು. ಒಂದು ದಿನ ಜೇಮ್ಸ್ ಬೇಸಾಯದ ಒಂದು ಕಷ್ಟವಾದ ಕೆಲಸವನ್ನು ಮಾಡುವುದಕ್ಕೆ ಹೊರಟಾಗ ಎಲಿಜೆಯು, “ಮಗೂ! ಈ ಕೆಲಸವನ್ನು ಮಾಡಲು ನನಗೆ ಸಾಮರ್ಥ್ಯವುಂಟೆಂದು ನಂಬಿಕೆಯನ್ನಿಟ್ಟುಕೊಳ್ಳುವುದರಲ್ಲಿಯೇ ಕೆಲಸವನ್ನು ಅರ್ಧ ಪಾಲು ಸಾಧಿಸಿದಂತಾಗುವುದು. ಮನಸ್ಸು ಹೋದ ಕಡೆ ಮಾರ್ಗವಿದ್ದೇ ಇರುವುದು. ಈ ಗಾದೆಯನ್ನು ನಿಮ್ಮ ತಂದೆಯು ಪದೇ ಪದೇ ಹೇಳುತ್ತಿದ್ದನು” ಎಂದು ಹೇಳಿದಳು.

ಜೇಮ್ಸ್.—ಅಮ್ಮಾ! ಹಾಗೆಂದರೇನು ?

ಎಲಿಜೆ.—ದೃಢ ಸಂಕಲ್ಪವಿರುವವನಿಗೆ ಕಾರ್ಯನಿರ್ವಾಹದ ಮಾರ್ಗವು ದೊರೆಯುವುದರಲ್ಲಿ ಸಂಶಯವಿಲ್ಲ. ಸ್ಥಿರ ಪ್ರಯತ್ನದಿಂದ ಅವನು ಕಷ್ಟಗಳೆಷ್ಟು ಒದರೂ ಹೆದರದೆ, ಅವುಗಳನ್ನು ಜಯಿಸಿ, ಹಿಡಿದ ಕೆಲಸವನ್ನು ಸಾಧಿಸುವನು. ನೀನೂ ಹಾಗೆಯೇ ಮಾಡುವೆಯಲ್ಲವೆ ?

ಜೇಮ್ಸ್.—ಹಾಗೆಯೇ ಮಾಡುವೆನು, ಸಂದೇಹಪಡಬೇಡ.

ಎಲಿಜೆ.—ನೀನೇ ಮಾಡಬೇಕಾದ ಕೆಲಸದಲ್ಲಿ ಪರರನ್ನು ನೆಚ್ಚದಿರು. ಆತ್ಮಾವಲಂಬನೆ ನಿನ್ನಲ್ಲಿರಲಿ. ಹಿಡಿದ ಕೆಲಸವನ್ನು ಸಾಧಿಸಲು ಶಕ್ತನೆಂದು ನಂಬಿ ನೀನು ಕೆಲಸವನ್ನಾರಂಭಿಸಿದರೆ ಅದು ಹಾಗೂ ಹೀಗೂ ಮುಗಿಯುವುದು. ಆತ್ಮ ಸಹಾಯವೊಂದನ್ನೇ ನೆಚ್ಚಿಕೊಂಡಿರುವವನಿಗೆ ದೈವ ಸಹಾಯವೂ ದೊರೆಯುವು ದೆಂದು ಹಿರಿಯರು ಹೇಳುವರು. ಅದು ನಿಜವೆಂದು ನಾನು ನಂಬಿದ್ದೇನೆ. ನಿಮ್ಮ ತಂದೆಯು ಸತ್ತಂದಿನಿಂದ ಭಗವಂತನೇ ನಮ್ಮನ್ನು ಕಾಪಾಡಿಕೊಂಡು ಬಂದಿರುತ್ತಾನೆ. ನಾವು ನಮ್ಮ ಕರ್ತವ್ಯವನ್ನು ಬಿಡದೆ ಜಗದ್ರಕ್ಷಕನನ್ನು ನಂಬಿದ್ದರೆ ಅವನು ನಮ್ಮ ಪ್ರಯತ್ನಗಳು ಸಫಲವಾಗುವಂತೆ ಮಾಡುವನು.

ನಮ್ಮ ಕೈಯಲ್ಲಾಗುವಷ್ಟು ಚೆನ್ನಾಗಿ ನಾವು ಕೆಲಸ ಮಾಡ ದಿದ್ದರೆ ಭಗವಂತನು ನಮಗೆ ತನ್ನ ದಯೆಯನ್ನು ತೋರಿಸನು. ಅದಕ್ಕಿಂತಲೂ ಹೆಚ್ಚಾದ ದೌರ್ಭಾಗ್ಯವು ಮತ್ತೊಂದುಂಟೆ? ಭಗವಂತನ ಕೃಪೆ ಇಲ್ಲದಾಗ ನಾವೇನನ್ನು ತಾನೆ ಮಾಡಲಾಪೆವು?

ಜೇಮ್ಸ್.—ಭಗವಂತನು ರೈತರಿಗೂ ಸಹಾಯಕನಾಗುವನೆ? ನಾವು ಸಜ್ಜನರಾಗುವುದರಲ್ಲಿ ಮಾತ್ರ ಭಗವಂತನ ಸಹಾಯವು ನಮಗೆ ದೊರೆಯುವುದೆಂದು ನಾನು ಭಾವಿಸಿದ್ದೆನು.

ಎಲಿಜೆ.—ಎಲ್ಲರಿಗೂ ಭಗವಂತನ ಕೃಪೆಯು ಆವಶ್ಯಕ. ಮಕ್ಕಳು, ಯೌವನಸ್ಥರು, ವೃದ್ಧರು, ರೈತರು, ಉಪಾಧ್ಯಾಯರು— ಎಲ್ಲರನ್ನೂ ರಕ್ಷಿಸುವವನು ಭಗವಂತನೇ. ಅವನ ಕೃಪೆಯಿಲ್ಲ ವಾದರೆ ನಮಗೆ ವಿಪತ್ತುಂಟಾಗುವುದು.

ತಾಯಿಯ ಸದ್ಬೋಧೆಯನ್ನು ಜೇಮ್ಸ್ ಆನಂದದಿಂದ ಕೇಳುತ್ತ, ಭಗವಂತನ ಸಹಾಯದಿಂದ ಬೇಸಾಯದ ಕೆಲಸಗಳನ್ನು ನಿರ್ವಹಿಸುತ್ತ ಬರಬಹುದೆಂದು ಮನಸ್ಸಿನಲ್ಲಿ ನಿರ್ಧರಿಸಿಕೊಳ್ಳುತ್ತಿರುವಷ್ಟರಲ್ಲಿ ಎಲಿಜೆ, "ನೀನು ಮೊದಲನೆಯ ಕೆಲಸವನ್ನು ಆಕ್ಷೇಪಣೆಗೆ ಮಾರ್ಗವಿಲ್ಲದಂತೆ ಮಾಡಿದರೆ ಎರಡನೆಯದನ್ನೂ ಹಾಗೆಯೇ ಮಾಡುವೆ. ಇದೇ ಅಭ್ಯಾಸ ವಾಗುತ್ತ ಬಂದರೆ ನೀನು ಕೈಹಾಕಿದುದೆಲ್ಲ ತೃಪ್ತಿಕರವಾಗಿಯೇ ನಡೆಯುವುದು; ಮುಖ್ಯವಾಗಿ, ನಿನ್ನಲ್ಲಿ ಆತ್ಮಾವಲಂಬನೆಯು ಹೆಚ್ಚು ವುದು. ಇದನ್ನು ಜ್ಞಾಪಕದಲ್ಲಿಟ್ಟುಕೊಂಡು ಆಚರಣೆಗೆ ತರುವವ ನಾಗು" ಎಂದು ಉಪದೇಶವನ್ನು ಮಾಡಿದಳು.

ಸಮಯವು ದೊರೆತಾಗೆಲ್ಲ ಎಲಿಜೆಯು ತನ್ನ ಸದುಪದೇಶದಿಂದ ಜೇಮ್ಸನಲ್ಲಿದ್ದ ಸದ್ಗುಣಗಳನ್ನು ಅಭಿವೃದ್ಧಿಪಡಿಸುತ್ತಿದ್ದಳು. ಬಾಲ್ಯ ದಿಂದಲೂ ಸ್ವಪ್ರಯತ್ನದ ಫಲವನ್ನು ಅನುಭವಿಸುತ್ತ ಬಂದವನು ಪ್ರಾಪ್ತ ವಯಸ್ಕನಾದಾಗ ಜಯಶಾಲಿಯಾಗುವುದು ಅತಿಶಯವೆ? ಜೇಮ್ಸ್ ನಲವತ್ತು ವರ್ಷ ವಯಸ್ಸಿನವನಾಗಿದ್ದಾಗ ಯುವಕ ಮಂಡಲಿಯೊಂದಕ್ಕೆ ಬುದ್ಧಿವಾದವನ್ನು ಹೇಳುವಲ್ಲಿ, "ಸ್ವಪ್ರಯತ್ನದಿಂದ ಜಯವನ್ನು

ಪಡೆಯುದಿದ್ದ ಪಕ್ಷಕ್ಕೆ ಅಂತಹ ಜಯವು ಜಯವೆನಿಸಿಕೊಳ್ಳುವುದಿಲ್ಲ. ಯಾವುದನ್ನು ಗೆಲ್ಲಬೇಕಾದರೂ ಸ್ವಪ್ರಯತ್ನದಿಂದಲೇ ಗೆಲ್ಲಬೇಕು. ಹಾಗೆ ಗೆದ್ದಾಗ ಜಯವು ನಿಮ್ಮದಾಗುವುದು; ಸ್ವಪ್ರಯತ್ನದ ಸ್ವಭಾವವು ನಿಮ್ಮಲ್ಲಿ ನೆಲೆಗೊಳ್ಳುವುದು. ದಾರಿದ್ರ್ಯವು ಇದ್ದ ಮಾತ್ರಕ್ಕೆ ದಿಗಿಲು ಬೀಳದಿರಿ. ದಾರಿದ್ರ್ಯವು ಕ್ಲೇಶಕಾರಿ; ಅದನ್ನು ನಾನು ಬಲ್ಲೆನು. ಆದರೂ, ಸಾಹಸಿಗೆ ದಾರಿದ್ರ್ಯವಿರುವುದು ಒಂದು ಭಾಗಕ್ಕೆ ಒಳ್ಳೆಯದು. ಸಂಸಾರ ಸಾಗರದಲ್ಲಿ ಬಿದ್ದ ಬಡವನು, ಸ್ವಪ್ರಯತ್ನಶೀಲನಾಗಿದ್ದ ಪಕ್ಷಕ್ಕೆ ಮುಳುಗಿಹೋಗುವುದಿಲ್ಲ; ಏನಾದರೂ ಮಾಡಿ ದಡವನ್ನು ಸೇರುವನು. ಆತ್ಮಾವಲಂಬನೆಯಿದ್ದ ಮನುಷ್ಯನು ಎಂದಿಗೂ ಕೆಟ್ಟಿಲ್ಲ. ಮಾರ್ಗ ದರ್ಶಿಗಳೂ ಸಹಾಯಕರೂ ಇರಲೇಬೇಕೆಂದು ಭಾವಿಸಬೇಡಿರಿ; ಮಾರ್ಗವನ್ನು ನೀವೇ ಕಂಡುಹಿಡಿಯಬೇಕು. ಮತ್ತೊಬ್ಬರ ಕೈಕೆಳಗೆ ಕೆಲಸ ಮಾಡಿಕೊಂಡಿರುವುದರಲ್ಲಿಯೇ ತೃಪ್ತರಾಗಬಾರದು; ನಿಮ್ಮ ಕೈಕೆಳಗೆ ಕೆಲವರನ್ನಿಟ್ಟುಕೊಳ್ಳುವುದಕ್ಕೆ ಪ್ರಯತ್ನಿಸಬೇಕು. ನೀವು ಆಜ್ಞೆಯನ್ನು ಕೇಳಿಕೊಂಡಿರುವುದು ಸಾಲದು; ಆಜ್ಞೆಯನ್ನು ಕೊಡುವವರಾಗಿಯೂ ಆಗಬೇಕು. ಯುವಕರೇ! ನಿಮ್ಮ ಕೈಯಲ್ಲಾಗುವ ಕೆಲಸವು ಯಾವುದಾದರೂ ಒಂದು ಇರುವುದಲ್ಲವೆ? ಅದನ್ನು ಹುಡುಕಿ ಕಂಡುಹಿಡಿದು ಅದನ್ನು ಸಾಧಿಸಿ ಬಾಳಿರಿ. ಯಾವುದೂ ಆಗದಿದ್ದರೆ ಒಂದು ಗಾಡಿಯನ್ನೂ ಕುದುರೆಯನ್ನೂ ಸಂಪಾದಿಸಿಕೊಂಡು ಸ್ವತಂತ್ರದ ಕೆಲಸವನ್ನು ಮಾಡಬಹುದಷ್ಟೆ! ಹಾಗೆಯೇ ಹತ್ತಾರು ಗಾಡಿಗಳಿಗೆ ಅಧಿಕಾರಿಗಳಾದರೆ, ನಿಮ್ಮ ಆಜ್ಞೆಯಂತೆ ನಡೆಯುವ ಕೆಲಸಗಾರರನ್ನಿಟ್ಟು ಕೊಂಡು ಧನಿಕರಾಗಬಹುದು. ಸ್ವಪ್ರಯತ್ನವೇ ಪ್ರಯತ್ನ; ಆತ್ಮ ಸಹಾಯವೇ ಸಹಾಯ; ಆತ್ಮಾವಲಂಬನೆಯೇ ಸರ್ವ ಜಯಕ್ಕೂ ಮೂಲ'' ಎಂದು ಪ್ರಸಂಗ ಮಾಡಿದನು.

ಹಠಾತ್ತಾಗಿ ತೊಂದರೆಯು ಸಂಭವಿಸಿದಾಗ ಒಡನೆಯೇ ಅದಕ್ಕೆ ನಿವಾರಣೋಪಾಯವನ್ನು ಕಲ್ಪಿಸುವ ಚಾತುರ್ಯವು ಜೇಮ್ಸನಿಗಿದ್ದಿತು. ಒಂದು ದಿನ ಪಾಠಶಾಲೆಯಲ್ಲಿ ಏಮಾಸಿನ ಮಗನಾದ ಹೆನ್ರಿಯೂ ಜೇಮ್ಸೂ ಪಾಠ ಕಾಲದಲ್ಲಿ ಪರಸ್ಪರ ಮಾತನಾಡಿಕೊಂಡು ನಗುತ್ತ ಕುಳಿ

ತಿದ್ದರು. ಅವರಿಗೆ ಬುದ್ಧಿಯನ್ನು ಕಲಿಸಬೇಕೆಂದು ಉಪಾಧ್ಯಾಯನು, "ನಿಮ್ಮ ನಿಮ್ಮ ಪುಸ್ತಕಗಳನ್ನು ತೆಗೆದಿಟ್ಟು ಇಬ್ಬರೂ ಮನೆಗೆ ಹೋಗಿರಿ" ಎಂದು ಆಜ್ಞಾಪಿಸಿದನು. ಅವರು ಸಿಡಿಲು ಬಡಿದಂತೆ ತಲ್ಲಣಿಸುತ್ತ ಒಬ್ಬನ ಮುಖವನ್ನು ಮತ್ತೊಬ್ಬನು ನೋಡುತ್ತ ದಿಕ್ಕುತೋರದೆ ಸ್ತಬ್ಧರಾಗಿ ನಿಂತಿದ್ದರು. "ಹೋ! ನಡೆಯಿರಿ, ನಿಲ್ಲಬೇಡಿ" ಎಂದು ಉಪಾಧ್ಯಾಯನು ಗರ್ಜಿಸಲು, "ಇಗೋ ಹೋಗುತ್ತೇನೆ" ಎಂದು ಹೇಳಿ, ಜೇಮ್ಸ್ ಹೆನ್ರಿಯೊಡನೆ ಹೊರಗೆ ಬಂದನು. ಅಲ್ಲಿ ಬಂದೇ ಒಂದು ಕ್ಷಣದವರೆಗೆ ಆಲೋಚಿಸಿ, ಒಡನೆಯೇ ವೇಗವಾಗಿ ಓಡಿ ಮನೆಯನ್ನು ಸೇರಿ, ತಾಯಿಗೆ ಕಾಣಿಸಿಕೊಳ್ಳದೆ, ಆ ಕ್ಷಣವೇ ಹಿಂದಿರುಗಿ ಓಡಿಬಂದು ಆವಿಯ ಯಂತ್ರದಂತೆ ಭುಸ್ ಭುಸ್ ಎಂದು ಉಸುರನ್ನು ಹೊಯ್ಯುತ್ತ ತನ್ನ ಸ್ಥಾನದಲ್ಲಿ ಕುಳಿತುಕೊಂಡನು. "ಮನೆಗೆ ಹೋಗೆಂದು ನಿನಗೆ ನಾನು ಆಗಲೇ ಹೇಳಲಿಲ್ಲವೊ? ಇದೇನು? ಇಲ್ಲಿಯೇ ಕುಳಿತಿರುವೆ?" ಎಂದು ಉಪಾಧ್ಯಾಯನು ಗದರಿಸಿದನು. "ಮನೆಗೆ ಹೋಗಿದ್ದೆನು" ಎಂದು ಜೇಮ್ಸ್ ಉತ್ತರವನ್ನು ಕೊಡಲು, ಉಪಾಧ್ಯಾಯನು, "ಏನು! ಮನೆಗೆ ಹೋಗಿದ್ದೆಯಾ? ಇಷ್ಟು ಬೇಗನೆ?" ಎಂದು ಕೇಳಿದುದಕ್ಕೆ ಜೇಮ್ಸ್, "ಹೋಗಿದ್ದೆನು, ಮರಳಿ ಅಲ್ಲಿಂದ ಬಂದೆನು; ಮನೆಯಲ್ಲಿ ನಿಲ್ಲೆಂದು ತಾವು ಆಜ್ಞಾಪಿಸಲಿಲ್ಲ" ಎಂದು ಹೇಳಿದನು. ಮತ್ತೊಂದು ಸಲ ತನ್ನ ತಪ್ಪು ಈ ರೀತಿಯಾಗಿ ಹಾಸ್ಯದಲ್ಲಿ ಪರಿಣಮಿಸಲಾರದೆಂದು ಜೇಮ್ಸ್ ಹೆದರಿ, ಅದರಿಂದಾಚೆಗೆ ಬಹಳ ಎಚ್ಚರಿಕೆಯಿಂದ ನಡೆದುಕೊಳ್ಳುತ್ತ ಬಂದನು. ಹೆನ್ರಿಯಾದರೋ ಆ ದಿನ ಅಲ್ಲಲ್ಲಿ ಅಲೆಯುತ್ತ ಕಾಲವನ್ನು ಕಳೆದು ಮನೆಗೆ ಹೊರಟುಹೋದನು. ಈ ಬಾಲಕರ ಗುಣವು ಅವರವರ ನಡತೆಯಿಂದಲೇ ಸ್ಪಷ್ಟಪಡುತ್ತದೆ. ಜೇಮ್ಸನ ಚಾತುರ್ಯವು ತಿಳಿಯಬಂದಮೇಲೆ ಉಪಾಧ್ಯಾಯನಿಗೆ ಅವನಲ್ಲಿದ್ದ ಪ್ರೀತಿಯು ಇಮ್ಮಡಿಯಾಯಿತು.

ಜೇಮ್ಸನಿಗೆ ಹನ್ನೊಂದನೆಯ ವರ್ಷವು ತುಂಬಿತು; ಥಾಮಸನು ಇಪ್ಪತ್ತು ವರ್ಷದವನಾದನು. ಇಷ್ಟರಲ್ಲಿ ಊರಿನವರು ಸ್ಥಿರವಾದ ಪಾಠಶಾಲೆಯೊಂದನ್ನು ಕಟ್ಟಿಸಿ ಹಳೆಯ ಕಟ್ಟಡವನ್ನು ಎಲಿಜೆಗೆ ನಾವು

ಮಾತ್ರದ ಬೆಲೆಗೆ ಮಾರಿದರು. ಆಕೆಯ ಮಕ್ಕಳಿಬ್ಬರೂ ಏಮಾಸಿನ ಮಕ್ಕಳೊಡನೆ ಸೇರಿ ಆ ಮನೆಯನ್ನು ಕಿತ್ತು, ತಮ್ಮ ತಾಯಿಯ ಕಿರು ಮನೆಯ ಹಿಂದೆ ಅದೇ ಸಾಮಾನಿನಿಂದ ಬೇರೊಂದು ಕಿರುಮನೆಯನ್ನು ಕಟ್ಟಿ, ಆಕೆಯ ಉಪಯೋಗಕ್ಕೆ ಬಿಟ್ಟುಕೊಟ್ಟರು.

## ಅಧ್ಯಾಯ ೭

# ಭಾನುವಾರದ ವ್ರತ

ಕ್ರೈಸ್ತ ಧರ್ಮದವರು ಭಾನುವಾರವನ್ನು ವ್ರತ ದಿವಸವಾಗಿ ಭಾವಿಸುವರು. ಎಲಿಜೆಯಲ್ಲಿ ದೈವ ಭಕ್ತಿಯು ಅತಿಶಯವಾಗಿದ್ದುದರಿಂದ ಆಕೆಯು ಭಾನುವಾರದ ದಿವಸ ಜೀವನೋಪಾಯದ ಕೆಲಸಗಳನ್ನು ಬಿಟ್ಟು ಆಮುಷ್ಮಿಕ ವಿಷಯಗಳನ್ನು ತಿಳಿಯಲು ಪ್ರಯತ್ನಿಸಬೇಕೆಂಬ ನಿಯಮವನ್ನು ಮಾಡಿದ್ದಳು.

'ಡಿಸೈಪಲ್ಸ್' ಎಂಬ ಸಂಗಡಕ್ಕೆ ಆರೆಂಜಿನ ಜನರು ಸೇರಿದ್ದರು. ಈ ಸಂಗಡದ ಧರ್ಮೋಪದೇಶಕರು ಅಲ್ಲಿಗೆ ಸದೇ ಸದೇ ಬರುತ್ತಿರಲಿಲ್ಲ; ಬಂದಾಗ ಅವರು ಮಾಡುವ ಪ್ರಸಂಗವನ್ನು ಕೇಳುವುದಕ್ಕೆ ಏಳೆಂಟು ಮೈಲಿಗಳ ದೂರದಿಂದಲೂ ಜನರು ಬರುತ್ತಿದ್ದರು. ಆಗ ಜೇಮ್ಸ್ ಧರ್ಮೋಪದೇಶಕರ ಪ್ರವಚನವನ್ನು ಅತ್ಯಾದರದೊಡನೆ ಕೇಳುತ್ತಿದ್ದನು.

ಗುಡಿಗಳೂ ಧರ್ಮೋಪದೇಶಕರೂ ಸಮೀಪದಲ್ಲಿಲ್ಲದುದರಿಂದ ಎಲಿಜೆಯು ಭಾನುವಾರದ ವ್ರತವನ್ನು ಮನೆಯಲ್ಲಿಯೇ ಬಹು ಶ್ರದ್ಧೆಯಿಂದ ಆಚರಿಸುತ್ತಿದ್ದಳು; ಆ ದಿವಸ ಬೈಬಲ್ ಪುಸ್ತಕವನ್ನು ಹೆಚ್ಚಾಗಿ ಓದಿ ಅದರ ವಿಷಯಗಳನ್ನು ಮಕ್ಕಳಿಗೆ ತಿಳಿಸುತ್ತಿದ್ದಳು. ಬೈಬಲ್ಲನ್ನು ಅಪೌರುಷೇಯವೆಂದು ಭಾವಿಸಿದ್ದುದರಿಂದ ಅದನ್ನು ಎಲಿಜೆಯು ದೇವತಾ ಪುಸ್ತಕವೆಂದು ಕರೆಯುತ್ತಿದ್ದಳು. ಒಂದಾನೊಂದು ಭಾನುವಾರದ ದಿವಸ ತಾಯಿಗೂ ಮಗನಿಗೂ ಮುಂದೆ ಹೇಳುವ ಸಂವಾದವು ನಡೆಯಿತು :—

ಜೇಮ್ಸ್.—ಅಮ್ಮಾ! ಬೈಬಲ್ಲು ಅಪೌರುಷೇಯವೆಂದೂ ದೇವತಾ ಪುಸ್ತಕವೆಂದೂ ನೀನು ಹೇಗೆ ಬಲ್ಲೆ?

ಎಲಿಜೆ.—ಅದು ಮನುಷ್ಯ ಮಾತ್ರದವರು ಬರೆದಿರುವ ಪುಸ್ತಕಗಳಂತೆ ಇಲ್ಲಪ್ಪಾ.

ಜೇಮ್ಸ್.—ಮೋಸೆಸ್, ಐಸೈಯ, ಡೇವಿಡ್, ಮ್ಯಾಥ್ಯೂ, ಪಾಲ್ ಮುಂತಾದವರು ಅದರ ಬೇರೆ ಬೇರೆ ಭಾಗಗಳನ್ನು ಬರೆದರೆಂದು ಒಂದು ಸಲ ನೀನೇ ಹೇಳಿದೆಯಲ್ಲವೆ?

ಎಲಿಜ.—ಅಹುದು, ಅವರೇ ಬರೆದರು; ಆದರೆ ದೈವ ಸಹಾಯವಿಲ್ಲದೆ ಅವರು ಬರೆಯಲಿಲ್ಲ; ದೈವಾಂಶವು ಅವರಲ್ಲಿ ನೆಲೆಗೊಂಡು ಅವರ ಕೈಯಿಂದ ಆ ಭಾಗಗಳನ್ನು ಬರೆಯಿಸಿತು.

ಜೇಮ್ಸ್.—ಅದಕ್ಕೋಸ್ಕರ ನೀನದನ್ನು ದೇವತಾ ಪುಸ್ತಕವೆನ್ನುವುದು?

ಎಲಿಜ.—ಅಹುದು, ಅವರು ಲೇಖಕರಾಗಿ ಮಾತ್ರ ಇದ್ದರು; ಬರೆಯಿಸಿದವನು ಭಗವಂತನಲ್ಲದೆ ಮತ್ತೊಬ್ಬನಲ್ಲ.

ಜೇಮ್ಸ್.—ಬೈಬಲ್ಲಿನಲ್ಲಿರುವ ಕಥೆಗಳೆಲ್ಲ ನಿಜವಾದ ಕಥೆಗಳೋ?

ಎಲಿಜ.—ಅಹುದು, ಪ್ರತಿಯೊಂದೂ ನಿಜವಾದ ಕಥೆ.

ಜೇಮ್ಸ್.—ಹಲವು ಬಣ್ಣದ ಅಂಗಿಯನ್ನು ಜೋಸೆಫ್ ಎಂಬವನು ತೊಟ್ಟುಕೊಂಡಿದ್ದುದು ನಿಜವೆ?

ಎಲಿಜ.—ನಿಜವೆಂದು ಹೇಳಬೇಕಾಗಿದೆ.

ಜೇಮ್ಸ್.—ಒಂದೇ ಬಣ್ಣದ ಅಂಗಿಯನ್ನು ಅವನೇಕೆ ತೊಟ್ಟುಕೊಳ್ಳಲಿಲ್ಲ? ಅಂತಹ ಅಂಗಿಯನ್ನು ಮಾಡುವುದು ಸುಲಭವಲ್ಲವೆ?

ಎಲಿಜ.—ಅವನ ತಂದೆಗೆ ತನ್ನ ಇತರ ಮಕ್ಕಳಿಗಿಂತ ಅವನ ಮೇಲೆ ಹೆಚ್ಚು ಪ್ರೀತಿ ಇದ್ದಿತು; ಆ ಪಕ್ಷಪಾತದಿಂದ ಅವನಿಗೆ ಹಲವು ಬಣ್ಣದ ಅಂಗಿಯನ್ನು ಹೊಲಿಸಿಕೊಟ್ಟಿದ್ದನು.

ಜೇಮ್ಸ್.—ಆ ತಂದೆಯು ತನ್ನ ಮಕ್ಕಳಲ್ಲಿಯೇ ಒಬ್ಬನನ್ನು ಮತ್ತೊಬ್ಬನಿಗಿಂತ ಹೆಚ್ಚಾಗಿ ಪ್ರೀತಿಸುತ್ತಿದ್ದುದು ನ್ಯಾಯವೋ?

ಎಲಿಜ.—ನ್ಯಾಯವಲ್ಲ, ಅದು ತಪ್ಪು.

ಜೇಮ್ಸ್.—ಅಂತಹ ತಂದೆಯು ಶಿಷ್ಟನೆನಿಸಿಕೊಂಡಿದ್ದನೊ?

ಎಲಿಜ.—ಎನಿಸಿಕೊಂಡಿದ್ದನು; ಶಿಷ್ಟರು ಕೆಲವರು ತಪ್ಪು ಕೆಲಸವನ್ನು ಮಾಡುವುದೂ ಉಂಟು.

ಜೇಮ್ಸ್.—ಶಿಷ್ಟರು ತಪ್ಪು ಕೆಲಸವನ್ನು ಮಾಡುವುದಾದರೆ, ದುಷ್ಟರಿಂದ ಅವರನ್ನು ಪ್ರತ್ಯೇಕಿಸುವುದು ಹೇಗೆ?

ಎಲಿಜೆ.—ದುಷ್ಟರು ಮಾಡುವಷ್ಟು ಅಕೃತ್ಯಗಳನ್ನು ಶಿಷ್ಟರು ಮಾಡುವುದಿಲ್ಲ. ಶಿಷ್ಟರ ಕೆಟ್ಟತನವು ದುಷ್ಟರ ದುಷ್ಕೃತ್ಯದಷ್ಟು ಕೇಡನ್ನುಂಟುಮಾಡದು.

ಜೇಮ್ಸ್.—ಶಿಷ್ಟರು ಕೆಟ್ಟ ಕೆಲಸಗಳನ್ನು ಬಿಟ್ಟುಬಿಡಲಾರರೊ?

ಎಲಿಜೆ.—ದೈವ ಸಹಾಯವಿದ್ದರೆ ಬಿಡಬಲ್ಲರು.

ಜೇಮ್ಸ್.—ದೈವವು ಶಿಷ್ಟರಿಗೆ ಸರ್ವದಾ ಸಹಾಯವನ್ನು ಮಾಡುವುದಿಲ್ಲವೊ?

ಎಲಿಜೆ.—ಇಲ್ಲ.

ಜೇಮ್ಸ್.—ಏಕಿಲ್ಲ?

ಎಲಿಜೆ.—ಪ್ರಾಯಶಃ ಆ ಸಂದರ್ಭದಲ್ಲಿ ಅಂತಹ ಸಹಾಯಕ್ಕೆ ಅವರು ಅರ್ಹರಾಗಿರುವುದಿಲ್ಲ.

ಜೇಮ್ಸ್.—ದೈವ ಸಹಾಯವಿಲ್ಲದೆ ಮನುಷ್ಯರು ಶಿಷ್ಟರಾಗಿರಲಾರರೊ?

ಎಲಿಜೆ.—ಇಲ್ಲ, ಅವರಿಗೆ ಹಾಗಿರಲು ಮನಸ್ಸು ಬರುವುದಿಲ್ಲ.

ಜೇಮ್ಸ್.—ಅದೇಕೆ ಬರುವುದಿಲ್ಲ?

ಎಲಿಜೆ.—ಏಕೆಂದರೆ, ಅವರು ಬಹು ಕೆಟ್ಟವರು.

ಜೇಮ್ಸ್.—ಹಾಗಿರುವುದಾದರೆ ಅವರು ಶಿಷ್ಟರು ಹೇಗಾಗುವರು?

ಒಬ್ಬನೇ ಶಿಷ್ಟನೂ ದುಷ್ಟನೂ ಆಗುವುದು ಅಸಂಭವವೆಂದು ಜೇಮ್ಸ್‌ಗೆ ತೋರಿತು. ಈ ಸಂವಾದದಿಂದ ಜೇಮ್ಸ್‌ನ ವಿಮರ್ಶನ ಶಕ್ತಿಯೂ ಊಹಾ ಶಕ್ತಿಯೂ ಹೊರಪಡುವುವು. ಮಾತಿನಲ್ಲಿ ಹುಳುಕುಗಳನ್ನು ಅವನು ಬಹಳ ಬೇಗನೆ ಕಂಡುಹಿಡಿಯುತ್ತಿದ್ದನು. ಅನೇಕ ವೇಳೆ ಅವನಿಗೆ ಸರಿಯಾದ ಉತ್ತರಗಳನ್ನು ಕೊಡುವುದಕ್ಕೆ ಎಲಿಜೆಗೆ ತೋರುತ್ತಿರಲಿಲ್ಲ. ಮಗನಿಗೆ ದೈವ ಭಕ್ತಿಯು ಹೆಚ್ಚಬೇಕೆಂದು ಭಾನುವಾರದ ವ್ರತವನ್ನು ಅವನು ಮಾಡುವಂತೆ ನೋಡಿಕೊಳ್ಳುತ್ತಿದ್ದಳು.

ಜೇಮ್ಸ್ನು ಭಾನುವಾರಗಳಲ್ಲಿ ಬೈಬಲ್ಲನ್ನಲ್ಲದೆ ಇತರ ಪುಸ್ತಕಗಳನ್ನು ಓದುತ್ತಿರಲಿಲ್ಲ.

ಜೇಮ್ಸ್ನಿಗೆ ಎಂಟು ವರ್ಷ ವಯಸ್ಸಾಗಿದ್ದಾಗ ಮದ್ಯಪಾನ ನಿರೋಧ ಸಮಾಜಗಳ ಕಾರ್ಯವು ಬಹಳ ಪ್ರಬಲವಾಗಿದ್ದಿತು. ಪೂರ್ವ ಭಾಗದ ಸಂಸ್ಥಾನಗಳಲ್ಲಿ ಈ ಸಮಾಜಗಳು ಹುಟ್ಟಿ ಓಹಿಯೋ ಸಂಸ್ಥಾನದ ಕಡೆಗೂ ವ್ಯಾಪಿಸುತ್ತ ಬಂದುವು. ಮದ್ಯವು ಮನೆಗಳನ್ನೇ ಹಾಳು ಮಾಡುತ್ತಿದ್ದುದನ್ನು ಎಲಿಜೆಯು ಕಣ್ಣಾರೆ ನೋಡಿದ್ದಳು. ಅದು ಮಾಡುವ ಕೆಡಕು ತನ್ನ ಮಕ್ಕಳಿಗೂ ತಿಳಿದಿರಬೇಕೆಂದು ಒಂದು ಭಾನುವಾರ ಆ ಪ್ರಸ್ತಾಪವನ್ನೆತ್ತಿ ಎಲಿಜೆಯು, "ಮದ್ಯಪಾನವು ಪರಮನೀಚ ಕೃತ್ಯ; ನಿಮ್ಮ ತಂದೆಯೂ ಅದನ್ನು ದೂಷಿಸುತ್ತಿದ್ದನು" ಎಂದು ಹೇಳಿದಳು.

ಜೇಮ್ಸ್ನು.—ರಮ್ (Rum), ವ್ಹಿಸ್ಕಿ (Whisky) ಮುಂತಾದ ಸಾರಾಯಿಗಳಲ್ಲಿ ಯಾವುದನ್ನೂ ನಮ್ಮ ತಂದೆಯು ಕುಡಿಯುತ್ತಲೇ ಇರಲಿಲ್ಲವೊ ?

ಎಲಿಜೆ.—ಇಲ್ಲ, ಕುಡಿದು ಪ್ರಜ್ಞಾಶೂನ್ಯರಾಗಿರುವವರನ್ನು ಕಂಡರೆ ನಿಮ್ಮ ತಂದೆಗೆ ಸಹನೆಯೇ ಇರುತ್ತಿರಲಿಲ್ಲ; ಕುಡಿಯುವವರು ಸ್ವಾಭಾವಿಕವಾಗಿ ಮನೋದಾರ್ಢ್ಯವಿಲ್ಲದವರೆಂದು ಭಾವಿಸಿದ್ದನು.

ಜೇಮ್ಸ್ನು.—ಕೆಡಕನ್ನು ಮಾಡುವುದೆಂದು ತಿಳಿದ ಮೇಲೆಯೂ ಮನುಷ್ಯರು ಕುಡಿಯುವುದನ್ನು ಏಕೆ ಬಿಡುವುದಿಲ್ಲ ?

ಎಲಿಜೆ.—ಏಕೆ ಬಿಡುವುದಿಲ್ಲವೊ ಹೇಳುವುದು ಕಷ್ಟ; ಬಿಡುವುದಕ್ಕೆ ಅವರ ಕೈಯಲ್ಲಾಗದೆಂದು ಕೆಲವರು ಅಭಿಪ್ರಾಯಪಡುತ್ತಾರೆ.

ಜೇಮ್ಸ್ನು.—(**ಆಶ್ಚರ್ಯದೊಡನೆ**) ಬಿಡುವುದಕ್ಕೆ ಕೈಯಲ್ಲಿ ಹರಿಯುದೆ ?

ಎಲಿಜೆ.—ಹರಿಯುದಂತೆ ; ಅದರ ಗೀಳು ಹಿಡಿದಮೇಲೆ ಅದನ್ನು ಬಿಟ್ಟಿರಲಾರರಂತೆ.

ಜೇಮ್ಸ್ನು.—(**ದಾರ್ಢ್ಯದೊಡನೆ**) ನಾನಾದರೆ ತಡೆಯಬಲ್ಲೆನು.

ಎಲಿಜೆ.—ಪ್ರಜ್ಞೆಯನ್ನು ಹಾಳುಮಾಡುವ ಮದ್ಯವನ್ನು ಕುಡಿಯು

ವುದಕ್ಕೆ ಪ್ರಾರಂಭಿಸದಿರುವುದೇ ಉತ್ತಮ. ಕೆಟ್ಟದಾರಿಗೆ ಬಿದ್ದು ಹಿಂದಿರುಗುವುದಕ್ಕಿಂತ ಆ ದಾರಿಗೆ ಹೋಗದಿರುವುದೇ ಸುಲಭ.

ಜೇಮ್ಸ್.—ಜನರು ಮದ್ಯಪಾಯಿಗಳಾಗುವುದೇಕೆ?

ಎಲಿಜೆ.—ಏಕೆ ಮದ್ಯಪಾಯಿಗಳಾಗುವರೊ ಅದನ್ನು ಹೇಳುವುದು ಕಷ್ಟವೆಂದು ತೋರುವುದು. ಅನೇಕರು ಕುಡಿಯುವುದು ಅದರಲ್ಲಿ ಅವರಿಗೆ ಅಭಿರುಚಿಯಿರುವುದರಿಂದಲಂತೆ.

ಜೇಮ್ಸ್.—ಹಾಗಾದರೆ ಅದು ಬಹಳ ರುಚಿಯಾಗಿರುತ್ತದೆಯೊ?

ಎಲಿಜೆ.—ಅದರಲ್ಲಭಿರುಚಿಯಿರುವವರಿಗೆ ರುಚಿ ಇದ್ದೇ ಇರಬೇಕು. ''ಕೆಂಪಗೆ ಥಳಥಳಿಸುವ ದ್ರಾಕ್ಷಾ ರಸದ ಮೇಲೆ ನಿನ್ನ ದೃಷ್ಟಿಯು ಬೀಳದಿರಲಿ. ಅದು ಕೊನೆಗೆ ಕಚ್ಚಿ ಕುಕ್ಕಿ ಕೊಲ್ಲುವ ವಿಷಸರ್ಪವಾಗಿ ಪರಿಣಮಿಸುವುದು'' ಎಂದು ದೇವತಾ ಪುಸ್ತಕವು ತಿಳಿಸುತ್ತದೆ. ಇದು ವಾಸ್ತವವಾದ ಮಾತು. ಹಾಲನ್ನೂ ನೀರನ್ನೂ ಕುಡಿಯುವುದರಿಂದ ಯಾವ ಕೇಡಾದರೂ ಆಗುತ್ತದೆಯೇನು?

ಜೇಮ್ಸ್.—ಇಲ್ಲ, ಯಾವ ಬಗೆಯ ಕೇಡೂ ಆಗುವುದಿಲ್ಲ.

ಎಲಿಜೆ.—ಸರಿ, ದೇಹ ಪೋಷಕಗಳಾದ ಈ ಪಾನೀಯಗಳಿಗೂ ಪ್ರಜ್ಞೆಯನ್ನು ತಪ್ಪಿಸುವ ಮದ್ಯಗಳಿಗೂ ಇರುವ ಭೇದವು ಇದೇ.

ತನ್ನ ಮಗನು ಕುಡಿಕನಾಗದಿರುವುದಕ್ಕಾಗಿ ಎಲಿಜೆಯು ಅವನಿಗೆ ಅನೇಕ ವಿಷಯಗಳನ್ನೂ ಕಥೆಗಳನ್ನೂ ಹೇಳುತ್ತಿದ್ದಳು. ಅವುಗಳನ್ನೆಲ್ಲ ಕೇಳಿ ಕೇಳಿ ಜೇಮ್ಸ್ ಮದ್ಯಪಾನವನ್ನು ಮಾಡದೆ ಇರಬೇಕೆಂದು ದೃಢ ಸಂಕಲ್ಪ ಮಾಡಿದನು.

ಈ ಭಾನುವಾರದ ಪ್ರವಚನಗಳಲ್ಲಿ ಎಲಿಜೆಯು ಜೇಮ್ಸ್‌ಗೆ ಸ್ವಾಮಿಭಕ್ತಿಯ ವಿಷಯದಲ್ಲಿಯೂ ದೇಶವಾತ್ಸಲ್ಯದ ವಿಷಯದಲ್ಲಿಯೂ ಧೈರ್ಯ ಸ್ಥೈರ್ಯಾದಿಗಳ ವಿಷಯದಲ್ಲಿಯೂ ಅನೇಕ ಕಥೆಗಳನ್ನು ಹೇಳುತ್ತಿದ್ದಳು. ಸಂಯುಕ್ತ ಸಂಸ್ಥಾನಗಳ ಧೀರರು ಮಾಡಿದ ಸಾಹಸ ಕೃತ್ಯಗಳನ್ನು ಆಕೆಯು ವಿವರವಾಗಿ ತಿಳಿಸುತ್ತ ಬಂದಳು. ಜೇಮ್ಸ್‌ಗೆ ಸಂಯುಕ್ತ ಸಂಸ್ಥಾನಗಳ ಸಮುದಾಯದಲ್ಲಿ ಪರಮ ವಿಶ್ವಾಸವುಂಟಾ

ಗುತ್ತ ಬಂದಿತು. ಒಂದು ದಿನ ಎಲಿಜೆಯು, "ನೋಡು, ಜೆಮ್ಸ್! ನ್ಯಾಯವಾದುದನ್ನು ಮಾಡುವುದಕ್ಕೆ ಹೆದರಬೇಡ, ಹಿಂದೆಗೆಯಲೂ ಬೇಡ. ನ್ಯಾಯವೆಂದು ತಿಳಿದುದನ್ನು ಮಾಡುವುದಕ್ಕೆ ಯಾವನು ಹಿಂಜರಿಯುವನೋ ಅವನೇ ಈ ಲೋಕದಲ್ಲಿ ಪರಮ ನೀಚನಾದ ಹೇಡಿಯೆನಿಸಿಕೊಳ್ಳುವನು" ಎಂದು ಹೇಳಿದಳು.

"ನ್ಯಾಯವಾದುದನ್ನು ಮಾಡುವುದಕ್ಕೆ ಪುರುಷರು ಭಯಪಡುವ ಹಾಗೆ ನನಗೆ ತೋರುವುದಿಲ್ಲ" ಎಂದು ಜೇಮ್ಸ್ ಹೇಳಿದನು.

'ಪುರುಷರು' ಎಂಬ ಪದವನ್ನು ಜೇಮ್ಸ್ ಪ್ರಯೋಗಿಸಿದುದನ್ನು ನೋಡಿ ಈ ಬಗೆಯ ಧೈರ್ಯವನ್ನು ಪ್ರದರ್ಶಿಸುವುದಕ್ಕೆ ಹುಡುಗರಿಗೆ ಅವಕಾಶವೇ ಇಲ್ಲವೆಂಬುದಾಗಿ ಜೇಮ್ಸ್ ಭಾವಿಸಿರಬಹುದೆಂದಾಲೋಚಿಸಿ ಎಲಿಜೆಯು, "ನ್ಯಾಯವಾದುದನ್ನು ಮಾಡುವುದಕ್ಕೆ ಹುಡುಗರೂ ಭಯಪಡುವ ಹಾಗೆ ನನಗೆ ತೋರುವುದಿಲ್ಲ; ಆದರೂ ಕೆಲವು ವೇಳೆ ಹಾಗೆ ಮಾಡುವುದಕ್ಕೆ ಅವರಿಗೆ ಧೈರ್ಯವಿಲ್ಲದೆ ಹೋಗಬಹುದು" ಎಂದಳು.

"ಕೆಲವು ವೇಳೆಗಳಲ್ಲಿ ಎಂದರೆ ಯಾವಾಗ?" ಎಂದು ಜೇಮ್ಸ್ ಪ್ರಶ್ನೆಮಾಡಲು, "ಒಡನಾಡಿಗಳೋ ಸಹಪಾಠಿಗಳೋ ಅಸಮಾಧಾನ ಪಡುವರೆಂದು ಭಾವಿಸಿ, ತಾಯಿಗೋ ಉಪಾಧ್ಯಾಯರಿಗೋ ವಿಧೇಯ ರಾಗಿರುವುದಕ್ಕೆ ಧೈರ್ಯಮಾಡದೆ ಇರುವಾಗ" ಎಂದು ಎಲಿಜೆಯು ಉತ್ತರ ಕೊಟ್ಟಳು.

"ಪ್ರಾಪ್ತ ವಯಸ್ಕನಾದ ಮೇಲೆ ನನಗೆ ಅಂತಹ ಧೈರ್ಯವಿಲ್ಲದಿರ ಬಹುದೆಂದು ನೀನು ಭಾವಿಸಿದಂತೆ ನಾನು ತಿಳಿದುಕೊಂಡೆನು" ಎಂದು ಎಲಿಜೆಯ ಮರ್ಮೋದ್ಘಾಟನ ರೂಪವಾದ ಮಾತಿಗೆ ಜೇಮ್ಸ್ ಉತ್ತರ ವಿತ್ತನು.

"ನನ್ನ ಭಾವನೆಯಲ್ಲಿ, ಹುಡುಗನಾಗಿದ್ದಾಗಲೂ ಎಂಬ ಭಾವನೆ ಯಿದ್ದಿತು. ಹುಡುಗನಾಗಿದ್ದಾಗ ನ್ಯಾಯಕ್ಕೆ ಎದ್ದು ನಿಲ್ಲದವನು ಪ್ರಾಪ್ತ ವಯಸ್ಕನಾದಾಗಲೂ ನಿಲ್ಲುವುದಿಲ್ಲ. 'ಬಾಲನು ವಯಸ್ಕನ ತಂದೆ' ಎಂದು ಹೇಳುವ ಯಥಾರ್ಥವಾದ ಹಳೆಯ ಗಾದೆಯೊಂದುಂಟು. ಆದುದ

ರಿಂದ ಹೇಡಿಯಾದ ಹುಡುಗನೂ ಹೇಡಿಯಾದ ಪುರುಷನಂತೆಯೇ ತುಚ್ಛನಾಗಿರುತ್ತಾನೆ. ನಿನ್ನ ಸಹವಾಸಿಗಳೆಲ್ಲರೂ ನಿನ್ನನ್ನು ನೋಡಿ ಒಟ್ಟಾಗಿ ನಕ್ಕರೂ ನೀನು ಹೆದರದೆ ನಿನ್ನ ತಾಯಿಗೂ ಉಪಾಧ್ಯಾಯನಿಗೂ ವಿಧೇಯತೆಯನ್ನು ತೋರಿಸು'' ಎಂದು ಎಲಿಜೆಯು ಹೇಳಿದಳು.

''ಆಗಲಮ್ಮಾ! ಹಾಗೆಯೇ ಮಾಡುತ್ತೇನೆ'' ಎಂದು ಜೇಮ್ಸ್ ಉತ್ತರಕೊಟ್ಟನು.

''ನೀನು ದೊಡ್ಡವನಾದ ಮೇಲೆ ಧೈರ್ಯ ಸ್ಥೈರ್ಯಾದಿಗಳು ನಿನ್ನಲ್ಲಿ ಬಲಿಯದಿದ್ದರೆ ನಿನ್ನ ಸುತ್ತಮುತ್ತಲಿನ ವಿದ್ಯಮಾನಗಳು ನಿನ್ನನ್ನು ಪರಾಜಿತನನ್ನಾಗಿ ಮಾಡುವುವು'' ಎಂದು ಎಲಿಜೆಯು ಎಚ್ಚರಿಸಿದಳು.

''ಡ್ಯಾನಿಯಲ್ಲಿನ (Daniel) ಧೈರ್ಯವು ಅವನನ್ನು ಸಿಂಹಗಳ ಗುಹೆಗೆ ಒಯ್ದಿತಂತೆ'' ಎಂದು ಜೇಮ್ಸ್ ನುಡಿದನು.

''ನಿಜ, ನಿಜ! ಭಗವಂತನನ್ನು ಶತ್ರುವಾಗಿ ಮಾಡಿಕೊಂಡು ಆ ದೇಶದ ರಾಜನ ಗೆಳೆಯನಾಗಿರುವುದಕ್ಕಿಂತ, ಸಿಂಹಗಳ ಗುಹೆಯಲ್ಲಿ ಭಗವಂತನನ್ನು ಮಿತ್ರನನ್ನಾಗಿ ಮಾಡಿಕೊಂಡಿದ್ದುದೇ ಆ ಡ್ಯಾನಿಯಲ್ಲಿಗೆ ಉತ್ತಮವಾಗಿದ್ದಿತು. ನ್ಯಾಯಕ್ಕಾಗಿ ಹೊಡೆದಾಡುವುದರಲ್ಲಿ ನೀನು ಡ್ಯಾನಿಯಲ್ಲಂತಾದರೆ ನಾನು ತೃಪ್ತಳಾಗುವೆನು. ಅವನಿಗೆ ದೈವ ಸಹಾಯವಿರುವ ವರೆಗೂ ಆ ಸಿಂಹಗಳಿಗೆ ಅವನನ್ನು ನುಂಗುವುದಕ್ಕಾಗಲೇ ಇಲ್ಲ. ನ್ಯಾಯಕ್ಕಾಗಿ ನಿಲ್ಲುವವರಿಗೆ ಭಗವಂತನೇ ಸಹಾಯಕನಾಗುವನು'' ಎಂದು ಎಲಿಜೆಯು ಹೇಳಿದಳು.

ಮೇಲೆ ವಿವರಿಸಿದಂತೆ, ಜೇಮ್ಸ್‌ನ ಸದ್ಗುಣಗಳಿಗೆ ತಳಹದಿಯನ್ನು ಹಾಕಿದವಳು ತಾಯಿಯಲ್ಲದೆ ಮತ್ತಾರೂ ಅಲ್ಲ. ಜೇಮ್ಸನ್ನು ಮಹನೀಯನನ್ನಾಗಿ ಮಾಡಿದವಳೂ ಅವನ ತಾಯಿಯೇ.

# ಅಧ್ಯಾಯ ೭

## ವ್ಯವಸಾಯುಗಾರ

ಥಾಮಸ್ಸಿಗೆ ಇಪ್ಪತ್ತೊಂದು ವರ್ಷವೂ ಜೇಮ್ಸಿಗೆ ಹನ್ನೆರಡು ವರ್ಷವೂ ತುಂಬಿತು. ಹಿಂದೆ ಸೂಚಿಸಿದ್ದಂತೆ ಥಾಮಸ್ಸು ಕೆಲಸವನ್ನು ಹುಡುಕಿಕೊಂಡುಬರುವುದಕ್ಕಾಗಿ ಕ್ಲೀವ್ಲಾಂಡಿಗೆ ಹೋಗಿದ್ದನು. ಓಹಿಯೋ ಸಂಸ್ಥಾನಕ್ಕೆ ವಾಯುವ್ಯ ದಿಕ್ಕಿನಲ್ಲಿದ್ದ ಮಿಚಿಗನ್ ಎಂಬ ಸಂಸ್ಥಾನವು ೧೮೩೭ನೆಯ ಇಸವಿಯಲ್ಲಿ ಸಂಯುಕ್ತ ಸಂಸ್ಥಾನ ಮಂಡಲಿಗೆ ಸೇರಿತು. ಭೂಮಿಯು ಫಲವತ್ತಾಗಿದ್ದುದರಿಂದ ಸಾವಿರಾರು ಜನರು ಅಲ್ಲಿ ಜಮೀನುಗಳನ್ನು ಬೆಲೆಗೆ ತೆಗೆದುಕೊಂಡು ಕಾಡನ್ನು ಕಡಿದು ಹೊಲಗಳನ್ನು ಮಾಡುತ್ತಿದ್ದರು. ಥಾಮಸ್ಸಿಗೆ ಕೆಲಸವು ಸುಲಭವಾಗಿ ಸಿಕ್ಕಿತು. ಅವನು ಸಂತೋಷದಿಂದ ಹಿಂದಿರುಗಿ ಬಂದಾಗ ಹೊಲದಲ್ಲಿ ಜೇಮ್ಸನ್ನು ಕಂಡು, "ಎಲೋ ಜಿಮ್ಮಾ! ಇನ್ನು ನೀನು ಜವಾಬುದಾರನಾಗಿ ವ್ಯವಸಾಯದ ಕೆಲಸವನ್ನು ವಹಿಸಬೇಕು; ನಾನು ಮಿಚಿಗನ್ನಿಗೆ ಹೋಗುತ್ತೇನೆ; ಅಲ್ಲಿ ನನಗೆ ಕೆಲಸ ಸಿಕ್ಕಿದೆ" ಎಂದು ಹೇಳಿದನು. ಇದು ಜೇಮ್ಸನ ಕಿವಿಗೆ ಬೀಳದೆ, ಅವನು "ಎಲ್ಲಿಗೆ?" ಎಂದು ಥಾಮಸ್ಸನ್ನು ಕೇಳಿದನು. "ಮಿಚಿಗನ್ನಿಗೆ; ಅದು ನಮ್ಮ ಕಾಡಿಗಿಂತಲೂ ದೊಡ್ಡ ಕಾಡು" ಎಂದು ಥಾಮಸ್ಸು ಹೇಳಿದನು. "ಅದು ನನಗೂ ತಿಳಿದಿದೆ; ಅಲ್ಲಿಗೆ ಹೋಗಿ ಏನು ಮಾಡುತ್ತೀಯೆ?" ಎಂದು ಜೇಮ್ಸು ಕೇಳಿದುದಕ್ಕೆ ಥಾಮಸ್ಸು, "ಕಾಡನ್ನು ಕಡಿಯುವ ಕೆಲಸ ಮಾಡುತ್ತೇನೆ; ಅದಕ್ಕಾಗಿ ತಿಂಗಳಿಗೆ ೧೨ ಡಾಲರು ಸಂಬಳವು ಬರುವುದು" ಎಂದನು.

ಈ ಸಂಬಳವು ಬಹಳ ಹೆಚ್ಚೆಂದು ಜೇಮ್ಸಿಗೆ ತೋರಿ, "ಅಷ್ಟು ಇರಲಾರದು; ಅಷ್ಟೊಂದು ಬರುತ್ತದೆಯೆ?" ಎಂದು ಪ್ರಶ್ನೆಮಾಡಲು ಥಾಮಸ್ಸು, "ಬರುತ್ತದೆ, ತಿಂಗಳಿಗೆ ೧೨ ಡಾಲರು. ಕೆಲಸವೇನೋ ಕಷ್ಟ; ದಿನವೆಲ್ಲ ದುಡಿಯಬೇಕು. ಹೋಗಲಿ! ಅಮ್ಮನಿಗೆ ಒಳ್ಳೆಯ ಮನೆಯನ್ನು ಕಟ್ಟಿಕೊಡಬಹುದು" ಎಂದು ಸಂತೋಷದಿಂದ ಹೇಳಿದನು.

ಜೇಮ್ಸ್‌ನಿಗೂ ಬಹಳ ಸಂತೋಷವಾಯಿತು. ಇಬ್ಬರೂ ಮನೆಗೆ ಬಂದು, ಥಾಮಸ್ಸಿಗೆ ಕೆಲಸವು ಸಿಕ್ಕಿದ ಸಂಗತಿಯನ್ನು ತಾಯಿಗೆ ತಿಳಿಸಿದರು.

ಎಲಿಜೆ.—ದೇವರ ದಯದಿಂದ ಎಲ್ಲವೂ ನಮಗೆ ಅನುಕೂಲವಾಗುವುದೆಂದು ತೋರುವುದು. ಆದರೆ ನಾನು ಊಹಿಸಿದುದಕ್ಕಿಂತ ದೂರವಾಗಿ ಹೋಗಬೇಕಾಯಿತಲ್ಲಾ!

ಥಾಮಸ್ಸ್.—ಸ್ವಲ್ಪ ದೂರವೇ ಅಹುದು; ಆದರೇನು? ಒಳ್ಳೆಯ ಸಂಬಳ.

ಜೇಮ್ಸ್.—(ಕುತೂಹಲದಿಂದ) ಅದೆಷ್ಟು ದೂರ?

ಥಾಮಸ್ಸ್.—ಎಷ್ಟೋ ಸರಿಯಾಗಿ ಗೊತ್ತಿಲ್ಲ; ನನ್ನ ಅಪೇಕ್ಷೆಯಿದ್ದುದಕ್ಕಿಂತಲೂ ದೂರ.

ಜೇಮ್ಸ್.—ಮರದ ಗುಡಿಸಿಲಿನಲ್ಲಿಯೋ ವಾಸ?

ಥಾಮಸ್ಸ್.—ಅಹುದು; ಆದರೆ ಅದು ಈ ಮನೆಯ ಅರ್ಧದಷ್ಟು ಇಲ್ಲ, ಚೆನ್ನಾಗಿಯೂ ಇಲ್ಲ.

ಜೇಮ್ಸ್.—ಎಷ್ಟು ದಿವಸವಿರಬೇಕು?

ಥಾಮಸ್ಸ್.—ಆರು ತಿಂಗಳೇನೋ ಗೊತ್ತು, ಹೆಚ್ಚಿದರೂ ಹೆಚ್ಚಬಹುದು.

ಎಲಿಜೆ.—ಜೆಮ್ಸ್! ಇದುವರೆಗೂ ಥಾಮಸ್ಸ್ ಮಾಡುತ್ತಿದ್ದ ವ್ಯವಸಾಯದ ಕೆಲಸದ ಭಾರವು ನಿನ್ನ ಮೇಲೆ ಬೀಳುತ್ತದೆ; ನಿನ್ನ ಜವಾಬುದಾರಿಯು ಹೆಚ್ಚಿತು.

ಜೇಮ್ಸ್.—ಹೆಚ್ಚಲಿ; ಆ ಕೆಲಸವನ್ನು ನಾನು ಮಾಡಬಲ್ಲೆನು. ಥಾಮಸ್ಸ್ ಹೊರಟುಹೋಗುವನಲ್ಲಾ ಎಂದು ವ್ಯಥೆಯಾಗಿದೆ.

ಎಲಿಜೆ.—ಅವನ ಅಗಲಿಕೆಯನ್ನು ಸಹಿಸಿಕೊಂಡಿರುವುದು ಕಷ್ಟ; ಮಾಡತಕ್ಕುದೇನು? ಹೇಗೋ ಸಹಿಸಿಕೊಂಡಿರಬೇಕು.

ಥಾಮಸ್ಸ್.—ನಿನಗೆ ಒಳ್ಳೆಯ ಮನೆಯೊಂದಾದರೆ ನಮ್ಮೆಲ್ಲರಿಗೂ ಸಂತೋಷ.

ಜೇಮ್ಸ್.—ಆ ಹೊಸ ಮನೆಯು ಬಹಳ ಚೆನ್ನಾಗಿರಬಹುದಲ್ಲವೆ?

ಎಲಿಜೆ.—ಆದಮೇಲೆ ಚೆನ್ನಾಗಿಯೇ ಇರುತ್ತದೆ.

ಥಾಮಸ್ಸ್.—ಆಗಿಯೇ ಆಗುತ್ತದೆ.

ಥಾಮಸ್ಸ್ ಇಷ್ಟೊಂದು ದೃಢವಾಗಿ ಮಾತಾಡುವುದಕ್ಕೆ ಕಾರಣವಿದ್ದಿತು. ಒಳ್ಳೆಯ ಮನೆಯನ್ನು ಕಟ್ಟಬೇಕೆಂದು ಲೆಕ್ಕ ಹಾಕಿಕೊಂಡು ಅವನು ಮರಗಳನ್ನು ಕಡಿದು ಕೂಡಿಟ್ಟಿದ್ದನು; ಕೂಲಿಗೆ ಹಣವಿಲ್ಲದೆ ಕಟ್ಟಡದ ಕೆಲಸವು ನಿಂತಿದ್ದಿತು. ಮನೆಯನ್ನು ಕಟ್ಟಿ ಪೂರಯಿಸಬೇಕೆಂದೇ ಅವನು ದೂರ ದೇಶದಲ್ಲಿ ಸಂಬಳಕ್ಕೆ ನಿಂತುದು.

ಹೊರಡುವುದಕ್ಕೆ ಥಾಮಸ್ಸ್ ಸಾಮಾನುಗಳನ್ನು ಸಿದ್ಧಪಡಿಸಿಕೊಂಡನು; ಹೊಲದಲ್ಲಿ ನಡೆಯಬೇಕಾದ ಕೆಲಸಗಳನ್ನೆಲ್ಲ ತಮ್ಮನಿಗೆ ತೋರಿಸಿಕೊಟ್ಟನು. ನೆಲವನ್ನು ಉಳುವುದು, ಗೋಧಿಯನ್ನು ಬಿತ್ತುವುದು, ಪೈರನ್ನು ನಾಟುವುದು, ಉರುಳುಗೆಡ್ಡೆಯನ್ನು ಹೂಳುವುದು, ಇನ್ನೂ ಇತರ ಅನೇಕ ಚಿಲ್ಲರೆಯ ಕೆಲಸಗಳನ್ನು ಮಾಡುವುದು—ಇವುಗಳ ಮರ್ಮವನ್ನು ಥಾಮಸ್ಸ್ ತನ್ನ ತಮ್ಮನಿಗೆ ತಿಳಿಸಿದನು.

ಥಾಮಸ್ಸ್ ಮಿಚಿಗಸ್ಸಿಗೆ ಪ್ರಯಾಣಮಾಡಿದನು; ಹೊರಟುಹೋಗುವನಲ್ಲಾ ಎಂದು ಎಲ್ಲರೂ ಕಣ್ಣೀರನ್ನು ಸುರಿಸಿದರು. ಅಣ್ಣಾತಮ್ಮಂದಿರಿಬ್ಬರಿಗೂ ಪರಸ್ಪರ ಪ್ರೀತಿಯು ಹೆಚ್ಚಾಗಿದ್ದುದರಿಂದ ಜೇಮ್ಸನ ವ್ಯಥೆಯು ಮತ್ತಷ್ಟು ಹೆಚ್ಚಿತು. ತಮ್ಮನು ಪ್ರತಿಭಾಶಾಲಿಯೆಂದು ಅಣ್ಣನು ಹಿಗ್ಗುತ್ತಿದ್ದನು; ಅಣ್ಣನು ನಿರ್ವಾಹಶಾಲಿಯೆಂದು ತಮ್ಮನು ಹೊಗಳುತ್ತಿದ್ದನು. ಅಣ್ಣನು ಹೊರಟುಹೋದುದಕ್ಕಾಗಿ ಜೇಮ್ಸ್ ವ್ಯಥೆಪಡುತ್ತ ನಿಲ್ಲಲಿಲ್ಲ; ಕೆಲಸಮಾಡಲು ಹೊರಟನು. ಅಣ್ಣನ ಸಂಗಡ ನಾಲ್ಕು ವರ್ಷಗಳಿಂದಲೂ ಅವನು ಬೇಸಾಯದ ಕೆಲಸಗಳನ್ನು ಮಾಡುತ್ತಿದ್ದುದರಿಂದ ಅವುಗಳೆಲ್ಲವನ್ನೂ ಚೆನ್ನಾಗಿ ತಿಳಿದಿದ್ದನು; ದುಡುಕಿ ಯಾವ ಕೆಲಸವನ್ನೂ ಮಾಡುತ್ತಿರಲಿಲ್ಲ. ಬೆಳೆಯು ಕೆಟ್ಟರೆ ಮನೆಯವರಿಗೆಲ್ಲ ಬಹು ಕಷ್ಟ ಸಂಭವಿಸುವ ಸಂಗತಿಯು ಅವನ ನೆನಪಿನಲ್ಲಿ ಸರ್ವದಾ ಇದ್ದುದರಿಂದ ಅವನು ಹಗಲೂ ಇರುಳೂ ದುಡಿಯುತ್ತಿದ್ದನು.

ಪ್ರಕೃತಿ ಸೌಂದರ್ಯದಲ್ಲಿ ಸಾಮಾನ್ಯ ಜನರಿಗಿಂತ ಜೇಮ್ಸ್‌ಗೆ ಅಭಿರುಚಿಯು ಹೆಚ್ಚಾಗಿದ್ದಿತು. ನದಿ, ಬೆಟ್ಟ, ಕಾಡು—ಇವುಗಳ ಸ್ವಾಭಾವಿಕ ಸೌಂದರ್ಯವು ಇವನನ್ನು ದೊಡ್ಡವರಿಗಿಂತಲೂ ಹೆಚ್ಚಾಗಿ ಆಕರ್ಷಿಸುತ್ತಿದ್ದಿತು.

ಆರೆಂಜಿನ ಸುತ್ತಲೂ ಗುಡ್ಡಗಳೂ ಕಣಿವೆಗಳೂ ಹೇರಳವಾಗಿವೆ. ಈಶಾನ್ಯ ದಿಕ್ಕಿನಲ್ಲಿ ಷೆಗ್ರೀನ್ ಎಂಬ ಸಣ್ಣ ನದಿಯು ಹರಿಯುತ್ತದೆ. ನೈರುತ್ಯ ದಿಕ್ಕಿನಲ್ಲಿ ಮೂರು ಮೈಲಿಗಳೊಳಗೆ ಸಣ್ಣ ಬೆಟ್ಟದ ಸಾಲೊಂದಿರುತ್ತದೆ. ಸಮಯವು ದೊರೆತಾಗ ಜೇಮ್ಸ್ ಈ ರಮಣೀಯ ಪ್ರದೇಶಗಳ ವೈಚಿತ್ರ್ಯವನ್ನು ನೋಡಿ ಬೆರಗಾಗಿ ದೈವ ಮಹಿಮೆಯನ್ನು ಶ್ಲಾಘಿಸುತ್ತಿದ್ದನು.

ಈ ಕಾಲದಲ್ಲಿ, ಪಶ್ಚಿಮ ಪ್ರಾಂತದ ಕಾಡು ಜಮೀನನ್ನು ಸಂಪಾದಿಸುವುದರಿಂದ ಬೇಗನೆ ಐಶ್ವರ್ಯವಂತರಾಗುವೆವೆಂಬ ಹುಚ್ಚು ಪೂರ್ವ ಪ್ರಾಂತದವರಿಗೆ ಹಿಡಿದು ಅನೇಕ ಮಂದಿ ತಾವು ಕಾಣದ ಭೂಮಿಯನ್ನು ಸಾವಿರಾರು ಎಕರೆಗಳಂತೆ ಕೊಂಡುಕೊಂಡರು. ಮಧ್ಯಪ್ರಾಂತದವರೂ ಇತರ ಪ್ರಾಂತದವರೂ ಸಾವಿರಾರು ಮಂದಿ ತಮ್ಮ ಜಮೀನುಗಳನ್ನೂ ಮನೆಗಳನ್ನೂ ಮಾರಿ ಈ ಉದ್ದೇಶದಿಂದಲೇ ಪಶ್ಚಿಮ ದಿಕ್ಕಿಗೆ ಹೊರಟರು. ಥಾಮಸ್ ಮಿಚಿಗನ್ನಿಗೆ ಹೊರಡುವುದಕ್ಕೆ ಇದೂ ಒಂದು ಉದ್ದೇಶವಾಗಿದ್ದರೂ ಇರಬಹುದು.

ಜೇಮ್ಸ್ ಇತರ ಕೆಲಸಗಳನ್ನು ಹಚ್ಚಿಕೊಳ್ಳದೆ ತನ್ನ ಕೆಲಸವನ್ನು ಕೈಯಲ್ಲಾದ ಮಟ್ಟಿಗೂ ಜಾಗರೂಕತೆಯಿಂದ ಮಾಡುತ್ತಿದ್ದನು ; ಯಾವಾಗ ನೋಡಿದರೂ ಹೊಲದಲ್ಲಿಯೇ ಇರುತ್ತಿದ್ದನು. ಹೊಲದ ಕೆಲಸಗಳು ಬಹು ಸಮರ್ಪಕವಾಗಿ ನಡೆಯುತ್ತಿದ್ದುವು. ಇವನ ಚಟುವಟಿಕೆಯನ್ನೂ ಚಾತುರ್ಯವನ್ನೂ ನೋಡಿ ನೆರೆಯವರು ವಿಸ್ಮಿತರಾದರು. ಮೂರ್ತಿಯು ಚಿಕ್ಕದಾಗಿದ್ದರೂ ಕೀರ್ತಿಯು ದೊಡ್ಡದಾಗಿದ್ದಿತು. ಜೇಮ್ಸ್ ಇಂದಿನ ವರೆಗೂ ಹುಟ್ಟಿದ ಸ್ಥಳದಲ್ಲಿಯೇ ಇದ್ದು ದೊಡ್ಡ ಹಳ್ಳಿಯನ್ನು ಕೂಡ ನೋಡಿರಲಿಲ್ಲ. ಪಟ್ಟಣಗಳ ವಿಚಾರ

ವಂತೂ ಅವನಿಗೆ ತಿಳಿದೇ ಇರಲಿಲ್ಲ. ಆದಕಾರಣ, ತನಗಿಂತಲೂ ಹೆಚ್ಚು ಸುಖಪಡುವವರು ಇರುವರೆಂದು ಅವನಿಗೆ ಹೇಗೆ ತಿಳಿದೀತು? ಅವನೇನೋ ಬಹಳ ಸಂತೋಷದಿಂದಲೇ ಇರುತ್ತಿದ್ದನು. ಗುಡಿಸಿಲಿನಲ್ಲಿ ವಾಸವಾಗಿದ್ದರೂ ಜೇಮ್ಸನಿಗೂ ಇವನ ತಾಯಿ, ಅಣ್ಣ, ಅಕ್ಕಂದಿರಿಗೂ ಇರುವ ಪರಸ್ಪರವಾದ ಪ್ರೀತಿಯು, ರಾಜ ಭವನದಲ್ಲಿ ವಾಸವಾಗಿರುವ ಬಂಧು ಜನಕ್ಕೆ ಇರಬಹುದೆಂದು ಎಲ್ಲರೂ ಊಹಿಸುವುದಕ್ಕಿಂತಲೂ ಹೆಚ್ಚಾಗಿಯೇ ಇದ್ದಿತು. ಜೇಮ್ಸ್ ಗುಣಗುಟ್ಟುವ ಹುಡುಗನಾಗಿರಲಿಲ್ಲ; ದೇವರು ಕೊಟ್ಟಷ್ಟರಲ್ಲಿಯೇ ತೃಪ್ತಿಪಡುತ್ತಿದ್ದನು.

ಆರೆಂಜು ಪಾಳ್ಯದ ಸುತ್ತುಮುತ್ತಲೂ ಹೊಸ ಜನರು ಬಂದು ಸೇರಿದ್ದರು. ಕಳೆದ ಹದಿನಾಲ್ಕು ವರ್ಷಗಳಲ್ಲಿ ಆರೆಂಜಿನ ಸ್ಥಿತಿಯು ಬದಲಾಯಿಸಿದ್ದಿತು: ನರಿ ತೋಳಗಳ ನೆಲೆಯಾಗಿದ್ದ ಸುತ್ತಮುತ್ತಣ ಕಾಡುಗಳು ಉತ್ತಮ ವ್ಯವಸಾಯದ ಜಮೀನುಗಳಾಗಿ ನೇತ್ರಾನಂದವನ್ನುಂಟುಮಾಡುತ್ತಿದ್ದುವು; ವ್ಯವಸಾಯಕ್ಕೆ ಬೇಕಾದ ಉಪಕರಣಗಳೂ ಸುಲಭವಾಗಿ ದೊರೆಯುತ್ತಿದ್ದುವು; ಮರವನ್ನು ಕೊಯ್ಯುವ ಕಾರ್ಖಾನೆಯೂ, ಬೂದಿಯಿಂದ ಪೊಟಾಷನ್ನು ತಯಾರ್ಮಾಡುವ ಕಾರ್ಖಾನೆಯೂ ಏರ್ಪಾಡಾಗಿದ್ದುವು; ಬಡಗಿಯವನೊಬ್ಬನು ಅಲ್ಲಿಗೆ ಬಂದು ನೆಲೆಗೊಂಡಿದ್ದನು. ಜೇಮ್ಸ್ ನೆರೆಯವರೊಡನೆ ಸ್ನೇಹವನ್ನು ಬೆಳೆಯಿಸುತ್ತಿದ್ದನು. ಒಂದು ದಿನ ಎಲಿಜೆಯೊಡನೆ, "ಅಮ್ಮಾ! ನಮ್ಮ ನೆರೆಯವನಾದ ಲಾಂಪರಿನೊಡನೆ ಅದಲು ಬದಲು ಕೆಲಸಕ್ಕೆ ಏರ್ಪಾಡು ಮಾಡಿಕೊಂಡಿದ್ದೇನೆ" ಎಂದನು. "ಹಾಗೆಂದರೇನಪ್ಪಾ?" ಎಂದು ತಾಯಿ ಕೇಳಿದಳು. "ಅವನಿಗೆ ಆಗಾಗ ಒಬ್ಬ ಆಳು ಬೇಕಂತೆ; ಹಾಗೆಯೇ ನನಗೂ ಬೇಕು. ಅವನ ಹೊಲದಲ್ಲಿ ನಾನು ಮಾಡುವ ಕೆಲಸಕ್ಕೆ ಪ್ರತಿಯಾಗಿ ಅವನು ನಮ್ಮ ಹೊಲದಲ್ಲಿ ನನಗೆ ಬೇಕಾದಾಗ ಬಂದು ಕೆಲಸ ಮಾಡುತ್ತಾನೆ. ಅವನಲ್ಲಿ ಆರಿನ ಎತ್ತುಗಳಿವೆ. ಅವುಗಳನ್ನು ನಾನು ತಂದು ಕೆಲಸ ಮಾಡಿಕೊಂಡು ಪ್ರತಿಯಾಗಿ ಅವನ ಹೊಲದಲ್ಲಿ ಕೆಲಸ ಮಾಡುತ್ತೇನೆ. ನಾವು ಹಣ ವೆಚ್ಚಮಾಡಬೇಕಾದ ಕೆಲಸವಿಲ್ಲ" ಎಂದು ಉತ್ತರ ಕೊಟ್ಟನು. ತಾಯಿಯು ಸಂತೋಷಪಟ್ಟು, "ಒಳ್ಳೆಯ

ವಿಪರ್ಾಡು! ನೀನು ಬುದ್ಧಿವಂತ. ನಿನಗಿಂತಲೂ ಅವನು ದೊಡ್ಡವನು. ವ್ಯವಸಾಯುದ ವಿಷಯುದಲ್ಲಿ ಬೇಕಾದಾಗ ನೀನು ಅವನ ಸಲಹೆಯನ್ನು ಕೇಳಿ ತಿಳಿದುಕೊಳ್ಳಬಹುದು'' ಎಂದಳು. ''ಒಬ್ಬನಿಗಿಂತ ಇಬ್ಬರು ಮೇಲು ಎಂದು ಪದೇ ಪದೇ ನೀನು ಹೇಳುತ್ತೀಯಲ್ಲವೆ?'' ಎಂದು ಜೇಮ್ಸ್ ಮುಗುಳ್ನಗೆಯೊಡನೆ ಹೇಳಿದನು. ''ಇಬ್ಬರೂ ನಿರ್ವಾಹ ಶಾಲಿಗಳಾಗಿರುವ ಪಕ್ಷಕ್ಕೆ ಮೇಲು. ಹೊಸ ಕೆಲಸಕ್ಕೆ ಕೈ ಹಾಕುವವ ರಿಗೆ ಬುದ್ಧಿಯೂ ವಿವೇಕವೂ ಇದ್ದೇ ಇರಬೇಕು'' ಎಂದು ಎಲಿಜೆಯು ಹೇಳಿದಳು.

ವಿಷಯ ಗ್ರಹಣಕ್ಕೆ ಓದು ಬರೆಹಗಳು ಸಹಕಾರಿಗಳೇ ಹೊರತು ಆವಶ್ಯಕಗಳಲ್ಲ. ಅಕ್ಷರಸ್ಥರಲ್ಲದ ಪುರುಷರೂ ಖ್ಯಾತಿವಂತರಾಗಿರುತ್ತಾರೆ. ಓದು ಬರೆಹಗಳು ಬಾರದ ಹೈದರನು ೧೮ನೆಯ ಶತಮಾನದಲ್ಲಿ ಮೈಸೂರು ಸಂಸ್ಥಾನಕ್ಕೆಲ್ಲ ಒಡೆಯನಾದನು. ೧೯ನೆಯ ಶತಮಾನದ ಪೂರ್ವಾರ್ಧದಲ್ಲಿ ರಣಜಿತಸಿಂಗನು ಓದು ಬರೆಹಗಳು ಬಾರದೆಯೇ ಪಂಜಾಬಿನಲ್ಲಿ ದೊಡ್ಡ ಸಂಸ್ಥಾನವೊಂದನ್ನು ಸ್ಥಾಪಿಸಿ ಕೀರ್ತಿಯನ್ನು ಪಡೆದನು. ಓದು ಬರೆಹಗಳು ಪರಾಧೀನತೆಯನ್ನು ಕಡಿಮೆಮಾಡುವುವು, ಆತ್ಮಾವಲಂಬನ ಶಕ್ತಿಯನ್ನು ಪ್ರಕಾಶಗೊಳಿಸುವುವು. ಓದು ಬರೆಹ ಗಳು ಬಾರದಿದ್ದವರು ಪ್ರಖ್ಯಾತರಾದ ಶಿಲ್ಪಿಗಳೂ ಆಗಿರುತ್ತಾರೆ. ಬಂಡಿ ಗಳ ಸಾಲನ್ನೆಳೆಯುವುದಕ್ಕೆ 'ಲೋಕೊಮೊಟಿವ್' ಎಂಬ ಯಂತ್ರವನ್ನು ನಿರ್ಮಿಸಿದ 'ಜಾರ್ಜ್ ಸ್ಟೀವನ್‌ಸನ್' ಎಂಬ ಮಹನೀಯನ ವಿಷಯ ವನ್ನು ಇಲ್ಲಿ ಹೇಳಬಹುದು: ಒಂದು ಕಲ್ಲಿದ್ದಲಿನ ಕಾರ್ಖಾನೆಯಲ್ಲಿ ಅವನು ಒಂದು ಯಂತ್ರದ ಕಾವಲಾಗಿದ್ದನು. ಆಗ ಅವನಿಗೆ ೧೮ ವರ್ಷ ವಯಸ್ಸು. ಅವನಿಗೆ ಓದುವುದಕ್ಕೇ ಆಗಲಿ ಬರೆಯುವುದಕ್ಕೇ ಆಗಲಿ ಬರುತ್ತಿರಲಿಲ್ಲ. ಶನಿವಾರದ ಅಪರಾಹ್ಣದಲ್ಲಿ ಕಾರ್ಖಾನೆಯ ಕೂಲಿಯ ಜನರು ಸಾರಾಯಿಯ ಅಂಗಡಿಗಳಿಗೂ ಹುಂಜನ ಕಾಳಗಗಳಿಗೂ ಹೋಗಿ ದುಡ್ಡನ್ನು ಕಳೆದುಕೊಳ್ಳುತ್ತಿರುವ ವೇಳೆಗಳಲ್ಲಿ, ಜಾರ್ಜ್ ಸ್ಟೀವನ್‌ಸನ್ನನು ಕಾರ್ಖಾನೆಯೊಳಗೆ ಕುಳಿತು, ಯಂತ್ರವನ್ನು ಬಿಚ್ಚಿ ತೊಳೆದು, ಪುನಃ ಆ ಯಂತ್ರವನ್ನು ಜೋಡಿಸಿಡುತ್ತಿದ್ದನು; ಯಂತ್ರದ

ಒಂದೊಂದು ಭಾಗವೂ ಮಾಡುವ ಕೆಲಸಗಳನ್ನು ಅನನ್ಯ ಭಾವದಿಂದ ಪರೀಕ್ಷಿಸುತ್ತಿದ್ದನು. ಆ ಯಂತ್ರವೇ ಅವನಿಗೆ ಗುರುವಾಯಿತು. ಬೇರೆ ಗುರುವಿದ್ದಿದ್ದರೂ ಆತನು ಅವನಿಗೆ, "ಯಂತ್ರದ ಭಾಗಗಳು ಮಾಡುವ ಕೆಲಸಗಳನ್ನು ಅನನ್ಯ ಭಾವದಿಂದ ಪರೀಕ್ಷಿಸಯ್ಯಾ! ಯಂತ್ರದ ನಿರ್ಮಾಣ ಕ್ರಮವು ನಿನಗೆ ತಿಳಿಯಬರುವುದು" ಎಂದು ಮಾತ್ರ ಹೇಳು ತ್ತಿದ್ದನಲ್ಲವೆ!

ನೋಡಬೇಕಾದವನೂ ವಿದ್ಯಾರ್ಥಿ, ತಿಳಿಯಬೇಕಾದವನೂ ವಿದ್ಯಾರ್ಥಿ. ಹೀಗಿರುವಲ್ಲಿ, ಜೇಮ್ಸ್ ತನ್ನ ಸೂಕ್ಷ್ಮಬುದ್ಧಿಯಿಂದ ವ್ಯವಸಾಯದ ಕ್ರಮಗಳನ್ನು ಪರೀಕ್ಷಿಸಿ ತಿಳಿದುಕೊಳ್ಳಲಾರಂಭಿಸಿದನು. ವ್ಯವಸಾಯದ ಜಮೀನೇ ಅವನಿಗೆ ಗುರುವಾಯಿತು. ಉಪಯುಕ್ತ ವಾದ ಅನೇಕ ವಿಷಯಗಳನ್ನು ಅವನು ಕಲಿತನು. ಮನಸ್ಸಿಟ್ಟು ಕೆಲಸ ಮಾಡುವುದಾದರೆ ಬೇಸಾಯದಿಂದಲೂ ಅನೇಕ ವಿಷಯಗಳನ್ನು ಕಲಿಯ ಬಹುದೆಂದು ಅವನಿಗೆ ಸಿದ್ಧಾಂತವಾಯಿತು.

ಬೇಸಾಯದಲ್ಲಿಯೇ ಮಗ್ನನಾಗಿರುವ ತನ್ನ ಮಗನನ್ನು ನೋಡಿ ಎಲಿಜೆಯು ಒಂದು ದಿವಸ, "ಜಿಮ್ಮಾ! ನೀನು ಯಾವಾಗಲೂ ಈ ಹೊಲದ ಕೆಲಸದಲ್ಲಿಯೇ ಕಾಲವನ್ನು ಕಳೆಯಬಾರದೆಂಬುದು ನನ್ನ ಬಯಕೆ" ಎಂದಳು.

ಜೇಮ್ಸ್.—ಹೊಲದ ಕೆಲಸವಲ್ಲದೆ ನಾನೇನನ್ನು ಮಾಡಬೇಕು?

ಎಲಿಜೆ.—ಏನನ್ನು ಮಾಡಬೇಕೊ ನಾನರಿಯೆನು; ಅದು ದೈವಾಧೀನ ವಾದುದು, ಮನುಷ್ಯ ಮಾತ್ರದವನಿಗೆ ತಿಳಿಯುವುದಿಲ್ಲ. ನೀನು ವಿದ್ಯಾವಂತನಾಗಬೇಕೆಂಬುದು ನನ್ನ ಹಾರೈಕೆ.

ಜೇಮ್ಸ್.—ವಿದ್ಯೆಯಿಂದ ಅಷ್ಟು ಪ್ರಯೋಜನವಿರುವ ಪಕ್ಷಕ್ಕೆ ವಿದ್ಯಾ ವಂತನಾಗಬೇಕೆಂದು ನಾನೂ ಬಯಸುತ್ತೇನೆ.

ಎಲಿಜೆ.—ವಿದ್ಯೆಯಂತಹ ಧನವು ಪ್ರಪಂಚದಲ್ಲಿ ಇಲ್ಲವೇ ಇಲ್ಲ. ಎಷ್ಟು ವಿದ್ಯೆಯನ್ನು ಕಲಿತರೂ ತೀರದು.

ಜೇಮ್ಸ್.—ಅದೇನೋ ನಿಜ. ಹೊಲದ ಕೆಲಸವನ್ನು ಮಾಡುವುದಕ್ಕೆ ಎಷ್ಟೋ ವಿಷಯಗಳನ್ನು ತಿಳಿದಿರಬೇಕು; ಅನೇಕ ವರ್ಷಗಳು ಕಲಿತರೂ ತೀರುವುದಿಲ್ಲ.

ಎಲಿಜೆ.—ನಿಜ, ನೀನು ವಿದ್ವಾಂಸನಾಗಬೇಕೆಂಬ ಆಸೆ ನನಗೆ ಬಹಳ ವಾಗಿದೆ.

ಜೇಮ್ಸ್.—ನನಗೆ ಹಾಗಿಲ್ಲ.

ಎಲಿಜೆ.—ಏನು? ವಿದ್ಯಾವ್ಯಾಸಂಗ ಮಾಡಿ ವಿದ್ವಾಂಸನಾಗಬೇಕೆಂಬ ಆಸೆ ಇಲ್ಲವೆ?

ಜೇಮ್ಸ್.—ಆಸೆಯೇನೋ ನನಗೂ ಇದೆ; ಆದರೆ ಅದು ಸಾಗುವ ಬಗೆ ಯಾವುದು?

ಎಲಿಜೆ.—ನಾನರಿಯೆನು, ಅದು ದೈವಾಧೀನವೆಂದು ನಾನು ನಿಶ್ಚಿಂತಳಾ ಗಿರಬೇಕು; ಆದರೆ ನಾನು ಹಾಗಿಲ್ಲ, ಬಹಳ ಚಿಂತೆಗೆ ಗುರಿ ಯಾಗಿದ್ದೇನೆ.

ಜೇಮ್ಸ್.—ನಾನು ಗುರಿಯಾಗಿಲ್ಲ.

ಜೇಮ್ಸನ ರೀತಿಯನ್ನು ನೋಡಿದರೆ ಬೇಸಾಯದಲ್ಲಿಯೇ ಅವನ ಮನಸ್ಸು ಮಗ್ನವಾಗಿದ್ದಿತೆಂದು ತೋರಿಬರುವುದು.

## ಅಧ್ಯಾಯ ೮

## ಬಡಗಿಯ ಹುಡುಗ

ಏಳು ತಿಂಗಳು ಕಳೆಯಿತು. ಥಾಮುಸ್ಸು ಬರುವುದನ್ನು ಜೇಮ್ಸ್ಸು ನಿರೀಕ್ಷಿಸುತ್ತಿದ್ದನು. ಒಂದಾನೊಂದು ದಿನ ದೂರದಲ್ಲಿ ಬರುತ್ತಿದ್ದ ಥಾಮುಸ್ಸನ್ನು ಜೇಮ್ಸ್ಸು ಕಂಡು, "ಓಹೋ! ಥಾಮುಸ್ ಬಂದನು! ಬಂದನು!" ಎಂದು ಗಟ್ಟಿಯಾಗಿ ಕೂಗಿ ಥಾಮುಸ್ಸಿಗೆ ಎದುರಾಗಿ ಓಡಿ ಹೋದನು. ಎಲಿಜೆಯು ಈ ಕೂಗನ್ನು ಕೇಳಿ ಮನೆಯ ಬಾಗಿಲಿಗೆ ಬಂದಳು. ಆಗ ಜೇಮ್ಸ್ಸು ಹಿಂದಿರುಗಿ ನೋಡುತ್ತ, "ಅಗೋ! ಥಾಮುಸ್ ಬಂದನು" ಎಂದು ಪುನಃ ಕೂಗಿ ಓಡಿದನು. ಎಲಿಜೆಯೂ ಮಗನನ್ನು ನೋಡುವುದಕ್ಕೆ ಮನೆಯಿಂದ ಹೊರಟಳು.

ಥಾಮುಸ್ಸಿನ ಬಳಿಗೆ ಬಂದು ಜೇಮ್ಸ್ಸು ಅವನನ್ನು ತಬ್ಬಿಕೊಂಡನು; ಇಬ್ಬರೂ ಆನಂದಭರಿತರಾದರು; ಒಬ್ಬನ ಹೆಗಲಮೇಲೊಬ್ಬನು ಕೈಹಾಕಿಕೊಂಡು ಮನೆಯ ಕಡೆಗೆ ನಡೆಯುತ್ತ ಬಂದರು.

ಜೇಮ್ಸ್ಸು.—ಅಮ್ಮನಿಗೆ ಮನೆ ಆದೀತೊ?

ಥಾಮುಸ್ಸು.—ಆಗುತ್ತದೆ; ಈಗಿರುವ ಮರದ ಮನೆಯನ್ನು ಕೋಳಿಗಳ ವಾಸಕ್ಕೆ ಬಿಡೋಣ.

ಜೇಮ್ಸ್ಸು.—ಅವುಗಳ ಸಂಸಾರಕ್ಕೆ ಅದು ಸೊಗಸಾಗಿರುವುದು.

ಅಷ್ಟು ಹೊತ್ತಿಗೆ ಎಲಿಜೆಯು ಸಮೀಪಕ್ಕೆ ಬಂದಳು. "ಅಮ್ಮಾ! ಮನೆ ಆಗುತ್ತದೆಯಂತೆ" ಎಂದು ಜೇಮ್ಸ್ಸು ಕೂಗಿ ಹೇಳಿದನು. ಥಾಮುಸ್ಸೂ ಎಲಿಜೆಯೂ ಒಬ್ಬರನ್ನೊಬ್ಬರು ನೋಡಿ ಸಂತೋಷದಿಂದುಬ್ಬಿದರು.

ಮನೆಯನ್ನು ಸೇರಿ ಎಲ್ಲರೂ ಕುಳಿತುಕೊಂಡ ಕೂಡಲೆ ಥಾಮುಸ್ಸು ನಾಣ್ಯದ ಗಂಟೊಂದನ್ನು ಬಿಚ್ಚಿ ಥಳಥಳಿಸುವ ಚಿನ್ನದ ನಾಣ್ಯಗಳನ್ನು ತನ್ನ ತಾಯಿಯ ಮಡಿಲಿಗೆ ಝಣಝಣನೆ ಸುರಿಯುತ್ತ, "ಅಮ್ಮಾ! ಈ ಹಣದಿಂದ ಮನೆಯನ್ನು ಸಲಕ್ಷಣವಾಗಿ ಕಟ್ಟಿಸಿಕೊ; ನೀನು ಒಪ್ಪಿ

ದರೆ ಕೂಡಲೆ ಕೆಲಸವನ್ನು ಪ್ರಾರಂಭಿಸುತ್ತೇವೆ'' ಎಂದು ಉತ್ಸಾಹ ದಿಂದ ಹೇಳಿದನು. ''ಅಬ್ಬಬ್ಬಾ! ಎಷ್ಟೊಂದು ಹಣ!'' ಎಂದು ಆಶ್ಚರ್ಯ ಪಡುತ್ತ ನಾಣ್ಯವೊಂದನ್ನು ತೆಗೆದುಕೊಂಡು ಅದರ ಮೇಲಣ ಅಕ್ಷರ ಗಳನ್ನು ಜೋಡಿಸಿ ಓದಿ, ಜೇಮ್ಸ್ ಥಾಮುಸ್ಸಿನ ಕಡೆ ತಿರುಗಿ, ''ನಾಣ್ಯ ಗಳೆಷ್ಟಿವೆ?'' ಎಂದು ಕೇಳಿದನು.

ಥಾಮುಸ್ಸು.—ಎಪ್ಪತ್ತೈದಿವೆ.

ಜೇಮ್ಸ್.—ಇಷ್ಟನ್ನೂ ನೀನೇ ಸಂಪಾದಿಸಿದೆಯೊ?

ಥಾಮುಸ್ಸು.—ಪ್ರತಿಯೊಂದನ್ನೂ ನಾನೇ ಸಂಪಾದಿಸಿದೆನು.

ಅದುವರೆಗೂ ಜೇಮ್ಸ್ ಚಿನ್ನದ ನಾಣ್ಯವನ್ನೇ ನೋಡಿರಲಿಲ್ಲ. ಅಷ್ಟು ನಾಣ್ಯಗಳನ್ನು ನೋಡಿ ಹಿಗ್ಗುತ್ತ, ತನ್ನ ಅಣ್ಣನಂತಹ ಬೇರೊಬ್ಬ ಧೀರನು ಲೋಕದಲ್ಲಿರಲಾರನೆಂದು ಭಾವಿಸುತ್ತ, ಎಲಿಜೆಯ ಕಡೆ ನೋಡಿ, ಆಕೆಯು ನಿಶ್ಚೇಷ್ಟಿತಳಾಗಿ ಕುಳಿತಿರುವುದನ್ನು ಕಂಡು, ''ಅಮ್ಮಾ! ಇಷ್ಟೊಂದು ನಾಣ್ಯಗಳನ್ನು ಸಂಪಾದಿಸಿ ತಂದ ಅಣ್ಣನಿಗೆ ನೀನು ಏನೂ ಹೇಳಲಿಲ್ಲವಲ್ಲಾ?'' ಎಂದನು. ಎಲಿಜೆಗೆ ಮಾತನಾಡಲು ನಾಲಗೆಯೇ ಬರಲಿಲ್ಲ; ನೂರಾರು ಆಲೋಚನೆಗಳು ಅವಳನ್ನು ಪೀಡಿ ಸುತ್ತಿದ್ದುವು. ಥಾಮುಸ್ಸಿನ ಸ್ವಾರ್ಥ ತ್ಯಾಗವನ್ನೂ ಮಾತೃ ಭಕ್ತಿ ಯನ್ನೂ ವರ್ಣಿಸಲಾದೀತೆ! ತನ್ನ ಗಂಡನಾದ ಏಬ್ರಾಮುನು ತನ್ನನ್ನು ಅದೇ ವಯಸ್ಸಿನಲ್ಲಿ ಹುಡುಕಿಕೊಂಡು ಬಂದು ಮದುವೆ ಮಾಡಿ ಕೊಂಡನು. ಆತನು ತನ್ನ ಸುಪುತ್ರನ ಸಂಪಾದನೆಯನ್ನೂ ಸದ್ಗುಣ ಗಳನ್ನೂ ನೋಡಿ ಆನಂದಭರಿತನಾಗುವುದಕ್ಕೆ ಬದಲಾಗಿ ಅಕಾಲ ಮೃತ್ಯು ವಿಗೆ ತುತ್ತಾದನಲ್ಲಾ!—ಇವೇ ಮೊದಲಾದ ಆಲೋಚನೆಗಳು ಅವಳ ಮನಸ್ಸನ್ನು ಕಟ್ಟಿಹಾಕಿದ್ದುವು; ಮಾತಾಡುವುದಕ್ಕೆಂತೂ ನಾಲಗೆ ಬರ ಲಿಲ್ಲ; ಅವಳ ನೇತ್ರ ಪುಟಗಳಿಂದ ಆನಂದ ಬಾಷ್ಪವು ಧಾರೆ ಧಾರೆಯಾಗಿ ಸುರಿಯುತ್ತಿದ್ದಿತು. ಜೇಮ್ಸಿಗೆ ಅದರ ಕಾರಣವು ಗೊತ್ತಾಗಲಿಲ್ಲ. ತಾಯಿಯ ಪ್ರೇಮಾತಿಶಯದ ಭಾವನೆಯು ಆ ಹುಡುಗನಿಗೆ ಹೇಗೆ ತಿಳಿದೀತು?

ಎಲ್ಲರ ಮನಸ್ಸೂ ಸ್ತಿಮಿತ ಸ್ಥಿತಿಗೆ ಬಂದಮೇಲೆ ಊಟಕ್ಕೇಳು ವಾಗ ಥಾಮಸ್ಸು, "ಅಮ್ಮಾ! ಮನೆಯನ್ನು ಕಟ್ಟಿ, ಅದರಲ್ಲಿ ನೀನು ವಾಸಮಾಡುವುದಕ್ಕೆ ಆರಂಭಿಸಿದ ಕೂಡಲೆ, ನಾನು ಹಿಂದಿರುಗಿ ಹೋಗು ವೆನು; ಮಿಚಿಗನ್ನಿನಲ್ಲಿ ಕೆಲಸವು ಹೇರಳವಾಗಿದೆ" ಎಂದು ಹೇಳಿದನು.

ಎಲಿಜೆ.—ಹಾಗೆಯೇ ಮಾಡಪ್ಪಾ! ಮನೆಯ ಕೆಲಸವನ್ನು ಹಿಡಿಯಲು ಬಡಗಿಯಾದ ಟ್ರೀಟ್ ಎಂಬವನಿಗೆ ಬಿಡುವಿದೆಯೊ?

ಥಾಮಸ್ಸು.—ವಿಚಾರಿಸುತ್ತೇನೆ; ಅವನ ಜೊತೆಯಲ್ಲಿ ನಾನೂ ಕೆಲಸ ಮಾಡುತ್ತೇನೆ; ಇಬ್ಬರೂ ಸೇರಿ ಮನೆಯನ್ನು ಜಾಗ್ರತೆಯಲ್ಲಿ ಪೂರಯಿಸುತ್ತೇವೆ.

ಜೇಮ್ಸ್ಸು.—ನಾನೂ ಕೆಲಸಮಾಡಬಲ್ಲೆನು; ಹಲಗೆಗಳನ್ನು ತಂದು ಕೊಡುತ್ತೇನೆ, ಮೊಳೆಗಳನ್ನು ಹೊಡೆಯುತ್ತೇನೆ, ಆದ ಮಟ್ಟಿಗೆ ಇತರ ಕೆಲಸಗಳನ್ನೂ ಮಾಡುತ್ತೇನೆ.

ಥಾಮಸ್ಸು.—ನೀನು ಮರಳನ್ನು ತಂದು ಹಾಕಬಹುದು.

ಜೇಮ್ಸು.—ಮರಳೆ! ಅದೇತಕ್ಕೆ?

ಥಾಮಸ್ಸು.—ಗಾರೆಯನ್ನು ಅರೆಯುವುದಕ್ಕೆ. ಗೋಡೆಗೆ ಗಾರೆಯನ್ನು ಹಾಕಬೇಕು. ಕ್ಲೀವ್ಲಾಂಡಿನಿಂದ ಸುಣ್ಣ, ಇಟ್ಟಿಗೆ, ಮೊಳೆ, ಕಿಟಕಿ ಮುಂತಾದುವನ್ನು ತರುತ್ತೇನೆ.

ಜೇಮ್ಸು.—ನನ್ನನ್ನೂ ಜೊತೆಯಲ್ಲಿ ಕರೆದುಕೊಂಡು ಹೋಗುತ್ತೀಯೊ?

ಥಾಮಸ್ಸು.—ಆಗಲಿ, ಹೋಗಿಬರೋಣ.

ಬಡಗಿಯನ್ನು ಕಂಡು ಕೆಲಸಕ್ಕೆ ಗೊತ್ತುಮಾಡಿದನಂತರ ಅಣ್ಣ ತಮ್ಮಂದಿರಿಬ್ಬರೂ ಕ್ಲೀವ್ಲಾಂಡಿಗೆ ಹೋಗಿ ಆವಶ್ಯಕವಾದ ಸಾಮಾನು ಗಳನ್ನು ತೆಗೆದುಕೊಂಡು ಬಂದರು. ಬಡಗಿಯೂ ಥಾಮಸ್ಸೂ ಕೆಲಸ ವನ್ನು ಪ್ರಾರಂಭಿಸಿದರು. ಬೇಸಾಯದ ಕೆಲಸದಲ್ಲಿ ವಿರಾಮ ಸಿಕ್ಕಿದಾ ಗೆಲ್ಲ ಜೇಮ್ಸು ಮನೆಯ ಕೆಲಸಕ್ಕೆ ಸಹಾಯವಾಗುತ್ತಿದ್ದನು. ಅವನ ಉತ್ಸಾಹವನ್ನು ನೋಡಿ ಬಡಗಿಯು, "ಜಿಮ್ಮಾ! ಇದೊ! ಈ ಉಳಿ ಯನ್ನೂ ಕೊಡತಿಯನ್ನೂ ತೆಗೆದುಕೊ; ನಾನು ಮಾಡುವಂತೆಯೇ

ಪಡಗಳನ್ನು ಮಾಡು. ಆ ಕೆಲಸವು ನಿನ್ನ ಕೈಯಲ್ಲಾಗುವುದೋ?'' ಎಂದು ಕೇಳಿದನು. ''ಆಗುವುದು'' ಎಂದು ಹೇಳಿ ಜೇಮ್ಸ್ ಆ ಗಳಿಗೆಯಲ್ಲಿಯೇ ಒಂದು ಪಡವನ್ನು ಮಾಡಿ, ''ಎಲ್ಲಿ! ಇನ್ನೊಂದು ಕೊಡು'' ಎಂದನು.

ಬಡಗಿ.—(ಆಶ್ಚರ್ಯದಿಂದ) ಆಯಿತೆ! ಇಷ್ಟು ಬೇಗನೆ!

ಜೇಮ್ಸ್.—ಆಯಿತು, ನೀನೇ ನೋಡು.

ಬಡಗಿ.—(ನೋಡಿ) ಭಲಾ! ನಿನ್ನ ವಯಸ್ಸಿಗೆ ಈ ಕೆಲಸವು ಬಹಳ ಚೆನ್ನಾಗಿದೆ.

ಜೇಮ್ಸ್.—ನಾನು ಇನ್ನೊಂದು ಪಡವನ್ನು ಮಾಡಕೂಡದೊ?

ಬಡಗಿ.—ಮಾಡಬಹುದು, ಹತ್ತು ಪಡಗಳನ್ನು ಮಾಡು, ಸಂತೋಷ!

ಹೀಗೆ ಬಡಗಿಯು ಜೇಮ್ಸನ ಕೈಯಲ್ಲಿ ಮರದ ತುಂಡುಗಳು ಆರಕ್ಕೆ ಪಡವನ್ನು ಹಾಕಿಸಿದನು. ಅನಂತರ, ''ಜಿಮ್ಮಾ! ಎಲ್ಲಿ, ನೋಡೋಣ! ಈ ಹಲಗೆಯನ್ನು ಹತ್ತಾರಿ ಹಿಡಿಯಬಲ್ಲೆಯಾ?'' ಎಂದು ಕೇಳಿದನು. ಬಡಗಿಯು ಆ ಕೆಲಸವನ್ನು ಮಾಡುತ್ತಿದ್ದಾಗ ಜೇಮ್ಸ್ ಅದನ್ನು ನೋಡುತ್ತಿದ್ದು, ಅದರ ಮರ್ಮವು ಹೀಗೆಯೇ ಇರಬೇಕೆಂದು ನಿರ್ಣಯಿಸಿಕೊಂಡಿದ್ದುದರಿಂದ ಹಲಗೆಯನ್ನು ನಯ ಮಾಡಿ, ''ಇದೋ ನೋಡು, ಈ ಕೆಲಸವು ನನಗೆ ವಿನೋದವಾಗಿದೆ'' ಎಂದನು.

ಬಡಗಿ.—ಒಂದು ಹಲಗೆಯಾದರೆ ವಿನೋದ; ದಿನವೆಲ್ಲ ಮಾಡಬೇಕಾದರೆ ಬೆವರು ಸುರಿಯುವುದು.

ಜೇಮ್ಸ್.—ಬೆವರು ಹರಿದ ಮಾತ್ರಕ್ಕೇ ಕೆಲಸವು ಚೆನ್ನಾಗುವುದೊ? ಜಾಣತನವನ್ನೂ ಉಪಯೋಗಿಸಬೇಡವೊ?

ಬಡಗಿ.—ಉಪಯೋಗಿಸಬೇಕು; ಎಷ್ಟು ಜಾಣತನವಿದ್ದರೂ ಮೈಯಲ್ಲಿ ಬೆವರು ಹರಿಯದೆ ಈ ಕೆಲಸವು ಸಾಗುವುದಲ್ಲ.

ಜೇಮ್ಸ್.—ಹಾಗೋ? ಈಗ ನನಗೆ ಜ್ವರ ಬರುತ್ತಿದೆ; ಹಲಗೆಯು ಸರಿಯಾಗಿ ನಯವಾಯಿತೋ? ಹೇಳು.

ಬಡಗಿ.—ಬಹಳ ಚೆನ್ನಾಗಿದೆ; ಇದಕ್ಕಿಂತ ಚೆನ್ನಾಗಿ ಮಾಡಲು ನನಗೂ ಬರುವುದಿಲ್ಲ. ನೀನು ಹುಟ್ಟು ಬಡಗಿಯ ಹಾಗೆ ಕಾಣುತ್ತೀಯೆ.

ಜೇಮ್ಸ್.—ಒಳ್ಳೆಯ ಬಡಗಿಯಾಗುವ ಸಂಭವವಿದ್ದರೆ ಬಡಗಿಯಾಗಲು ನನಗೂ ಆಸೆಯುಂಟು.

ಬಡಗಿ.—ನೀನು ಬಡಗಿಯವರಿಗೆ ಗುರುವಾಗಬಹುದು. ನೀನು ಸಾಮಾನ್ಯದ ಹುಡುಗನಲ್ಲವಯ್ಯಾ!

ಜೇಮ್ಸ್.—ಬಡಗಿಯಾಗುವುದಕ್ಕೂ ತಕ್ಕ ಅನುಕೂಲ್ಯ ದೊರೆಯ ಬೇಕಷ್ಟೆ?

ಬಡಗಿ.—ಮನಸ್ಸೊಂದಿದ್ದರೆ ಮಾರ್ಗವೂ ಉಂಟು ಎಂದು ಗಾದೆಯಿದೆ.

ಜೇಮ್ಸ್.—ಹಾಗೆಯೇ ನಮ್ಮ ತಾಯಿಯೂ ಹೇಳುತ್ತಾಳೆ.

ಬಡಗಿ.—ಮನಸ್ಸೊಂದು ಸ್ಥಿರವಾಗಿದ್ದರೆ ವಿಘ್ನಗಳು ಬಂದರೂ ಹಿಡಿದ ಕೆಲಸವನ್ನು ನಾವು ಸಾಧಿಸಬಹುದು. ಎಲ್ಲಿ, ನೋಡೋಣ! ನಿನಗೆ ಕೆಲಸ ಮಾಡಲು ಅಕ್ಕರೆಯಿದ್ದರೆ, ಅಗೋ! ಅಷ್ಟು ಹಲಗೆಗಳಿವೆ, ಕೈಹಾಕು.

ನೂರಾರು ಕೆಲಸಗಳಿಗೆ ಓಡಾಡುತ್ತಿದ್ದರೂ ಜೇಮ್ಸ್ ಹಲಗೆಗಳನ್ನೂ ನಯಮಾಡುತ್ತ ಬಡಗಿಗೆ ಸಹಾಯಮಾಡುತ್ತಿದ್ದನು. ಮನೆಯನ್ನು ಕಟ್ಟುವುದು ಜೇಮ್ಸಿಗೆ ದೊಡ್ಡ ವಿಷಯವಾಗಿದ್ದಿತು. ಅದಕ್ಕೆ ಬೇಕಾದ ತೊಲೆಗಳ ಜೋಡಣೆಯ ಕೆಲಸವು ಪೂರೈಸಿದನಂತರ ಇವರೊಡನೆ ನೆರೆಯವರೂ ಸೇರಿ ಅವುಗಳನ್ನು ಕಂಬಗಳ ಮೇಲಕ್ಕೆತ್ತಿ ಸರಿಯಾಗಿಟ್ಟರು. ಗುಣವತಿಯಾದ ಎಲಿಜೆಗೆ ಎಲ್ಲರೂ ಸಂತೋಷದಿಂದ ಸಹಾಯ ಮಾಡುತ್ತಿದ್ದರು. ಮನೆಯ ಕೆಲಸವು ಬಹು ಜಾಗ್ರತೆಯಾಗಿ ನಡೆಯಿತು.

ಮೊಳೆಗಳ ರಾಶಿಯನ್ನು ಜೇಮ್ಸ್ ನೋಡಿದಂದಿನಿಂದಲೂ ಅವುಗಳನ್ನು ಹಲಗೆಗಳಿಗೆ ಹೊಡೆಯಬೇಕೆಂದು ಬಯಸುತ್ತಿದ್ದನು. ಅದಕ್ಕೆ

ಸರಿಯಾಗಿ ಬಡಗಿಯು, "ಜಿಮ್ಮಾ, ಇಗೋ! ಮೊಳೆಗಳನ್ನು ಹೊಡೆ; ಇದು ಕಷ್ಟವಾದ ಕೆಲಸವಲ್ಲ, ಜಿವರು ಹರಿಯಬೇಕಾಗಿಲ್ಲ" ಎಂದು ಹೇಳಿದನು.

ಜೇಮ್ಸ್.—ನನಗೂ ಅದೇ ಆಸೆಯಿದೆ; ಎಲ್ಲಿಂದ ಪ್ರಾರಂಭಿಸಲಿ ?

ಬಡಗಿ.—ನಾನು ಪ್ರಾರಂಭಿಸಿರುವ ಕಡೆಯಿಂದ ನೀನೂ ಮೊದಲು ಮಾಡು. ಮೊಳೆಯನ್ನು ತೂಕವಾಗಿಟ್ಟು ನೆತ್ತಿಯ ಮೇಲೆ ಗುರಿಯಿಟ್ಟು ಟೊಕ್ಕನೆ ಹೊಡೆದರೆ ಅದು ಸರಿಯಾಗಿ ಇಳಿಯುವುದು. ಗುರಿಯನ್ನು ಬಿಡದೆ ನೆಟ್ಟಗೆ ಹೊಡೆಯುವ ಅಭ್ಯಾಸವು ಎಲ್ಲ ಕೆಲಸಗಳಿಗೂ ಬೇಕಷ್ಟೆ?

"ಇನ್ನಾವುದು ಬಾರದಿದ್ದರೂ ಈ ಮೊಳೆಗಳನ್ನು ನಾನು ಸರಿಯಾಗಿ ಹೊಡೆಯಬಲ್ಲೆನು" ಎಂದು ಹೇಳಿ ಜೇಮ್ಸ್ ಮೊಳೆಯನ್ನು ಹೊಡೆಯಲು ಪ್ರಾರಂಭಿಸಿದನು. ಆದರೆ ಮೊದಲನೆಯ ಏಟು ಮೊಳೆಯ ನೆತ್ತಿಗೆ ಸರಿಯಾಗಿ ಬೀಳದೆ ಸೊಟ್ಟಗೆ ಬಿದ್ದಿತು.

ಬಡಗಿ.—(ನಗುತ್ತ) ಮೊದಲಿನ ಏಟೇ ಸೊಟ್ಟಾಯಿತೆ? ಪಡಪನ್ನು ಸರಿಯಾಗಿ ಮಾಡಿದೆ, ಹಲಗೆಯನ್ನು ಸರಿಯಾಗಿ ಹತ್ತಿರ ಹಿಡಿದೆ, ಇದನ್ನೇಕೆ ತಪ್ಪಿದೆ ?

ಜೇಮ್ಸ್.—(ಖಿನ್ನನಾಗಿ) ಏನೊ! ತಪ್ಪಿಹೋಯಿತು.

ಬಡಗಿ.—ಇನ್ನೊಂದು ಸಾರಿ ಹೊಡೆದು ನೋಡು, ತಪ್ಪು ಮಾಡಬೇಡ. ಈ ಕೆಲಸದಲ್ಲಿಯೂ ಒಂದು ಮರ್ಮವಿದೆ; ಅದನ್ನು ತಿಳಿದುಕೊಳ್ಳಬೇಕು.

ಅನಂತರ ಜೇಮ್ಸ್ ಮೊಳೆಗಳನ್ನು ಸರಿಯಾಗಿ ಹೊಡೆದು ಬಡಗಿಗೆ, "ಇಗೋ! ಆ ಮರ್ಮವು ತಿಳಿಯಿತು. ಈ ಬಗೆಯ ಮೊಳೆಗಳು ಹುಟ್ಟಿರುವುದು ಹೀಗೆ ಹೊಡೆಯಿಸಿಕೊಳ್ಳುವುದಕ್ಕೇ ಅಲ್ಲವೆ? ನಾನು ಇನ್ನು ಸರಿಯಾಗಿ ಹೊಡೆಯುತ್ತೇನೆ" ಎನ್ನುತ್ತ ಮನಸ್ಸಿಟ್ಟು ಹಠದಿಂದ ಒಂದಾದ ಮೇಲೊಂದು ಮೊಳೆಯನ್ನು ಹೊಡೆಯುತ್ತ

ಹೋದನು ; ಮೊದಲು ತಪ್ಪಿದರೂ ಮುಂದೆ ತಪ್ಪಬಾರದೆಂದು ನಿಶ್ಚಯಿಸಿ ಕೊಂಡು ಅವನು ಜಾಗರೂಕತೆಯಿಂದ ಕೆಲಸ ಮಾಡಿದನು.

ಬಡಗಿಯು ಜೇಮ್ಸ್‌ನ ಕೆಲಸವನ್ನು ನೋಡಿ, "ಶಹಬಾಸ್! ನಿನ್ನ ಸಾಮರ್ಥ್ಯವು ಅಸಾಧಾರಣವಾದುದಯ್ಯಾ!" ಎಂದು ಹೇಳಿದನು.

ಜೇಮ್ಸ್.—ಅದೃಷ್ಟಕ್ಕಿಂತ ಪುರುಷ ಪ್ರಯತ್ನವು ಮೇಲೆಂದು ನಮ್ಮ ತಾಯಿ ಹೇಳುತ್ತಾಳೆ.

ಬಡಗಿ.—ಆಕೆಯು ಹೇಳುವುದು ನಿಜ. ಅನೇಕ ಮಂದಿ ಹುಡುಗರು ಅದೃಷ್ಟವನ್ನೇ ನಂಬಿಕೊಂಡು ಸುಮ್ಮನೆ ಕುಳಿತು ಹೊಟ್ಟೆ ಗಿಲ್ಲದೆ ನರಳುತ್ತಾರೆ. ಒಂದು ಕಂಡುಗದಷ್ಟು ಅದೃಷ್ಟಕ್ಕಿಂತ ಒಂದು ಕೊಳಗದಷ್ಟು ಪ್ರಯತ್ನವೇ ಮೇಲೆಂಬುದು ನನ್ನ ಮತ.

ಹೀಗೆ ಎಲ್ಲರೂ ಕೂಡಿ ಮನೆಯನ್ನು ಕಟ್ಟಿದರು, ಗೃಹ ಪ್ರವೇಶವೂ ಆಯಿತು; ಥಾಮಸ್ಸಿನ ಸಂಕಲ್ಪವು ನೆರವೇರಿತು. ಅವನು ಧನಾರ್ಜನೆ ಗಾಗಿ ಮಿಚಿಗನ್ ಸಂಸ್ಥಾನಕ್ಕೆ ಮತ್ತೆ ಹೊರಟನು.

ಜೇಮ್ಸ್ ಎಂದಿನಂತೆ ಬೇಸಾಯದ ಕೆಲಸವನ್ನು ಮಾಡುತ್ತ ತಾನು ಬಡಗಿಯಾದರೆ ಅನುಕೂಲವೆಂದು ಆಲೋಚಿಸುತ್ತಿದ್ದನು. ಒಂದು ದಿನ ತಾಯಿಯೊಡನೆ ಅವನು, "ಅಮ್ಮಾ! ನಾನು ಬಡಗಿಯ ಕೆಲಸ ವನ್ನು ಮಾಡಿ ಹಣವನ್ನು ಸಂಪಾದಿಸಬೇಕೆಂದು ಆಲೋಚಿಸಿದ್ದೇನೆ" ಎಂದು ಹೇಳಿದನು.

ಎಲಿಜೆ.—ನೀನು ಬೇಸಾಯವನ್ನು ಮಾಡಬೇಕಲ್ಲಾ! ಬಿಡುವೆಲ್ಲಿದೆ?

ಜೇಮ್ಸ್.—ಬಿಡುವಾದಾಗ ಬಡಗಿಯ ಕೆಲಸವನ್ನು ಮಾಡುತ್ತೇನೆ.

ಎಲಿಜೆ.—ಬೇಕೆಂದಾಗ ನಿನಗೆ ಕೆಲಸವು ದೊರೆಯುವುದೆ?

ಜೇಮ್ಸ್.—ದೊರೆಯಬಹುದು, ಪ್ರಯತ್ನಪಟ್ಟು ನೋಡೋಣ.

ಎಲಿಜೆ.—ಆಗಬಹುದು, ಪ್ರಯತ್ನಪಟ್ಟರೆ ಪ್ರಯೋಜನವುಂಟು.

ಜೇಮ್ಸ್.—ಅಣ್ಣನಂತೆ ನಾನೂ ಹಣವನ್ನು ಸಂಪಾದಿಸಿ ತಂದು ನಿನಗೆ ಕೊಡಬೇಕೆಂದಿದ್ದೇನೆ. ನಮ್ಮ ಮನೆಯನ್ನು ಕಟ್ಟಿದ ಬಡಗಿಯು ನನಗೆ ಕೆಲಸವನ್ನು ಒದಗಿಸಿಕೊಡಬಹುದು. ದೊಡ್ಡವನಾದ ಮೇಲೆ ಅಣ್ಣನಂತೆಯೇ ನಾನೂ ಮಿಂಚಿಗನ್ನಿಗೆ ಹೋಗುತ್ತೇನೆ.

ಎಲಿಜೆ.—ಒಬ್ಬ ಮಗನು ಅಲೆಯುವುದೇ ಸಾಕು. ನೀನು ಕಾಡನ್ನು ಕಡಿಯುವುದಕ್ಕಿಂತಲೂ ಹೆಚ್ಚು ಪ್ರಯೋಜನಕಾರಿಯಾದ ಕೆಲಸವನ್ನು ಮಾಡಬೇಕು.

ಜೇಮ್ಸ್.—ನಿನಗೆ ಸಹಾಯಕನಾಗಿರುವುದಕ್ಕಿಂತಲೂ ಹೆಚ್ಚಿನ ಕೆಲಸವೇನಿದೆ?

ಎಲಿಜೆ.—ನನ್ನ ಕ್ಷೇಮ ಚಿಂತನೆಯೊಂದರಲ್ಲಿಯೇ ನೀನು ತೃಪ್ತನಾಗಬಾರದು; ನಿನ್ನ ಮನೆ, ನಿನ್ನ ಊರು—ಇಷ್ಟನ್ನೇ ಚಿಂತಿಸುತ್ತಿದ್ದರೂ ಸಾಲದು; ಇತರರಿಗೂ ಉಪಕಾರಿಯಾಗಲು ಪ್ರಯತ್ನಪಡಬೇಕು. ನಿನ್ನ ಇಷ್ಟವಿದ್ದಂತೆ ಮಾಡು. ಬಿಡುವಿದ್ದಾಗ ಬಡಗಿಯ ಕೆಲಸವನ್ನೂ ಮಾಡಬಹುದು.

ಜೇಮ್ಸ್ ಒಡನೆಯೇ ಬಡಗಿಯ ಮನೆಗೆ ಹೋಗಿ, ತನ್ನ ಅಭಿಪ್ರಾಯವನ್ನು ಅವನಿಗೆ ತಿಳಿಸಿದನು. ಬಡಗಿಯು ಸಂತೋಷಪಟ್ಟು, "ಹುಡುಗನೆಂದರೆ ಹೀಗಿರಬೇಕು. ಮೈಗಳ್ಳರಾಗಿ ಮನೆಯಲ್ಲಿ ಕುಳಿತಿರುವವರಿಗೆ ಕಷ್ಟಗಳು ತಪ್ಪವು. ವಿವೇಕಶಾಲಿನಿಯಾದ ನಿಮ್ಮ ತಾಯಿಯ ಶಿಕ್ಷೆಯಿಂದ ನೀನು ಗುಣವಂತನಾಗಿರುತ್ತೀಯೆ. ನೀನು ಮಾಡುವಷ್ಟು ಕೆಲಸವನ್ನು ನಾನು ಒದಗಿಸಿಕೊಡುತ್ತೇನೆ" ಎಂದು ಹೇಳಿದನು. ಮರು ದಿನದಿಂದ ಜೇಮ್ಸ್ ಅವನ ಮನೆಗೆ ಹೋಗಿ ಮರವನ್ನು ಹತ್ತರಿ ಹಿಡಿದು ನಯ ಮಾಡುವಂತೆಯೂ, ಒಂದು ಹಲಗೆಗೆ ಒಂದು ಸೆಂಟು (ಅರ್ಧ ಆಣೆ) ಕೂಲಿಯನ್ನು ಬಡಗಿಯು ಕೊಡುವಂತೆಯೂ ಒಪ್ಪಂದವಾಯಿತು. ಜೇಮ್ಸ್ ಮನೆಗೆ ಬಂದು ತಾಯಿಯೊಡನೆ, "ಅಮ್ಮಾ! ನೋಡಿದೆಯಾ ಪ್ರಯತ್ನದ ಫಲವನ್ನು! ನಾಳೆಯಿಂದ ನಾನು ಹಣವನ್ನು ಸಂಪಾದಿಸಿ ತಂದು ನಿನಗೆ ಕೊಡುತ್ತೇನೆ" ಎಂದು ಹೇಳಿದನು.

ಎಲಿಜೆ.—ಅಪ್ಪಯ್ಯಾ! ಎಚ್ಚರಿಕೆಯಿಂದ ಕೆಲಸಮಾಡು. ಕೆಲಸಮಾಡ ಬೇಕೆಂಬ ಆಸೆಯೂ ಉತ್ಸಾಹವೂ ನಿನ್ನಲ್ಲಿ ಹೆಚ್ಚಾಗಿದೆ. ಶಕ್ತಿ ಮೀರಿ ಕೆಲಸ ಮಾಡಿ ಆಯಾಸಪಡಬೇಡ. ದಿನಕ್ಕೆ ಎರಡು ಗಂಟೆಗಿಂತ ಹೆಚ್ಚಾಗಿ ದುಡಿಯಬೇಡ. ಹತ್ತರಿ ಹಿಡಿದು ಮರ ವನ್ನು ಸಯಮಾಡುವುದು ಕಷ್ಟದ ಕೆಲಸ.

ಜೇಮ್ಸ್.—ನೋಡೋಣ; ನಾನು ನಾಳೆ ಆರು ಗಂಟೆಗಳ ಕಾಲ ಕೆಲಸ ಮಾಡುತ್ತೇನೆ. ಎರಡು ಗಂಟೆಯ ಕೆಲಸಕ್ಕೇ ಆಯಾಸವಾಯಿ ತೆಂದು ಕುಳಿತುಕೊಳ್ಳಲು ನಾನು ಎಳೆಯ ಮಗುವಲ್ಲ. ಒಂದು ವೇಳೆ ನಾನು ಮನೆಗೆ ಬೇಗನೆ ಬಂದರೆ ನನಗೇನೋ ಏಟು ತಾಕಿರಬೇಕೆಂದು ತಿಳಿ.

ಮರು ದಿನ ಜೇಮ್ಸ್ ಬೆಳಗ್ಗೆ ಹತ್ತು ಗಂಟೆಯೊಳಗೆ ಬಡಗಿಯ ಮನೆಗೆ ಹೋಗಿ ಅಂಗಿಯನ್ನು ತೆಗೆದಿಟ್ಟು ಕೆಲಸಕ್ಕೆ ನಿಂತನು. ಹತ್ತರಿ ಹಿಡಿಯಲು ಹಾಕಿದ್ದ ಅಟ್ಟವು ಅವನಿಗೆ ಸ್ವಲ್ಪ ಎತ್ತರವಾಗಿದ್ದಿತು; ಮೊಟ್ಟುಂಗಾಲಲ್ಲಿ ನಿಂತು ಕೆಲಸವನ್ನು ಪ್ರಾರಂಭಿಸಿದನು. ಒಂದೊಂದು ಹಲಗೆ ಎಂಟೆಂಟು ಮೊಳದಷ್ಟು ಉದ್ದವಾಗಿಯೂ ಒಂದು ಅಡಿಯಷ್ಟು ಅಗಲವಾಗಿಯೂ ಇದ್ದಿತು. ಹತ್ತು ಹಲಗೆಯನ್ನು ಸಯಮಾಡಿದ ಮೇಲೆ ಮನಸ್ಸಿನಲ್ಲಿ ಏನೋ ನಿರ್ಧರಮಾಡಿಕೊಂಡನು. ಅದೇನೆಂಬುದು ಸಾಯಂಕಾಲದ ವರೆಗೂ ಯಾರಿಗೂ ಗೊತ್ತಾಗಲಿಲ್ಲ. ಅವನು ದಿನವೆಲ್ಲ ಕಷ್ಟಪಟ್ಟು ಹಲಗೆಗಳನ್ನು ಸಯ ಮಾಡಿ ಸಾಯಂಕಾಲದ ಹೊತ್ತಿಗೆ ಬಡಗಿಯನ್ನು ಕರೆದು, "ಇಗೊ! ನೂರು ಹಲಗೆಗಳಾದುವು, ಎಣಿಸಿ ಕೊಳ್ಳಯ್ಯಾ" ಎಂದನು.

ಬಡಗಿ.—ನೂರೇ! ಅದು ಹೇಗಾದೀತು? ಸರಿಯಾಗಿ ಎಣಿಸು; ಅಷ್ಟು ಕೆಲಸವು ಆಗಿರಲಾರದು.

ಜೇಮ್ಸ್.—ನೀನೇ ಎಣಿಸು; ನನ್ನೆಣಿಕೆಯಲ್ಲಿ ನೂರಿದೆ.

"ಹಾಗಾದರೆ ಬಹಳ ಹೆಚ್ಚು ಕೆಲಸವನ್ನು ಮಾಡಿರುತ್ತೀಯೆ" ಎಂದು ಹೇಳಿ ಬಡಗಿಯು ಹಲಗೆಗಳನ್ನು ಎಣಿಸಿ, "ಇದೀಗ ಆಶ್ಚರ್ಯ!

ನಿನ್ನ ವಯಸ್ಸಿನ ಇತರರಿಗೆ ಇದು ಸಾಧ್ಯವೇ ಅಲ್ಲ. ಒಂದೇ ದಿನಕ್ಕೆ ಇಷ್ಟು ಕೆಲಸವನ್ನು ನೀನು ಮಾಡಬಾರದು. ನನ್ನ ಮಾತನ್ನು ಕೇಳು; ಇದರಲ್ಲಿ ಅರ್ಧಕ್ಕಿಂತ ಹೆಚ್ಚಾಗಿ ಕೆಲಸವನ್ನು ಮಾಡಬೇಡ '' ಎಂದು ಬುದ್ಧಿಯನ್ನು ಹೇಳಿದನು.

ಜೇಮ್ಸ್.—ನನಗೆ ಹೆಚ್ಚು ಆಯಾಸವಾಗಿಲ್ಲ.

ಬಡಗಿ.—ಈ ಹೊತ್ತು ಮಾಡಿರುವ ಹೆಚ್ಚು ಕೆಲಸಕ್ಕೆ ನೀನು ಇನ್ನು ಮೂವತ್ತು ವರ್ಷದ ಮೇಲೆ ದಂಡವನ್ನು ತೆರಬೇಕಾದೀತು. ಈ ಹೊತ್ತಿನ ಆಯಾಸವೊಂದನ್ನೇ ಲೆಕ್ಕಕ್ಕೆ ತೆಗೆದುಕೊಳ್ಳುವುದು ಸರಿಯಲ್ಲ.

ಜೇಮ್ಸ್.—(ಬಡಗಿಯ ಅಭಿಪ್ರಾಯವನ್ನು ತಿಳಿಯದೆ) ಮೂವತ್ತು ವರ್ಷಗಳಾದ ಮೇಲಲ್ಲವೆ ಆಯಾಸದ ಫಲವನ್ನು ತಿಳಿಯುವುದು? ಸದ್ಯಕ್ಕೆ ಅದರ ವಿಚಾರವನ್ನು ಬಿಟ್ಟಿರೋಣ; ಅದು ಬಹು ದೂರದ ಮಾತು.

ಬಡಗಿ.—ಹಲಗೆಗಳನ್ನು ಎಣಿಸಿದ್ದಾಯಿತು; ಇನ್ನು ನಿನ್ನ ಕೂಲಿಯನ್ನು ಎಣಿಸಿಕೊಳ್ಳಯ್ಯಾ! ಇಗೋ ಹಿಡಿ, ನೂರು ಸೆಂಟುಗಳು.

ಆ ನೂರು ಸೆಂಟುಗಳನ್ನು ತೆಗೆದುಕೊಂಡು ಮನೆಗೆ ಬರುತ್ತಿದ್ದ ಜೇಮ್ಸಿನ ಹೆಮ್ಮೆಯನ್ನೂ ಆನಂದವನ್ನೂ ವರ್ಣಿಸುವುದು ಸಾಧ್ಯವಲ್ಲ. ಹರಕು ಅಂಗಿಯನ್ನು ತೊಟ್ಟಿದ್ದ ಆ ಹುಡುಗನ ಎದೆಯು ಇಷ್ಟು ಅತಿಶಯವಾಗಿ ಎಂದಿಗೂ ಉಬ್ಬರಲಿಲ್ಲ. ಆ ಎದೆಯನ್ನು ಬಿಚ್ಚಿ ಅದರೊಳಗಿನ ಹೃದಯವನ್ನು ಕಳಚಿ ನೋಡಿದ್ದರೆ, ಯಾರಿಂದಲೂ ವರ್ಣಿಸಲು ಸಾಧ್ಯವಲ್ಲದ ರಹಸ್ಯವು ನಮಗೆ ಗೋಚರವಾಗುತ್ತಿದ್ದಿತೇನೊ! ಹುಡುಗನ ಎದೆಯಾದರೂ ದೊಡ್ಡವನ ಹೃದಯ! ಅವನು ದಾರಿ ನಡೆಯುತ್ತ, '' ನೂರು ಸೆಂಟು! ಒಂದು ಡಾಲರು!! ಒಂದು ದಿನಕ್ಕೆ!!! ಹೀಗೆ ೭೫ ದಿನಗಳು ಮಾತ್ರ ಕೆಲಸ ಮಾಡಿದರೆ ನಮ್ಮ ಅಣ್ಣನು ತಂದಷ್ಟು ಹಣವನ್ನು ನಾನೂ ಸಂಪಾದಿಸಬಹುದು. ಇಷ್ಟ

ಕ್ಕಾಗಿ ಥಾಮಸ್ಸು ಊರನ್ನು ಬಿಟ್ಟು, ಮನೆಯವರನ್ನು ತೊರೆದು, ಏಳು ತಿಂಗಳು ಕಷ್ಟಪಡಬೇಕಾಯಿತಲ್ಲವೆ! ನನಗೆ ನಿಜವಾಗಿಯೂ ಒಂದು ಡಾಲರು ಸಿಕ್ಕಿದೆಯೆ?'' ಎಂದು ಆಶ್ಚರ್ಯಪಡುತ್ತ ಮನೆಗೆ ಬಂದನು. ಅಣ್ಣನಂತೆಯೇ ತಾನೂ ಮಾಡಬೇಕೆಂದು ಅವನಿಗೆ ಆಸೆಯಿದ್ದಿತೋ ಇಲ್ಲವೋ ನಮಗೆ ತಿಳಿಯದು. ಹೇಗೂ, ಮನೆಗೆ ಬಂದ ಮೇಲೆ ತಾಯಿಯ ಮಡಿಲಿಗೆ ಹಣವನ್ನು ಸುರಿದು, ಅಮ್ಮಾ! ಇದು ನಿನ್ನದು'' ಎಂದನು.

ಎಲಿಜೆ.—ಇಷ್ಟೊಂದು! ಎಷ್ಟಿದೆ?

ಜೇಮ್ಸ್.—ಒಂದು ನೂರು ಸೆಂಟುಗಳು.

ಎಲಿಜೆ.—ಏನು! ಈ ಹೊತ್ತಿನ ಸಂಪಾದನೆಯೆ?

ಜೇಮ್ಸ್.—ಅಹುದು, ಒಂದು ನೂರು ಹಲಗೆಗಳನ್ನು ನಯ ಮಾಡಿದೆನು.

ಎಲಿಜೆಗೆ ಮುಂದೆ ಮಾತನಾಡಲು ಸಾಧ್ಯವಾಗಲಿಲ್ಲ. ಥಾಮಸ್ಸು ಎಪ್ಪತ್ತೈದು ಡಾಲರುಗಳನ್ನು ತಂದು ಕೊಟ್ಟಾಗ ಆಕೆ ಮೂಕಳಂತಿದ್ದ ಳಲ್ಲವೆ! ಈಗಲೂ ಚಿತ್ರದಲ್ಲಿ ಬರೆದ ಬೊಂಬೆಯಂತೆ ಸುಮ್ಮನೆ ಕುಳಿತಳು; ಗಂಟಲು ಮುಚ್ಚಿಹೋಗಿ ಮಾತು ಹೊರಡದಂತಾಯಿತು. ಔದಾ ರ್ಯವೂ ಆತ್ಮಸುಖ ತ್ಯಾಗವೂ ಒಬ್ಬ ಮಗನಲ್ಲಿದ್ದುದಕ್ಕಿಂತ ಮತ್ತೊಬ್ಬ ನಲ್ಲಿ ಅತಿಶಯವಾಗಿದ್ದಿತು. ಜೇಮ್ಸ್ ಹುಡುಗನಾಗಿದ್ದುದರಿಂದ ಅವಳು ಅವನನ್ನು ಬಾಚಿ ತಬ್ಬಿಕೊಂಡು ಮುತ್ತಿಟ್ಟಳು; ಬಾಯಿಂದ ಮಾತು ಹೊರಡಲಿಲ್ಲ. ಅಪ್ಪಿಕೊಂಡು ಮುತ್ತಿಟ್ಟುದು ಆಕೆಯ ಮೆಚ್ಚಿಗೆಯನ್ನು ಮಾತುಗಳಿಗಿಂತ ದ್ವಿಗುಣವಾಗಿ ತೋರ್ಪಡಿಸಿತು. ಆಕೆಯ ಕಣ್ಣು ಗಳಿಂದ ಆನಂದ ಬಾಷ್ಪವು ಧಾರೆ ಧಾರೆಯಾಗಿ ಸುರಿಯಿತು.

# ಅಧ್ಯಾಯ ೯

## ಕಣಜಗಳನ್ನು ಕಟ್ಟುವಿಕೆ

ಬಡಗಿಯ ಮನೆಯಲ್ಲಿ ಮಾಡಿದ ಕೆಲಸದಿಂದ ಜೇಮ್ಸ್‌ನಿಗೆ ಇತರ ಕಡೆಗಳಲ್ಲಿಯೂ ಮರಗೆಲಸವು ದೊರೆಯುವಂತಾಯಿತು. ಅಷ್ಟರಲ್ಲಿ ಚಳಿಗಾಲ ಬರಲು, ಜೇಮ್ಸ್ ಪಾಠಶಾಲೆಗೆ ಸೇರಿ ಒಂದು ದಿಸವೂ ತಪ್ಪದಂತೆ ಹೋಗಿಬರುತ್ತಿದ್ದನು. ಪಾಠಶಾಲೆಯನ್ನು ಮುಚ್ಚಿದ ಮರು ದಿನ ಬಡಗಿಯಾದ ಟ್ರೀಟಸು ಜೇಮ್ಸ್‌ನ ಮನೆಗೆ ಬಂದು ಅವನೊಡನೆ, "ನಾನು ದೊಡ್ಡದೊಂದು ಕಣಜವನ್ನು ಕಟ್ಟಿಕೊಡಲು ಒಪ್ಪಿರುತ್ತೇನೆ; ಅದಕ್ಕೆ ನಿನ್ನ ಸಹಾಯವು ಬೇಕು. ನೀನು ಕೆಲಸ ಮಾಡಿದ ಹಾಗೆಲ್ಲ ನಲವತ್ತೋ ಐವತ್ತೋ ಸೆಂಟುಗಳಷ್ಟು ಕೂಲಿಯು ದಿನಕ್ಕೆ ಸಿಕ್ಕುವುದು. ಬೇಸಾಯದ ಕೆಲಸವು ಆರಂಭವಾಗುವ ವರೆಗೂ ಈ ಕೂಲಿಯು ದೊರೆಯುತ್ತದೆ" ಎಂದು ಹೇಳಿದನು. ಅದಕ್ಕೆ ಜೇಮ್ಸ್ ಒಪ್ಪಿ ತಾಯಿಯೊಡನೆ, "ಅಮ್ಮಾ! ಇನ್ನೊಂದು ಕೆಲಸವು ಸಿಕ್ಕಿದೆ. ಪ್ರಯತ್ನವು ಫಲಿಸದಿರುವುದಿಲ್ಲ. ಹಿಂದೆ ನಾನು ಬಡಗಿಯ ಕೆಲಸಕ್ಕೆ ಪ್ರಯತ್ನಿಸದಿದ್ದರೆ ಈಗ ಕೆಲಸವು ಸಿಕ್ಕುತ್ತಲೇ ಇರಲಿಲ್ಲ" ಎಂದು ಹೇಳಿದನು.

ಎಲಿಜೆ.—ಅಹುದು; ಆದರೆ ಪ್ರಾರಂಭದಲ್ಲಿ ಮಾಡಿದ ಕೆಲಸವನ್ನು, ಕೆಲಸಗಾರರು ಮೆಚ್ಚುವಂತೆ ನೀನು ಮಾಡದಿದ್ದರೆ, ಈ ಕೆಲಸವು ದೊರೆಯುತ್ತಿರಲಿಲ್ಲ. ಯಾವಾಗ ಯಾವ ಕೆಲಸವನ್ನು ಮಾಡಿದರೂ ಹುಳುಕನ್ನು ಕಂಡುಹಿಡಿಯುವುದಕ್ಕಾಗದಂತೆ ಮಾಡಬೇಕು; ಈ ನಿಯಮವನ್ನು ಮರೆಯದಿರು.

ಜೇಮ್ಸ್.—ಹಿಡಿದ ಕೆಲಸವನ್ನು ಶ್ಲಾಘ್ಯವಾಗಿ ನಿರ್ವಹಿಸುವುದೂ ಪ್ರಯತ್ನ ಸಾಧ್ಯವಾಗಿಯೇ ಇದೆಯಲ್ಲವೆ?

ಎಲಿಜೆ.—ಪ್ರಯತ್ನ ಸಾಧ್ಯವೊಂದೇ ಅಲ್ಲ; ಫಲಿತ ಪ್ರಯತ್ನವಾಗಿಯೂ ಇರುವುದು. ಶ್ಲಾಘ್ಯವಾಗಿ ಕೆಲಸ ಮಾಡುವವನಿಗೆ ಹೆಚ್ಚುಹೆಚ್ಚಾಗಿ ಕೆಲಸವು ದೊರೆಯುವುದು; ಅಸಮರ್ಪಕವಾಗಿ

ಕೆಲಸ ಮಾಡುವವನಿಗೆ ಸಿಕ್ಕಿದ ಕೆಲಸವೂ ಕೈ ಬಿಟ್ಟು ಹೋಗು ವುದು. ಮಾಡುವ ಕೆಲಸವನ್ನು ಸಮರ್ಪಕವಾಗಿ ಮಾಡು ಎಂಬುದನ್ನು ನಿಮ್ಮ ತಂದೆಯು ಪದೇ ಪದೇ ಹೇಳುತ್ತಿದ್ದನು. ನೀನು ಹಿಡಿದ ಕೆಲಸವನ್ನು ಸಮರ್ಪಕವಾಗಿ ಮಾಡದಿದ್ದರೆ ನಿನ್ನ ಮನಸ್ಸಿಗೇ ನಾಚಿಕೆಯುಂಟಾಗುವುದಿಲ್ಲವೆ?

ಬಡಗಿಯ ಜೊತೆಯಲ್ಲಿ ಕೆಲಸಮಾಡುತ್ತ ಒಂದು ದಿನ ಅವನೊಡನೆ ಜೇಮ್ಸ್, "ಕಣಜವನ್ನು ಕಟ್ಟುವ ವಿಧಾನವನ್ನು ಕಲಿಯಬೇಕೆಂದು ನನಗೆ ಆಸೆ ಇದೆ" ಎಂದನು.

ಬಡಗಿ.—ಕಲಿ; ನಾನು ಮಾಡುವುದನ್ನೆಲ್ಲ ಚೆನ್ನಾಗಿ ನೋಡುತ್ತಿರು. ಕಣಜವನ್ನು ಕಟ್ಟುವುದಕ್ಕೆ ಮೊದಲು ಒಂದು ನಮೂನೆಯನ್ನು ಹಾಕಿಕೊಳ್ಳಬೇಕು. ಕ್ರಮವರಿತು ಕೆಲಸವನ್ನು ಮಾಡುವುದು ಶಿಲ್ಪಿಗಳಿಗೆ ಮೂಲಾಧಾರ ಸೂತ್ರವಾಗಿರುವುದು. ಕ್ರಮವನ್ನು ಬಿಟ್ಟರೆ ಯಾವ ಕೆಲಸವೂ ನೆಟ್ಟಗಾಗುವುದಿಲ್ಲ.

ಜೇಮ್ಸ್.—(ನಸುನಗುತ್ತ) ಏನು! ಹಾಲು ಕರೆಯುವುದಕ್ಕೂ ಕ್ರಮವು ಬೇಕೊ?

ಬಡಗಿ.—ಬೇಕು; ದಿನ ದಿನವೂ ಕ್ಲಪ್ತ ಕಾಲದಲ್ಲಿ ಕ್ರಮವರಿತು ಹಾಲನ್ನು ಕರೆಯುತ್ತ ಬಂದರೆ, ಹಸು ಹೆಚ್ಚಾಗಿ ಹಾಲನ್ನು ಕೊಡುತ್ತದೆ. ಕ್ರಮಾಚರಣೆಯು ಅಭ್ಯಾಸವಾದರೆ ಎಲ್ಲ ಕೆಲಸವನ್ನೂ ನೇರವಾಗಿ ಮಾಡಬಹುದು.

ಜೇಮ್ಸ್.—ಕ್ರಮವರಿತು ಕರೆದರೆ ಹಸು ಹೆಚ್ಚಾಗಿ ಹಾಲನ್ನು ಕೊಡುವುದೆ? ಇದು ನನಗೆ ತಿಳಿದಿರಲಿಲ್ಲ.

ಬಡಗಿ.—ನಿನಗೆ ತಿಳಿದಿರಲಿ, ತಿಳಿಯದಿರಲಿ, ಅದೇನೋ ನಿಜ. ಕ್ರಮಾಚರಣೆಯಿಲ್ಲದೆ ಭಗವಂತನೂ ಪ್ರಪಂಚವನ್ನು ಪಾಲನೆ ಮಾಡಲಾರನು. ನೀನು ದೈವಿಕ ವಿಧಿಗಳನ್ನುಲ್ಲಂಘಿಸದೆ ಭೂಮಿಯನ್ನು ಸಾಗುವಳಿ ಮಾಡಬೇಕಲ್ಲವೆ? ದೈವಿಕ ವಿಧಿಯ ಪ್ರಕಾರ ಒಂದು ಕೊಳಗ ಗೋದುಮೆಯನ್ನು ಬಿತ್ತತಕ್ಕ

ಹೊಲಕ್ಕೆ ಎರಡು ಕೊಳಗದಷ್ಟನ್ನು ಬಿತ್ತಿದರೆ ಹುಲ್ಲು ಹೆಚ್ಚಾಗಿ, ಕಾಳು ಕಡಿಮೆಯಾಗುವುದರಿಂದ ಶ್ರಮಕ್ಕೆ ತಕ್ಕ ಫಲವು ದೊರೆಯದೆ ಹೋಗುವುದು.

ಬಡಗಿಯು ಮಾಡಿದ ಈ ರೀತಿಯ ಬೋಧನೆಯಿಂದ ಜೇಮ್ಸ್‌ನಿಗೆ ಕ್ರಮಾನುಸರಣೆಯ ಸತ್ಫಲವು ತಿಳಿಯಬಂದಿತು.

ಬಡಗಿ.—ಪ್ರತಿಯೊಂದು ಪದಾರ್ಥಕ್ಕೂ ಒಂದು ಗೊತ್ತಾದ ಸ್ಥಳ, ಆಯಾ ಸ್ಥಳದಲ್ಲಿಯೇ ಆಯಾ ಪದಾರ್ಥವಿರಬೇಕು ಎಂಬುದು ಅನುಭವದ ಮಾತು. ಈ ನಿಯಮವನ್ನನುಸರಿಸಿ ನಡೆಯುವವರು ಕೃತಕಾರ್ಯರಾಗುತ್ತಾರೆ; ಅದನ್ನು ಮೀರಿ ನಡೆಯುವವರು ಕೆಟ್ಟುಹೋಗುತ್ತಾರೆ. ಈ ನಿಯಮವನ್ನು ನೀನು ಆಚರಿಸಿದರೆ ಚೆನ್ನಾಗಿ ಬಾಳುತ್ತೀಯೆ.

ಜೇಮ್ಸ್.—ನೀನು ಹೇಳುವುದೇನು? ಓದಲು ಒಂದು ಹೊತ್ತು, ಕೆಲಸ ಮಾಡಲು ಒಂದು ಹೊತ್ತು, ಆಡಲು ಒಂದು ಹೊತ್ತು ಎಂದೊ?

ಬಡಗಿ.—ಅಹುದು, ಅದೇ ನನ್ನ ಮತ. ಆದರೆ ಆಟದ ಹೊತ್ತನ್ನು ಕಡಿಮೆ ಮಾಡಿದರೆ ಲಾಭವು ಹೆಚ್ಚುವುದು. ಹೊಟ್ಟೆ ಹೊರೆದುಕೊಳ್ಳುವುದಕ್ಕೆ ಕಷ್ಟವಾಗಿರುವ ನಮ್ಮೂರಿನಲ್ಲಿ ಆಟಕ್ಕೆ ಹೊತ್ತೆಲ್ಲಿದೆ? ಆದರೂ, ಆಟವಾಡದೆಯೇ ಯಾವಾಗಲೂ ಕೆಲಸ ಮಾಡುತ್ತಿರುವವನು ಮೂಢನಾಗುವನು ಎಂಬ ನುಡಿಯು ಸತ್ಯ. ಸರಿ! ಹಿಡಿದಿರುವ ಕೆಲಸವನ್ನು ಪೂರಯಿಸೋಣ.

ಕೆಲವು ದಿಸಗಳಲ್ಲಿ ಆ ಕಣಜವು ಪೂರಯಿಸಿತು. ಕಣಜವನ್ನು ಕಟ್ಟುವ ರೀತಿಯು ಜೇಮ್ಸ್‌ನಿಗೆ ಬಹಳ ಮಟ್ಟಿಗೆ ತಿಳಿಯಿತು. ಅವನಿಗೆ ಇಪ್ಪತ್ತು ಡಾಲರು ಕೂಲಿಯು ಸಿಕ್ಕಿತು.

ಹಿಂದಿನ ವರ್ಷದ ಚಳಿಗಾಲದಲ್ಲಿ ಜೇಮ್ಸ್‌ನ ವಿದ್ಯಾಭ್ಯಾಸಂಗವು ಬಹಳ ತೃಪ್ತಿಕರವಾಗಿ ನಡೆಯಿತು. ಆ ಪಾಳೆಯದ ಪಾಠಶಾಲೆಯಲ್ಲಿ ಕಲಿಯಬಹುದಾದುದೆಲ್ಲವನ್ನೂ ಅವನು ಕಲಿತಿದ್ದರೂ ಈ ವರ್ಷದ ಚಳಿಗಾಲದಲ್ಲಿಯೂ ಅವನು ಶಾಲೆಗೆ ಹೋಗದೆ ಬಿಡಲಿಲ್ಲ. ಕೆಲವು ವಿಷಯ

ಗಳಲ್ಲಿ ಅವನು ತನ್ನ ಉಪಾಧ್ಯಾಯನಿಗಿಂತಲೂ ಪ್ರವೀಣನಾಗಿದ್ದನು. ಅನೇಕ ವೇಳೆ ಜೇಮ್ಸ್ಸನ ಪ್ರಶ್ನೆಗಳಿಗೆ ಉತ್ತರವನ್ನು ಕೊಡುವುದು ಉಪಾಧ್ಯಾಯನಿಗೆ ಸಾಧ್ಯವಾಗುತ್ತಿರಲಿಲ್ಲ. ಜೇಮ್ಸ್ಸು ರಾತ್ರಿಯ ವೇಳೆ ಬೆಂಕಿಯ ಬೆಳಕಿನಲ್ಲಿ ಕುಳಿತು ಅಂಕಗಣಿತವನ್ನು ಅತ್ಯಾದರದಿಂದ ಕಲಿಯುತ್ತಿದ್ದನು. ಒಂದು ದಿನ ಉಪಾಧ್ಯಾಯನು ಪುಸ್ತಕದಲ್ಲಿ ಕೊಟ್ಟಿದ್ದ ಒಂದು ಲೆಕ್ಕದ ಉತ್ತರವು ತಪ್ಪೆಂದು ಹೇಳಿದನು. ಜೇಮ್ಸ್ಸು ಆ ಲೆಕ್ಕವನ್ನು ಮಾಡಿ ಪುಸ್ತಕದಲ್ಲಿರುವ ಉತ್ತರವೇ ಸರಿಯೆಂದು ತೋರಿಸಿದನು. ಈ ಕಾರಣದಿಂದ ಜೊತೆಯ ಹುಡುಗರಿಗೆ ಜೇಮ್ಸ್ಸನಲ್ಲಿದ್ದ ಗೌರವವು ಬಹಳವಾಗಿ ಹೆಚ್ಚಿತು.

ಈ ಕಾಲದಲ್ಲಿ ಜೇಮ್ಸ್ಸು **ರಾಬಿನ್ಸನ್ ಕ್ರೂಸೋ** ಎಂಬ ಸಾಹಸಿಯ ಕಥೆಯ ಪುಸ್ತಕವನ್ನು ಅತ್ಯಾದರದಿಂದ ಓದಿದನು. ಅಂತಹ ಆತ್ಮಾವಲಂಬಿಯ ಸಾಹಸಗಳು ಅವನಿಗೆ ಆಶ್ಚರ್ಯವನ್ನುಂಟುಮಾಡಿದುವು. ಅವನು ಹೀಗೆಯೇ ಕೈಗೆ ಸಿಕ್ಕಿದ ಇತರ ಪುಸ್ತಕಗಳನ್ನೂ ಮನಸ್ಸಿಟ್ಟೋದಿ, ಅವುಗಳ ಸಾರಾಂಶವನ್ನು ಬಾಯಲ್ಲಿ ಸರಳವಾಗಿ ಹೇಳುವ ಮಟ್ಟಿಗೆ ಶಕ್ತನಾದನು.

ಜೇಮ್ಸ್ಸನಲ್ಲಿ ವಂಚನೆಯೇ ಆಗಲಿ ಕೃತ್ರಿಮವೇ ಆಗಲಿ ಇರಲಿಲ್ಲ. ಅವನು ತನ್ನ ಮನಸ್ಸಿಗೆ ತಪ್ಪೆಂದು ತೋರಿದುದನ್ನು ಸ್ನೇಹಿತರ ತೃಪ್ತ್ಯರ್ಥವಾಗಿಯಾದರೂ ಎಂದೂ ಮಾಡುತ್ತಿರಲಿಲ್ಲ; ಅವನು ಎಲ್ಲರೊಡನೆಯೂ ಪ್ರಾಮಾಣಿಕತೆಯಿಂದ ನಡೆದುಕೊಳ್ಳುತ್ತಿದ್ದನು. ಇದು ಅವನ ಮಿತ್ರರೆಲ್ಲರಿಗೂ ಗೊತ್ತಿದ್ದಿತು.

ಜೇಮ್ಸ್ಸು ಭೂತದಯಾಪರನಾಗಿಯೂ ಇದ್ದನು. ಒಂದು ದಿನ ಅವನ ಒಡನಾಡಿಯೊಬ್ಬನು ಅವನ ಬೆಕ್ಕಿಗೆ ಕಲ್ಲನ್ನೆಸೆದನು; ಬೆಕ್ಕು ಬಹಳ ಗಾಬರಿಯಿಂದ ಓಡಿಹೋಯಿತು; ಜೇಮ್ಸ್ಸಿಗೆ ಬಹಳ ಕೋಪ ಬಂದು, ಹೀಗೆ ಮಾಡುವುದು ಅನ್ಯಾಯವೆಂದು ಗದರಿಸಿ ಹೇಳಿದನು.

ಒಡನಾಡಿ.—ಬೆಕ್ಕು! ಅದಕ್ಕೇನು?

ಜೇಮ್ಸ್ಸು.—ಅದು ಕ್ರೌರ್ಯ.

ಒಡನಾಡಿ.—ಅದು ನಿನ್ನ ಬೆಕ್ಕೆಂದು ನನಗೆ ತಿಳಿದಿರಲಿಲ್ಲ.

ಜೇಮ್ಸ್.—ಯಾರದಾದರೇನು ? ಬೆಕ್ಕು ಬೆಕ್ಕೇ !

ಒಡನಾಡಿ.—(ಹಾಸ್ಯದಿಂದ) ಇಲಿ ಇಲಿಯೇ ?

ಜೇಮ್ಸ್.—ಪ್ರಾಣಿಗಳನ್ನು ನಾವು ಹಿಂಸಿಸಬಾರದು. 'ಅದೇನು ಒಂದು ಬೆಕ್ಕು, ಒಂದು ನಾಯಿ, ಒಂದು ಎತ್ತು, ಒಂದು ಕುದುರೆ, ಇನ್ನೇನೂ ಅಲ್ಲ' ಎನ್ನುವುದು ತಪ್ಪು. ನಾನು ಯಾವ ಪ್ರಾಣಿಯನ್ನೂ ಪೀಡಿಸುವುದಿಲ್ಲ.

ಒಡನಾಡಿ.—ನೀನು ಮೃದು ಸ್ವಭಾವವುಳ್ಳವನು ; ನಿನ್ನ ಪರಿಚಯವಾದರೆ ಸುಂಡಿಲಿಯೂ ನಿರ್ಭಯದಿಂದ ನಿನ್ನ ಮೇಲೆ ಓಡಾಡುವುದು.

ಜೇಮ್ಸ್.—ನಿನ್ನ ಪರಿಚಯವಾದರೆ ಅದು ನೀನಿದ್ದೆಡೆಗೇ ಬಾರದು ; ಬಂದರೆ ತನಗಾಗುವ ಪರಿಣಾಮವು ಅದಕ್ಕೆ ಗೊತ್ತೇ ಇದೆ.

ಆಗ ಆ ಒಡನಾಡಿಯು ತನ್ನ ತಪ್ಪನ್ನೊಪ್ಪಿಕೊಂಡು ಕ್ಷಮಾಪಣೆಯನ್ನು ಕೇಳಿ, "ಸ್ವಾಮಿ! ನಿಮ್ಮ ಬೆಕ್ಕಿಗೂ ನನ್ನ ಕ್ಷಮಾಪಣೆಗಳನ್ನು ಅರಿಕೆಮಾಡಿರಿ" ಎಂದು ಹೇಳುತ್ತ ಹೊರಟುಹೋದನು.

ಹೀಗೆಯೇ ಜೇಮ್ಸನ ಕಾರುಣ್ಯ ಭಾವವು ಅನೇಕ ವೇಳೆ ಪ್ರಕಟವಾಗುತ್ತಿದ್ದಿತು. ಪಾಠಶಾಲೆಯಲ್ಲಿ ಅಯೋಗ್ಯರಾದ ಹುಡುಗರು ಅನಾಥರಾದ ಸಣ್ಣವರನ್ನು ಪೀಡಿಸುತ್ತಿದ್ದರೆ ಜೇಮ್ಸ್ ಅವರೊಡನೆ ಹೋರಾಡಿ ಅವರು ಸಣ್ಣವರ ಗೋಜಿಗೆ ಹೋಗದಂತೆ ಮಾಡುತ್ತಿದ್ದನು.

ಹದಿನೈದು ವರ್ಷ ವಯಸ್ಸಾಗುವುದರೊಳಗೆ ಜೇಮ್ಸ್ ಇನ್ನೂ ಮೂರು ಕಣಜಗಳನ್ನು ಕಟ್ಟಿ ಬಡಗಿಯ ಕೆಲಸದಲ್ಲಿ ನಿಪುಣನಾದನು. ಯಾವ ಕೆಲಸವನ್ನಾದರೂ ಮಾಡಲು ಜೇಮ್ಸ್ ಸಿದ್ಧನಾಗಿದ್ದ ಕಾರಣ ಅವನಿಗೆ ಯಾವಾಗಲೂ ಕೆಲಸವು ದೊರೆಯುತ್ತಿದ್ದಿತು. ಆಟವಾಡಲು ಅವನಿಗೆ ವಿರಾಮವಿರುತ್ತಿರಲಿಲ್ಲ. ಆದರೂ ಅವನಿಗೆ ಆಟದಲ್ಲಿ ಬಹು ಪ್ರೀತಿ ಇದ್ದಿತು. ಆಟದ ಕಾಲದಲ್ಲಿ ಅವನ ಪ್ರಸನ್ನತೆ, ಉತ್ಸಾಹ,

ಗಂಭೀರ ವಾಕ್ಯ ಮುಂತಾದುವುಗಳನ್ನು ನೋಡಿ ಎಲ್ಲರೂ ಅವನ ಜೊತೆಗೆ ಸೇರಲು ಪ್ರಯತ್ನಿಸುತ್ತಿದ್ದರು. ಅವನಿದ್ದ ಕಡೆಯಲ್ಲಿ ಎಲ್ಲ ರಿಗೂ ಸಂತೋಷವಿದ್ದಿತು. ಆ ಪಾಳೆಯದಲ್ಲಿ ಅತ್ಯಂತ ಬಲಶಾಲಿಯೆನಿಸಿ ಕೊಂಡಿದ್ದವನು ಎತ್ತುತ್ತಿದ್ದಷ್ಟು ಭಾರವನ್ನು ಜೇಮ್ಸ್ ಎತ್ತುತ್ತಿದ್ದನು. ತೂಕವಾದ ಆಳಾದುದರಿಂದ ಓಡುವುದರಲ್ಲಿಯೂ ಹಾರುವುದರಲ್ಲಿಯೂ ನೆಗೆಯುವುದರಲ್ಲಿಯೂ ಜೇಮ್ಸ್ ಮುಂದಾಳಾಗಿರಲಿಲ್ಲ; ಆದರೂ ಆಟ ಗಳಲ್ಲಿ ಅವನ ಕೌಶಲವು ಹೊರಪಡುತ್ತಿದ್ದಿತು.

## ಅಧ್ಯಾಯ ೧೦

## ಮರದುಪ್ಪಿನ ಕಾರ್ಖಾನೆಯ ಕರಣಿಕ

ಕಂಡ ಕಂಡ ಪುಸ್ತಕಗಳನ್ನು ಜೇಮ್ಸ್ ಓದುತ್ತಿದ್ದನೆಂದು ಹಿಂದೆ ಹೇಳಿದೆವಷ್ಟೆ! ಭೂವಿವರಣೆಯ ಪುಸ್ತಕಗಳನ್ನೂ ದೇಶಾಟನದ ಪುಸ್ತಕಗಳನ್ನೂ ಓದಿ ನಾನಾ ದೇಶಗಳ ಜನರ ಚರಿತ್ರಾಂಶಗಳನ್ನು ಜೇಮ್ಸ್ ತಿಳಿದುಕೊಂಡಿದ್ದನು; ಮೃದು ಮಧುರ ಸಂಭಾಷಣೆಯ ರೀತಿಯನ್ನೂ ಅಭ್ಯಾಸ ಮಾಡುತ್ತಿದ್ದನು. ಈ ಕಾರಣಗಳಿಂದ ಅವನು ಹುಡುಗರ ಗುಂಪಿನಲ್ಲಿ ಪ್ರಮುಖನಾಗಿರಲು ಅರ್ಹನಾಗಿದ್ದನು.

ಹೀಗಿರುವಲ್ಲಿ, ಸ್ಮಿತ್ತೆಂಬ ಧನಿಕನಾದ ರೈತನು ಒಂದು ದಿನ ಜೇಮ್ಸನ ಮನೆಗೆ ಬಂದು ಎಲಿಜೆಯೊಡನೆ, "ಜೇಮ್ಸನ ಸಹಾಯವಿಲ್ಲದೆ ನನ್ನ ಕೆಲಸವು ಸಾಗುವಂತಿಲ್ಲ. ನನ್ನ ಪುದೀನಾ ಹೊಲದಲ್ಲಿ ಕಳೆ ತುಂಬಿ ಹೋಗಿದೆ ; ಅದನ್ನು ಕಿತ್ತುಹಾಕಬೇಕು ; ನಾವಕಾಶ ಮಾಡಿದರೆ ಪೈರು ನಷ್ಟವಾಗಿ ಹೋಗುವುದು" ಎಂದನು.

ಎಲಿಜೆ.—ನಮ್ಮ ಹೊಲದಲ್ಲಿಯೇ ಕೆಲಸವಿದೆ; ಜೇಮ್ಸ್‌ಗೆ ಬಿಡುವಾಗುವಂತೆ ತೋರುವುದಿಲ್ಲ.

ಸ್ಮಿತ್ತು.—ಹೇಗಾದರೂ ಬಿಡುವು ಮಾಡಿಕೊಂಡು ಜೇಮ್ಸ್ ಬರಲೇಬೇಕು. ನಾನು ಇಪ್ಪತ್ತು ಮಂದಿ ಹುಡುಗರನ್ನು ಕೂಲಿಯಿಟ್ಟಿದ್ದೇನೆ.

ಎಲಿಜೆ.—ಇಪ್ಪತ್ತು ಮಂದಿ ಇದ್ದ ಮೇಲೆ ಇವನೇತಕ್ಕೆ?

ಸ್ಮಿತ್ತು.—ಹಾಗಲ್ಲ, ಇವನಿಲ್ಲದಿದ್ದರೆ ಅಷ್ಟು ಮಂದಿ ಇದ್ದೂ ಫಲವಿಲ್ಲ. ಇವನು ಮುಂದಾಳಾಗಿ ನಿಂತು, ಜೊತೆಗಾರರೆಲ್ಲರಿಗೂ ಉತ್ಸಾಹವನ್ನುಂಟುಮಾಡುತ್ತ, ಸರಸವಾದ ಕಥೆಗಳನ್ನು ಹೇಳುತ್ತ, ಅವರೂ ತನ್ನ ಜೊತೆಯಲ್ಲಿಯೇ ಕೆಲಸ ಮಾಡಿಕೊಂಡು ಬರುವಂತೆ ಮಾಡುವನು. ತಾನು ಹೆಚ್ಚು ಕೆಲಸವನ್ನು ಮಾಡುವುದಲ್ಲದೆ ಇತರರ ಕೈಯಿಂದಲೂ ಉಪಾಯದಿಂದ

ಕೆಲಸ ಮಾಡಿಸುವನು. ಈ ಕಾರಣದಿಂದ ಜೇಮ್ಸಿಗೆ ನಾನು ಹೆಚ್ಚು ಕೂಲಿಯನ್ನು ಸಂತೋಷದಿಂದ ಕೊಡುತ್ತೇನೆ; ದಯವಿಟ್ಟು ಅವನನ್ನು ಕಳುಹಿಸಿರಿ.

ಎಲಿಜೆಯು ಹರ್ಷದಿಂದ ಜೇಮ್ಸ್ನನ್ನು ಕೆಲಸಕ್ಕೆ ಕಳುಹಿಸಿದಳು. ಮುಂದೆ ಹದಿನಾರು ವರ್ಷಗಳನಂತರ ಓಹಿಯೋ ಸಂಸ್ಥಾನದ ಒಂದು ರೆಜಿಮೆಂಟಿಗೆ ದಳಪತಿಯಾಗಿ ನಿಂತು ಜಯಶಾಲಿಯಾಗಿ ಮೆರೆಯುವ ಅಂಶಕ್ಕೆ ಇದು ಸೂಚನೆಯೆಂಬಂತೆ, ಜೇಮ್ಸ್ ಆ ಹುಡುಗರಿಗೆ ಮುಂದಾಳಾಗಿ ನಿಂತು, ಬೆಳೆಗೆ ಕೆಡಕನ್ನುಂಟುಮಾಡುತ್ತ ಹೊಲದಲ್ಲಿ ತುಂಬಿದ್ದ ಕಳೆಯನ್ನೆಲ್ಲ ಕಿತ್ತು ನಾಶಪಡಿಸಿದನು.

ಬಡಗಿಯ ಜೊತೆಯಲ್ಲಿ ಜೇಮ್ಸ್ ಕಣಜ ಮುಂತಾದುವುಗಳನ್ನು ಕಟ್ಟುತ್ತಿದ್ದನಷ್ಟೆ. ತನ್ನ ಮನೆಗೆ ಹತ್ತು ಮೈಲಿಯ ದೂರದಲ್ಲಿದ್ದ ಮರದುಪ್ಪಿನ ಕಾರ್ಖಾನೆಯ ಯಜಮಾನನಿಗೆ ಕೆಲಸದ ಜೋಪಡಿಯೊಂದನ್ನು ಕಟ್ಟಿಕೊಟ್ಟಾಗ ಆತನು ಜೇಮ್ಸನ ಸುಗುಣವನ್ನೂ ಚಟುವಟಿಕೆಯನ್ನೂ ಜಾಣತನವನ್ನೂ ನೋಡಿ, ತನ್ನ ಬಳಿಯಲ್ಲಿ ಕೆಲಸಕ್ಕೆ ನಿಂತರೆ, ತಿಂಗಳಿಗೆ ಹನ್ನೆರಡು ಡಾಲರು ಸಂಬಳಕ್ಕೆ ಬದಲಾಗಿ ಹದಿನಾಲ್ಕು ಡಾಲರು ಸಂಬಳವನ್ನು ಕೊಡುತ್ತೇನೆಂದು ಅವನಿಗೆ ಹೇಳಲು, "ನಮ್ಮ ತಾಯಿಯನ್ನು ಕೇಳಿ ನೋಡುತ್ತೇನೆ" ಎಂದು ಜೇಮ್ಸ್ ಉತ್ತರ ಕೊಟ್ಟನು.

ಹದಿನೈದು ವರ್ಷದ ಹುಡುಗನಿಗೆ ತಿಂಗಳಿಗೆ ಹದಿನಾಲ್ಕು ಡಾಲರು ಸಂಬಳವು ಆ ಪ್ರಾಂತದಲ್ಲಿ ಆಗ ಅಪೂರ್ವವಾಗಿದ್ದಿತು. ಇದೂ ಅಲ್ಲದೆ, ತನಗೆ ಇಷ್ಟವಿದ್ದಷ್ಟು ಕಾಲ ಆ ಕೆಲಸದಲ್ಲಿದ್ದು ಬೇಕಾದಾಗ ಅದನ್ನು ಬಿಟ್ಟುಬಿಡಬಹುದಾಗಿದ್ದಿತು.

ಜೇಮ್ಸ್, "ಅಮ್ಮಾ! ತಿಂಗಳಿಗೆ ಹದಿನಾಲ್ಕು ಡಾಲರಿನಂತೆ ಸಂಬಳ ತೆಗೆದುಕೊಂಡು ಇಚ್ಛೆಯಿದ್ದಷ್ಟು ಕಾಲ ಕೆಲಸ ಮಾಡಬಹುದಾಗಿದೆ; ಈ ಕೆಲಸವನ್ನು ಒಪ್ಪಿಕೊಳ್ಳಲೆ?" ಎಂದು ತಾಯಿಯನ್ನು ಕೇಳಿದನು.

**ಎಲಿಜೆ.—(ಆಶ್ಚರ್ಯದೊಡನೆ) ಎಲ್ಲಿ ?**

ಜೇಮ್ಸ್.—ಮರದುಪ್ಪಿನ ಕಾರ್ಖಾನೆಯಲ್ಲಿ.

ಎಲಿಜೆ.—ಸ್ಥಳವು ಸರಿಯಾದುದಲ್ಲವೆಂದು ನನಗೆ ತೋರುತ್ತದೆ.

ಜೇಮ್ಸ್.—ಸಂಬಳವೇನೋ ಸರಿಯಾಗಿದೆ; ಸ್ಥಳವೇಕೆ ಸರಿಯಲ್ಲ?

ಎಲಿಜೆ.—ಕೆಟ್ಟ ಸಹವಾಸಕ್ಕೆ ಬೀಳುವೆಯೋ ಏನೊ?

ಜೇಮ್ಸ್.—ಕೆಟ್ಟ ಸಹವಾಸಕ್ಕೆ ಬೀಳುವ ಸಂಭವವು ಎಲ್ಲ ಸ್ಥಳಗಳಲ್ಲಿಯೂ ಇದೆ. ಕೆಟ್ಟ ಸಹವಾಸಕ್ಕೆ ಹೋಗದೆ ನನ್ನ ಕೆಲಸವನ್ನು ನಾನು ಮಾಡಿಕೊಂಡಿರುತ್ತೇನೆ.

ಎಲಿಜೆ.—ನಿನ್ನ ಉದ್ದೇಶವೇನೋ ಹಾಗೆಯೇ ಇರಬಹುದು; ಆದರೂ ಸಹವಾಸ ಬಲವು ಹೇಗಿರುವುದೊ?

ಜೇಮ್ಸ್.—ನನಗೆ ಮನೋದಾರ್ಢ್ಯವು ಕಡಿಮೆಯೆಂದೊ?

ಎಲಿಜೆ.—ನಾವು ಊಹಿಸುವಷ್ಟು ಮನೋದಾರ್ಢ್ಯವು ನಮಗಿರುವುದಿಲ್ಲ. "ಬೀಳದೆ ನಿಂತಿರುವೆನೆಂದು ಮೆರೆಯುವವನು ಎಚ್ಚರದಿಂದಿರಲಿ; ಏಕೆಂದರೆ ಬೀಳುವ ಸಂಭವವೂ ಉಂಟು" ಎಂದು ದೇವತಾ ಪುಸ್ತಕವೇ ತಿಳಿಸುತ್ತದೆ. ಈ ದೇವ ವಾಕ್ಯವನ್ನು ಎಲ್ಲರೂ ಲಕ್ಷ್ಯದಲ್ಲಿಟ್ಟಿರಬೇಕು.

ಜೇಮ್ಸ್.—ಹಾಗಾದರೆ ನಾನು ಹೊರಡುವುದಕ್ಕೆ ನೀನು ಒಪ್ಪುವುದಿಲ್ಲ?

ಎಲಿಜೆ.—ಹಾಗೆ ನಾನು ಹೇಳಲಿಲ್ಲ.

ಜೇಮ್ಸ್.—ಹಾಗಾದರೆ ನೀನು ಹೇಳುವುದೇನು?

ಎಲಿಜೆ.—ಒಪ್ಪಿಕೊಳ್ಳುವುದಕ್ಕೆ ಮೊದಲು ಚೆನ್ನಾಗಿ ಪರ್ಯಾಲೋಚಿಸು.

ಜೇಮ್ಸ್.—ಪರ್ಯಾಲೋಚನೆಗೆ ಕಾಲವಿಲ್ಲ; ಬರುವುದಾದರೆ ಎರಡೇ ದಿವಸದಲ್ಲಿ ಬರುವೆನೆಂದು ಹೇಳಿದ್ದೇನೆ.

ಎಲಿಜೆ.—ಅಷ್ಟು ಬೇಗನೆ?

ಜೇಮ್ಸ್.—ಅಹುದು; ನಿನಗಾಗಿ ಹೆಚ್ಚು ಹಣವನ್ನು ಸಂಪಾದಿಸಲು

ಈ ಬೇಸಾಯದ ಕೆಲಸವನ್ನು ಬಿಟ್ಟುಬಿಡುವ ಕಾಲವು ಬಂದಿದೆ ಯೆಂದು ನನಗೆ ತೋರುತ್ತದೆ.

ಎಲಿಜೆ.—ಬಡಗಿ ಟ್ರೀಟನು ಈ ವಿಷಯದಲ್ಲಿ ಏನು ಹೇಳಿದನು ?

ಜೇಮ್ಸ್.—ಈ ವಿಷಯದಲ್ಲಿ ಆತನನ್ನು ನಾನು ಕೇಳಲೇ ಇಲ್ಲ.

ಎಲಿಜೆ.—ಒಂದು ದಿವಸವಲ್ಲದಿದ್ದರೆ ಮತ್ತೊಂದು ದಿವಸ ನೀನು ಕೆಲಸಕ್ಕೆ ಹೊರಗೆ ಹೊರಡಲೇ ಬೇಕಲ್ಲವೆ? ಆ ಕಾಲವು ಈಗಲೇ ಬಂದಿರುವುದೇನೊ ?

ಜೇಮ್ಸ್.—'ಭಗವಂತನೇ ದಾರಿಯನ್ನು ತೋರಿಸುವನು, ಕಾದಿರು' ಎಂದು ನೀನು ನನಗೆ ಹೇಳಿರುವೆಯಲ್ಲವೆ? ಭಗವಂತನು ಈ ದಾರಿಯನ್ನು ತೋರಿಸದಿರುವ ಪಕ್ಷಕ್ಕೆ ಮತ್ತಾವ ದಾರಿಯನ್ನು ತೋರಿಸುವನೋ ನಾನರಿಯೆನು.

ಎಲಿಜೆ.—ಭಗವಂತನೇ ಈ ದಾರಿಯನ್ನು ತೋರಿಸಿರುವನೇನೊ? ಮರದುಪ್ಪಿನ ಕಾರ್ಖಾನೆಯಲ್ಲಿ ದುಷ್ಟ ಸಹವಾಸಕ್ಕೊಳಗಾಗದೆ ನಿನ್ನ ಶೀಲವನ್ನು ಕಾಪಾಡಿಕೊಳ್ಳುವುದಾದರೆ, ಈ ದಾರಿಯನ್ನು ಭಗವಂತನೇ ತೋರಿಸಿರುವನೆಂಬುದು ಸ್ಪಷ್ಟಪಡುತ್ತದೆ. ನಿನ್ನ ಶೀಲವನ್ನು ಕಾಪಾಡಿಕೊಳ್ಳುವ ಭಾರವು ನಿನ್ನ ಮೇಲೆಯೇ ಬಿದ್ದಿದೆ.

ಜೇಮ್ಸ್.—ಹಾಗಾದರೆ ನೀನು ಒಪ್ಪಿರುವೆಯೊ ?

ಎಲಿಜೆ.—ಒಪ್ಪಿದ್ದೇನೆ, ಎಲ್ಲವೂ ಅನುಕೂಲವಾಗಿ ಪರಿಣಮಿಸಲಿ ಎಂದು ಹಾರೈಸುತ್ತೇನೆ.

"ನನ್ನ ಕೆಲಸವನ್ನು ಮಾಡಿಕೊಂಡು ದುಷ್ಟರ ಸಹವಾಸಕ್ಕೆ ಹೋಗದೆ ಇರುವೆನು, ನೀನು ಚಿಂತಿಸದಿರು" ಎಂದು ತಾಯಿಗೆ ಮಾತು ಕೊಟ್ಟು ಜೇಮ್ಸ್ ತನ್ನ ಸಾಮಾನನ್ನು ಒಂದು ಕರವಸ್ತ್ರದಲ್ಲಿ ಕಟ್ಟಿಕೊಂಡು, ಗೊತ್ತಾದ ದಿನಕ್ಕೆ ಸರಿಯಾಗಿ ಮರದುಪ್ಪಿನ ಕಾರ್ಖಾನೆ

ಯನ್ನು ಸೇರಿದನು. ಆ ಕಾರ್ಖಾನೆಯ ಯಜಮಾನನಿಗೆ ಬಹಳ ಸಂತೋಷವಾಯಿತು:

ಆ ಕಾರ್ಖಾನೆಯೂ ಅಲ್ಲಿಯ ಕೆಲಸವೂ ಕೊಳಕಿನಿಂದ ಅಸಹ್ಯ ವಾಗಿದ್ದಿತು. ಬೂದಿಯನ್ನು ತುಂಬಿ ತರುವುದೂ, ಬೂದಿಯ ನೀರು ಕುದಿಯುವ ಪಾತ್ರೆಗಳನ್ನು ನೋಡಿಕೊಳ್ಳುವುದೂ, ಕರಿಯ ಉಪ್ಪನ್ನು ಪ್ರತ್ಯೇಕಿಸುವುದೂ—ಯಾವ ರೀತಿಯಲ್ಲಿ ನೋಡಿದರೂ, ಸಹ್ಯವಾದ ಕೆಲಸಗಳಾಗಿರಲಿಲ್ಲ. ಆದರೆ, ಮೇಲೆ ಹೇಳಿದ ಕೆಲಸಗಳಲ್ಲಿ ಯಾವುದನ್ನೂ ಜೇಮ್ಸ್ ಸರ್ವದಾ ಮಾಡಬೇಕಾಗಿರಲಿಲ್ಲ. ಲೆಕ್ಕವನ್ನಿಡುವುದು, ವ್ಯಾಪಾರ ಮಾಡುವುದು, ಪದಾರ್ಥಗಳನ್ನು ಅಳೆಯಿಸುವುದು—ಇವೇ ಜೇಮ್ಸ್‌ನ ಕೆಲಸಗಳಾಗಿದ್ದುವು. ಬೂದಿಯನ್ನು ಮಾರುವವರು ಅನೇಕ ವೇಳೆ ಅಳತೆಯಲ್ಲಿ ಮೋಸ ಮಾಡುತ್ತಿದ್ದರು. ಇದು ಯಜಮಾನನಿಗೆ ಗೋಚರ ವಾಗಿಯೇ ಇರಲಿಲ್ಲ. ಜೇಮ್ಸ್ ಈ ಬಗೆಯ ಮೋಸಗಳೆಲ್ಲವನ್ನೂ ನಿಲ್ಲಿಸಿ ಯಜಮಾನನ ಆದಾಯವನ್ನು ಹೆಚ್ಚಿಸಿದನು. ಇದರಿಂದ ಯಜ ಮಾನನಿಗೆ ಜೇಮ್ಸ್‌ನಲ್ಲಿ ನಂಬಿಕೆ ಹೆಚ್ಚಿತು.

ತಾಯಿಯು ಹೆದರಿದ್ದಂತೆ ಆ ಕಾರ್ಖಾನೆಯವರಿಂದ ಜೇಮ್ಸ್‌ಗೆ ಯಾವ ತೊಂದರೆಯೂ ಬರಲಿಲ್ಲ. ಇನ್ನೊಂದು ಸಹವಾಸದಿಂದ ಜೇಮ್ಸ್‌ನ ನಡೆವಳಿಕೆಯೇ ಬದಲಾಯಿಸಿತು: ಯಜಮಾನನ ಮಗಳು ವಿದ್ಯಾವತಿಯಾಗಿಯೂ ಸೊಗಸುಗಾತಿಯಾಗಿಯೂ ಕವಯಿತ್ರಿಯಾ ಗಿಯೂ ಇದ್ದುದರಿಂದ ಮನೆಯಲ್ಲಿ ಅನೇಕ ಕಲ್ಪನಾ ಕಥೆಗಳ ಪುಸ್ತಕ ಗಳನ್ನು ಇಟ್ಟಿದ್ದಳು. ಅವುಗಳಲ್ಲಿ ಸಮುದ್ರಯಾನ ವಿಚಾರವನ್ನೂ ನಾವಿಕರ ಚರಿತ್ರೆಗಳನ್ನೂ ಅವರ ಸಾಹಸ ಕೃತ್ಯಗಳ ವರ್ಣನೆಗಳನ್ನೂ ಜೇಮ್ಸ್ ಓದುತ್ತ ಬರಲು, ತಾನೂ ಒಂದು ದಿನ ನಾವಿಕನಾಗಿ ಪ್ರಪಂಚ ವೆಲ್ಲವನ್ನೂ ಸುತ್ತಾಡಿಕೊಂಡು ಬರಬೇಕೆಂಬ ಹುಚ್ಚು ಅವನಿಗೆ ಹಿಡಿಯಿತು. "ಅಮ್ಮನು ಇದಕ್ಕೇನು ಹೇಳುವಳೊ? ಪ್ರಾಯಶಃ ರಗಳೆಯನ್ನು ಮಾಡುವಳು. ಆದರೇನು! ನಾನು ಪ್ರಪಂಚವನ್ನು ನೋಡಿಯೇ ಬರಬೇಕು'' ಎಂದು ಜೇಮ್ಸ್ ತನ್ನ ಮನಸ್ಸಿನಲ್ಲಿ ನಿಶ್ಚಯ

ಮಾಡಿಕೊಂಡನು. ಯಜಮಾನನಲ್ಲಿ ಭಕ್ತಿಯಿಟ್ಟು ಕೆಲಸ ಮಾಡುತ್ತ ಜೇಮ್ಸ್ ಅವನ ಸಂಪೂರ್ಣ ವಿಶ್ವಾಸಕ್ಕೆ ಪಾತ್ರನಾಗಿದ್ದನು. ಒಂದು ದಿನ ಜೇಮ್ಸ್ ತನ್ನ ಯಜಮಾನನೊಡನೆ, "ನನಗೆ ನಾವಿಕನಾಗಬೇಕೆಂಬ ಆಸೆ ಇದೆ" ಎಂದು ಹೇಳಲು ಆತನು ದಿಗಿಲುಬಿದ್ದು, "ಏನು! ನೀನು! ನಾವಿಕನೇ? ನನ್ನಲ್ಲಿಯೇ ಕೆಲಸ ಮಾಡಿಕೊಂಡಿರು. ನಿನ್ನಂಥವರು ನಾವಿಕರಾಗಿ ಜೀವಮಾನವನ್ನು ವ್ಯರ್ಥಮಾಡಿಕೊಳ್ಳಬಾರದು. ನೀನೂ ಒಂದು ದಿನ ಇಂತಹ ಕಾರ್ಖಾನೆಯನ್ನು ಸ್ಥಾಪಿಸಬಹುದು" ಎಂದು ಬುದ್ಧಿವಾದವನ್ನು ಹೇಳಿದನು. ಮುಂದಕ್ಕೆ ಚರ್ಚೆಮಾಡದೆ ಜೇಮ್ಸ್ ಸುಮ್ಮನಾದನು. ಮೇಲೆ ಹೇಳಿದ ಬಗೆಯ ಪುಸ್ತಕಗಳನ್ನೋದುತ್ತ, ನಾವಿಕನಾಗಬೇಕೆಂಬ ಬಯಕೆಯನ್ನು ಹೆಚ್ಚಿಸಿಕೊಳ್ಳುತ್ತ, ಅವನು ಚಳಿಗಾಲದಿಂದ ನಾಲ್ಕು ತಿಂಗಳ ವರೆಗೆ ಆ ಕಾರ್ಖಾನೆಯಲ್ಲಿ ಕೆಲಸ ಮಾಡಿಕೊಂಡಿದ್ದನು.

ಆ ಕಾರ್ಖಾನೆಯ ಒಂದು ದೊಡ್ಡ ಹಜಾರದಲ್ಲಿ ಸಾಯಂಕಾಲವಾದೊಡನೆಯೇ ಎಲ್ಲರೂ ಸೇರಿ ಬೆಂಕಿಯನ್ನು ಕಾಯಿಸಿಕೊಳ್ಳುತ್ತ ಕುಳಿತುಕೊಳ್ಳುವರು. ಆಗ ಜೇಮ್ಸ್ ಅಂಕಗಣಿತವನ್ನು ನೋಡುತ್ತಿದ್ದು, ಯಜಮಾನನು ಎದ್ದು ಹೋದೊಡನೆಯೇ ತಾನೂ ಮಲಗಲು ಹೋಗುತ್ತಿದ್ದನು. ಎಲ್ಲರೂ ಹೊರಟುಹೋದನಂತರ ಯಜಮಾನನ ಮಗಳು ತನ್ನ ಪ್ರಣಯಿಯೊಡನೆ ಸರಸ ಸಲ್ಲಾಪಗಳಲ್ಲಿರುತ್ತಿದ್ದಳು. ಒಂದು ದಿನ ಜೇಮ್ಸ್ ಮನಸ್ಸಿಟ್ಟು ಅಂಕಗಣಿತದ ಲೆಕ್ಕವನ್ನು ಮಾಡುತ್ತಿದ್ದುದರಿಂದ ಎಲ್ಲರೂ ಎದ್ದುಹೋದುದು ಅವನಿಗೆ ಗೊತ್ತಾಗಲಿಲ್ಲ. ಆಗ ಯಜಮಾನನ ಮಗಳು ಸಿಡಿಸಿಡಿಗುಟ್ಟುತ್ತ, "ಕೂಲಿಯ ಆಳುಗಳಿಗೆ ಮಲಗಲು ಇನ್ನೂ ಹೊತ್ತಾಗಲಿಲ್ಲವೊ?" ಎಂದಳು. ಜೇಮ್ಸನಿಗೆ ಬಹು ಕೋಪ ಬಂದಿತು. ಸ್ವಲ್ಪ ಹೊತ್ತು ಅವಳನ್ನು ಬಿರುನೋಟದಿಂದ ನೋಡುತ್ತಿದ್ದು, ಕೊನೆಗೆ ಒಂದು ಮಾತನ್ನೂ ಆಡದೆ ಅವನು ಮಲಗಲು ಹೊರಟುಹೋದನು. ನಿದ್ರೆಯು ಬರಲಿಲ್ಲ; ಯಜಮಾನನ ಮಗಳು ನಿದ್ರೆಯನ್ನು ಓಡಿಸಿಬಿಟ್ಟಿದ್ದಳು. ಜೇಮ್ಸ್ ತನ್ನ ಮನಸ್ಸಿನಲ್ಲಿಯೇ, "ಕೂಲಿಯಾಳು! ಕೂಲಿಯಾಳು!" ಎಂದು ತನಗೆ ತಾನೇ

ಹೇಳಿಕೊಳ್ಳುತ್ತ, "ಈ ಕಾರ್ಖಾನೆಯಲ್ಲಿ ನನ್ನ ಬಾಳು ಅಷ್ಟೆ! ಕೂಲಿಯ ಆಳು! ನಾನಿನ್ನು ಆಳಾಗಿರುವುದಿಲ್ಲವೆಂಬುದನ್ನು ಅವಳು ತಿಳಿದು ಕೊಳ್ಳಲಿ" ಎಂದು ಹೇಳಿಕೊಳ್ಳುತ್ತ ನಿದ್ದೆಹೋಗಲು ಯತ್ನಿಸಿದನು. ಆದರೆ ನಿದ್ದೆಯು ಬರಲಿಲ್ಲ; 'ಕೂಲಿಯಾಳು' ಎಂಬುದು ತನಗೆ ತಾನೆ ಜ್ಞಾಪಕಕ್ಕೆ ಬರುತ್ತಿದ್ದಿತು. ಅದನ್ನು ಸ್ಮರಿಸಿದ ಹಾಗೆಲ್ಲ ಕೋಪವು ಹೆಚ್ಚುತ್ತ ಬಂದಿತು. ಕೊನೆಗೆ, "ಕೂಲಿಯ ಆಳು! ಆಳಾಗಿಯೇ ನಾನಿರ ಬೇಕಾಗಿಲ್ಲ; ಯಜಮಾನನಾಗ ಬಲ್ಲೆನು; ಆಗಿಯೂ ಆಗುತ್ತೇನೆ. ಇಲ್ಲಿ ಇನ್ನು ಒಂದು ದಿನವೂ ನಾನಿರುವುದಿಲ್ಲ; ಆದುದೆಲ್ಲ ಆಗಲಿ; ನಾಳೆಯೇ ಹೊರಡುತ್ತೇನೆ. ನಾನು ಆಳು ಮಾತ್ರದವನೊ ಅಲ್ಲವೊ ಆ ಸಿಡು ಕಿಯೇ ತಿಳಿದುಕೊಳ್ಳಲಿ. ಆಳುಗಳನ್ನಿಟ್ಟುಕೊಂಡು ನಾನೂ ಯಜ ಮಾನನಾಗುತ್ತೇನೆ" ಎಂದು ಶಪಥವನ್ನು ಮಾಡಿದನು.

ಅನೇಕ ವರ್ಷಗಳು ಕಳೆದ ಮೇಲೆ ಇದೇ ವಿಷಯವನ್ನು ಕುರಿತು ಜೇಮ್ಸ್, "ಆ ಯುವತಿಯ ಸಿಡುಕಿನ ಮಾತು ನನಗೆ ಪರ ಮಾನುಗ್ರಹವಾಗಿ ಪರಿಣಮಿಸಿತು. ಆ ರಾತ್ರಿ ಸ್ವಲ್ಪವೂ ನಿದ್ದೆ ಬರಲಿಲ್ಲ. ಹಾಸಿಗೆಯ ಮೇಲೆ ಎಚ್ಚರವಾಗಿ ಬಿದ್ದುಕೊಂಡು, 'ಕೂಲಿಯಾಳು' ಎಂದು ಆ ಯುವತಿಯು ನನ್ನನ್ನು ಕರೆಯಲು ಅವಕಾಶವುಂಟಾಗದಂತೆ ನಾನು ಗಣ್ಯನಾಗಲೇ ಬೇಕೆಂದೂ, ಕೂಲಿಯ ಆಳೆಂದು ಹೇಳುವುದಕ್ಕೆ ಆ ಯುವತಿಗೆ ಅಸಾಧ್ಯವಾಗುವಂತೆ ಮಾಡಲೇ ಬೇಕೆಂದೂ ಎಷ್ಟೋ ಸಾರಿ ಪ್ರತಿಜ್ಞೆಯನ್ನು ಮಾಡಿದೆನು" ಎಂದು ಹೇಳಿಕೊಂಡಿರುತ್ತಾನೆ.

ಮಾರನೆಯ ದಿನ ಪ್ರಾತಃಕಾಲ ಜೇಮ್ಸ್ ಗಂಟನ್ನು ಕಟ್ಟಿಕೊಂಡು ಯಜಮಾನನ ಬಳಿಗೆ ಹೋಗಿ, "ನನಗೆ ಇಲ್ಲಿಯ ಕೆಲಸವು ಸಾಕು; ನಾನು ನಮ್ಮೂರಿಗೆ ಹೋಗುತ್ತೇನೆ" ಎಂದು ಹೇಳಿದನು. ಅದನ್ನು ಕೇಳಿದ ಆ ಯಜಮಾನನಿಗೆ ಗುಂಡಿನೇಟು ಬಿದ್ದುದಕ್ಕಿಂತಲೂ ಹೆಚ್ಚಾದ ದಿಗ್ಭ್ರಮೆಯುಂಟಾಯಿತು. "ಏನು! ಕೆಲಸವನ್ನು ಬಿಟ್ಟುಹೋಗು ತ್ತೀಯಾ?" ಎಂದು ಕೇಳಿದುದಕ್ಕೆ, "ನನಗೆ ಇಲ್ಲಿಯ ಕೆಲಸವು ಬೇಡ" ಎಂದು ಹೇಳಿ ಜೇಮ್ಸ್ ತಾನು ಮಾಡಿದ್ದ ದೃಢ ಸಂಕಲ್ಪವನ್ನು ತಿಳಿಸಿ

ದನು. ಹಿಂದಿನ ರಾತ್ರಿ ನಡೆದ ಸಂಗತಿಯನ್ನು ಯಜಮಾನನಿಗೆ ತಿಳಿಸದೆ ತನ್ನ ಸಂಬಳವನ್ನು ತೆಗೆದುಕೊಂಡು, ಅವನ ಅಪ್ಪಣೆಯನ್ನು ಪಡೆದು, ಜೇಮ್ಸ್ ತನ್ನ ಊರಿಗೆ ಬಂದು ಸೇರಿದನು.

# ಅಧ್ಯಾಯ ೧೧

## ದೋಣಿಯ ಹುಡುಗ

ಜೇಮ್ಸ್ಸ ಮರದುಪ್ಪಿನ ಕಾರ್ಖಾನೆಯನ್ನು ಬಿಟ್ಟು ಮನೆಗೆ ಬಂದು ತನ್ನ ತಾಯಿಗೆ ಅಲ್ಲಿ ನಡೆದ ವಿಷಯಗಳನ್ನು ತಿಳಿಸಿ, ತಾನು ಸಂಪಾದಿಸಿ ತಂದಿದ್ದ ಐವತ್ತು ಡಾಲರುಗಳನ್ನು ಕೊಟ್ಟನು. ಮತ್ತೊಂದು ದಿವಸ ಈ ಪ್ರಸ್ತಾವವು ಬಂದಾಗ ಎಲಿಜೆಯು, "ಆ ಯುವತಿಯ ಮಾತಿಗೆ ಲಕ್ಷ್ಯಕೊಡುವುದೇಕೆ? ನಿನಗೆ ಅಪಮಾನ ಮಾಡಬೇಕೆಂದು ಅವಳು ಆಲೋಚಿಸಿರಲಾರಳು. ಸಂಬಳಕ್ಕಿರುವುದು ಅಪಮಾನಕರವಲ್ಲ; ಸಂಬಳವನ್ನು ತೆಗೆದುಕೊಂಡು ಸೋಮಾರಿಯಾಗಿದ್ದರೆ ಅದು ಅಪಮಾನ ಕರ" ಎಂದಳು.

ಜೇಮ್ಸ್.—ಕೂಲಿಯಾಳಾಗಿರುವುದೇನೋ ಅಪಮಾನಕರವಲ್ಲ; ಅದನ್ನು ನಾನೂ ಬಲ್ಲೆನು. ಆ ಗರ್ವಿಷ್ಠೆಯು ಆಡಿದ ಮಾತಿನ ರೀತಿಯು ನನ್ನನ್ನು ರೇಗಿಸಿತು. ತಾಬೇದಾರನಾಗಿರುವುದು ಕಷ್ಟ; ಹುದ್ದೇದಾರನಾಗಬೇಕೆಂದು ನನಗಿಚ್ಛೆ; ಗಣ್ಯನಾಗಬೇಕೆಂದು ನಾನು ಸಂಕಲ್ಪಿಸಿರುತ್ತೇನೆ; ಅದನ್ನು ಸಾಧಿಸುವೆನು.

ಎಲಿಜೆ.—ಸಂತೋಷವಪ್ಪ; ಇವೆಲ್ಲವೂ ನಮ್ಮ ಕ್ಷೇಮಕ್ಕೆ ಎಂದು ಭಾವಿಸೋಣ; ದೇವರು ಒಳ್ಳೆಯದನ್ನೇ ಮಾಡುವನು.

ಜೇಮ್ಸ್.—ನಾನು ಇನ್ನೊಂದು ಕೆಲಸವನ್ನು ಹುಡುಕಬೇಕು.

ಎಲಿಜೆ.—ನಿನಗೆ ಉಚಿತವಾಗಿ ತೋರಿದಂತೆ ಮಾಡು. ಈಗ ಕೆಲಸಗಳಿಗೇನೂ ಕೊರತೆಯಿಲ್ಲ.

ಜೇಮ್ಸ್.—(ಸಂದೇಹಪಡುತ್ತ) ಅಮ್ಮಾ! ನಾನು ಹಡಗಿನಲ್ಲಿ ಕೆಲಸಕ್ಕೆ ಸೇರಬೇಕೆಂದಿರುವೆನು.

ಎಲಿಜೆ.—(ಗಾಬರಿಯೊಡನೆ) ಏನು ಹೇಳಿದೆ?

ಜೇಮ್ಸ್.—ನಾವಿಕನಾಗಬೇಕೆಂದು ನನಗೆ ಬಹಳವಾಗಿ ಆಸೆ ಇದೆ.

ಎಲಿಜೆ.—ಈ ಹುಚ್ಚು ನಿನಗೆ ಹೇಗೆ ಹಿಡಿಯಿತು? ನೀನು ಹೇಳುವುದು ನನಗೆ ಗಾಬರಿಯನ್ನುಂಟುಮಾಡುತ್ತಿದೆ.

ಜೇಮ್ಸ್.—ಸರಿ ಸರಿ! ನೀನು ಹೆದರಬೇಡ; ನಿನ್ನ ಮಾತನ್ನು ಮೀರಿ ನಾನೆಲ್ಲಿಗೂ ಹೋಗುವುದಿಲ್ಲ.

ಎಲಿಜೆ.—ನೀನು ನಾವಿಕನಾಗುವುದಾದರೆ ನನ್ನ ಮಾತನ್ನು ಮೀರಿ ದಂತಾಗುವುದು. ನೀನು ಮರದುಪ್ಪಿನ ಕಾರ್ಖಾನೆಯಲ್ಲಿ ಯಾದರೂ ಇರು, ಮತ್ತೆಲ್ಲಿಯಾದರೂ ಇರು, ಬಡಗಿಯಾಗು; ನಾವಿಕನಾಗುವ ಆಸೆಯನ್ನು ಮಾತ್ರ ಬಿಟ್ಟುಬಿಡು.

ಜೇಮ್ಸ್.—ಅದೇಕೆ?

ಎಲಿಜೆ.—ನಾವಿಕನಾದರೆ ನೀನು ಗಣ್ಯನೆನಿಸಿಕೊಳ್ಳಲಾಗುವುದಿಲ್ಲ.

ಜೇಮ್ಸ್.—ನಾನು ಒಂದು ಹಡಗಿಗೆ ಮುಖ್ಯಾಧಿಕಾರಿಯಾಗಬಹುದು; ದೇವರ ಕೃಪೆಯಿರುವುದಾದರೆ ಒಂದು ಹಡಗನ್ನು ನಾನು ಬೆಲೆಗೆ ತೆಗೆದುಕೊಳ್ಳಲೂ ಬಹುದು. ಮುಂದಾಗುವುದು ಯಾರಿಗೆ ತಾನೆ ಗೊತ್ತು?

ಎಲಿಜೆ.—ನೀನು ನಾವಿಕನಾದ ಮೇಲೆ ಏನಾಗುವೆಯೋ ಯಾರಿಗೆ ಗೊತ್ತು? ನಿನ್ನ ತಾಯಿಯ ಮನಸ್ಸನ್ನು ನೋಯಿಸಬಾರದೆಂದು ನಿನಗೆ ಅಭಿಪ್ರಾಯವಿರುವ ಪಕ್ಷಕ್ಕೆ ಈ ಮಾತುಗಳನ್ನು ಮತ್ತೆ ಆಡಬೇಡ.

ಈ ಸಂಭಾಷಣೆಯು ಇಲ್ಲಿಗೆ ನಿಂತಿತು. ಜೇಮ್ಸ್ ಮೊದಲಿನಂತೆ ಬೇಸಾಯದ ಕೆಲಸವನ್ನು ಮಾಡಿಕೊಂಡಿದ್ದನು. ಇಷ್ಟರಲ್ಲಿ ಜೇಮ್ಸನ ಅಕ್ಕನಾದ ಮೆಹಿಟಾಬೆಲಿಯು ಮದುವೆ ಮಾಡಿಕೊಂಡು ನ್ಯೂಬರ್ಗಿನಲ್ಲಿ ವಾಸವಾಗಿದ್ದಳು. ಅಲ್ಲಿಯೇ ಜೇಮ್ಸನ ಸೋದರ ಮಾವನೂ ಒಂದು ಕಾಡಿನಲ್ಲಿ ಮರಗಳನ್ನು ಕಡಿಸುವ ಕೆಲಸವನ್ನು ಮಾಡಿಸುತ್ತಿದ್ದನು. ಜೇಮ್ಸ್ ಅಲ್ಲಿಗೆ ಹೋಗಿ ಮರಗಳನ್ನು ಕಡಿಯಲು ಸಂಬಳಕ್ಕೆ ಸೇರಿ ಅಕ್ಕನ ಮನೆಯಲ್ಲಿ ಊಟ ಮಾಡಿಕೊಂಡಿದ್ದನು.

ಜೇಮ್ಸ್ ಕೆಲಸ ಮಾಡುತ್ತಿದ್ದ ಕಾಡು ಈರೀ ಸರೋವರಕ್ಕೆ

ಎದುರಾಗಿದ್ದಿತು. ಅವನು ಆ ವಿಶಾಲವಾದ ಸರೋವರವನ್ನೂ ಅದರ ಮೇಲೆ ಸಂಚರಿಸುವ ಹಡಗುಗಳನ್ನೂ ನೋಡುತ್ತ, ಒಂದೊಂದು ವೇಳೆ ತಾನು ಮಾಡುವ ಕೆಲಸವನ್ನು ಬಿಟ್ಟು ನಿಲ್ಲುತ್ತಿದ್ದನು. ಇದರಿಂದ ಅವನಿಗೆ ನಾವಿಕನಾಗಬೇಕೆಂಬ ಹುಚ್ಚು ಬಲಿಯಿತು. ಅವನು ಎಷ್ಟು ಕಷ್ಟಪಟ್ಟು ಮರಗಳನ್ನು ಕಡಿದರೂ ತಕ್ಕಷ್ಟು ಕೆಲಸವು ನಡೆಯುತ್ತಿರಲಿಲ್ಲ. ಸ್ವಲ್ಪ ಕಾಲದಲ್ಲಿಯೇ ಅವನಿಗೆ ಇದು ಗೋಚರವಾಯಿತು. ಕೆಲಸವನ್ನು ಮನಸ್ಸಿಟ್ಟು ಮಾಡದಿದ್ದರೆ ಫಲವು ಕಡಿಮೆಯಾಗುವುದೆಂಬುದು ಅವನಿಗೆ ಅನುಭವಕ್ಕೆ ಬಂದಿತು.

ಅಕ್ಕನ ಮನೆಯಲ್ಲಿದ್ದಾಗ ಜೇಮ್ಸ್ ಒಂದು ದಿನ ತಾನು ನಾವಿಕನಾಗಬೇಕೆಂದಿರುವ ಸಂಗತಿಯನ್ನು ಅವಳಿಗೆ ತಿಳಿಸಿದನು. ಅವಳು ಗಾಬರಿಪಟ್ಟು, ''ಹಾಗೆ ಮಾಡಬಾರದು; ಅದರಿಂದ ಪ್ರಯೋಜನವಿಲ್ಲ. ನಿನ್ನ ತಾಯಿಯ ಮನಸ್ಸಿಗೆ ಸಂಕಟವನ್ನುಂಟುಮಾಡದಿರುವುದು ನಿನ್ನ ಕರ್ತವ್ಯ'' ಎಂದು ಹೇಳಿದಳು.

ಜೇಮ್ಸ್ ಆ ಕಾಡಿನಲ್ಲಿ ಐವತ್ತು ದಿನಗಳು ಕೆಲಸವನ್ನು ಮಾಡಿ ಐವತ್ತು ಡಾಲರನ್ನು ಸಂಪಾದಿಸಿ, ತನ್ನ ಊಟದ ವೆಚ್ಚವನ್ನು ಅಕ್ಕನಿಗೆ ಕೊಟ್ಟು, ಉಳಿದ ಹಣವನ್ನು ತಾಯಿಗೆ ಕೊಡುವುದಕ್ಕಾಗಿ ಊರಿಗೆ ತೆಗೆದುಕೊಂಡು ಹೋದನು. ಮನೆಗೆ ಬಂದರೂ ಅವನ ಮನಸ್ಸಿಗೆ ಸಮಾಧಾನವಿರಲಿಲ್ಲ. ಅವನ ರೀತಿಯನ್ನು ನೋಡಿ, ನಾವಿಕನಾಗಬೇಕೆಂಬ ಹುಚ್ಚು ಇನ್ನೂ ಅವನಿಗೆ ಬಿಟ್ಟಿಲ್ಲವೆಂದು ತಾಯಿ ತಿಳಿದುಕೊಂಡಳು; ಆದರೆ ಆ ವಿಚಾರವನ್ನೇ ಅವಳು ಎತ್ತಲಿಲ್ಲ. ಹೀಗಿರಲು, ಚಳಿಗಾಲವು ಕಳೆಯಿತು. ತನ್ನ ಕೆಲಸವನ್ನು ಮಾಡಿಕೊಳ್ಳುತ್ತ, ಜೇಮ್ಸ್ ಪಾಠಶಾಲೆಗೂ ಹೋಗುತ್ತಿದ್ದನು. ಆದರೂ ಮೊದಲಿನಂತೆ ಅವನಿಗೆ ತನ್ನ ಕೆಲಸದಲ್ಲಿ ಅಕ್ಕರೆಯಿರಲಿಲ್ಲ; ಸಮುದ್ರದ ಗೀಳು ಬಹಳ ಹೆಚ್ಚಿತು. ಆ ಗೀಳನ್ನು ಅಡಗಿಸುವುದು ಅಸಾಧ್ಯವೆಂದು ತೋರಿಬರಲು, ಅವನು ಧೈರ್ಯ ಮಾಡಿ ಒಂದು ದಿನ ತಾಯಿಯೊಡನೆ, ''ಅಮ್ಮಾ! ಸಮುದ್ರದ ಮೇಲೆ ನನಗೆಷ್ಟು ಪ್ರೀತಿಯಿದೆಯೋ ನಿನಗೆ ತಿಳಿಯದು. ಹಡಗಿನಲ್ಲಿ

ಒಂದು ಕೆಲಸವನ್ನು ಸಂಪಾದಿಸಲು ನಾನೇತಕ್ಕೆ ಪ್ರಯತ್ನಪಡ ಕೂಡದು?'' ಎಂದು ಕೇಳಿದನು. ಎಲಿಜೆಯು, ''ಎಲ್ಲಿಗೆ ಪ್ರಯಾಣ ಮಾಡಬೇಕೆಂದಿದ್ದೀಯೆ?'' ಎಂದು ಕೇಳಿದಳು.

ಎಲಿಜೆಯು ತನಗೆ ಅಡ್ಡಿಯಾಗಿ ಬರುವಳೆಂದು ಭಾವಿಸಿದ್ದ ಜೇಮ್ಸ್‌ನಿಗೆ ಅವಳ ಪ್ರಶ್ನೆಯನ್ನು ಕೇಳಿ ವಿಸ್ಮಯವುಂಟಾಯಿತು; ತಾಯಿಯ ಮನಸ್ಸು ಬದಲಾಯಿಸಿರಬೇಕೆಂದು ಅವನಿಗೆ ಸಂತೋಷ ಹುಟ್ಟಿತು. ಎಲಿಜೆಯ ಮನಸ್ಸಾದರೋ ನಿಜವಾಗಿ ಬದಲಾಯಿಸಿರಲಿಲ್ಲ; ಅವಳು ಜಾಣತನದಿಂದ ಯುಕ್ತಿಯೊಂದನ್ನು ಆಲೋಚಿಸಿಟ್ಟುಕೊಂಡಿದ್ದಳು.

ಜೇಮ್ಸ್.—ಯಾವ ಸ್ಥಳಕ್ಕಾದರೂ ಸರಿ; ದೇಶ ಸಂಚಾರವನ್ನು ಮಾಡ ಬೇಕೆಂದು ನನಗೆ ಹೆಚ್ಚಾದ ಆಸೆಯಿದೆ.

ಎಲಿಜೆ.—ನಿನ್ನಂತಹ ಜಾಣನಿಗೆ ಸ್ಥಳ ನಿರ್ದೇಶವು ಕೂಡ ಗೊತ್ತಿಲ್ಲ ದಿದೆಯೆ? ನಾನು ಪ್ರಯಾಣ ಮಾಡಬೇಕಾದರೆ ಎಲ್ಲಿಗೆ ಹೋಗ ಬೇಕೊ ಅದನ್ನು ಮೊದಲು ಗೊತ್ತುಮಾಡಿಕೊಳ್ಳುವೆನು. ನೀನು ಹೋಗಬೇಕೆಂದಿರುವುದು ಯೂರೋಪಿಗೊ? ಏಷ್ಯಾಕ್ಕೊ? ಇಲ್ಲವೆ, ಆಫ್ರಿಕಾಕ್ಕೊ?

ಜೇಮ್ಸ್.—ಅದೊಂದೂ ಗೊತ್ತಿಲ್ಲ; ನಾನು ಆಟ್ಲಾಂಟಿಕ್ ಸಾಗರ ವನ್ನು ದಾಟಿ ಹೋಗಬೇಕು.

ಎಲಿಜೆ.—ಅರ್ಧ ದಾರಿಯಲ್ಲಿ ರೋಗ ಪೀಡಿತನಾಗಿ ಹಿಂದಿರುಗಬೇಕಲ್ಲವೆ! ಹುಡುಗರು ತಮಗೆ ಬೇಕಾಗಿರುವುದೇನೋ ಅದನ್ನೇ ತಿಳಿಯ ಲಾರರು.

ಜೇಮ್ಸ್.—ನನಗೆ ಬೇಕಾಗಿರುವುದು ನನಗೆ ಗೊತ್ತಿದೆ; ಅದನ್ನೇ ನಾನು ನಿನಗೆ ಹೇಳಬೇಕೆಂದಿರುವೆನು. ನಾವಿಕನಾಗಬೇಕೆಂದು ನನಗಾಸೆ ಯಿದೆ; ಬೇಸರವಾದರೆ ನಾನೇ ಅದನ್ನು ಬಿಟ್ಟು ಮನೆಗೆ ಬರುತ್ತೇನೆ.

ಎಲಿಜೆ.—ಮನೆಗೆ ಬರುವುದು ಆಗ ಅಷ್ಟು ಸುಲಭವಾಗಿರುವುದಿಲ್ಲ. ನೀನು ಮೆಡಿಟರೇನಿಯನ್ನಿಗೋ ಚೀಣಾದೇಶಕ್ಕೋ ಹೋಗಿರು

ವಾಗ, ಒಪ್ಪಿರುವ ಕೆಲಸವನ್ನು ಬಿಟ್ಟು ಮನೆಗೆ ಬರುವುದು ಸಾಧ್ಯ ವಾಗುವುದಿಲ್ಲ. "ಅಮ್ಮನ ಮಾತನ್ನು ಕೇಳಿದ್ದರೆ ಚೆನ್ನಾಗಿರು ತ್ತಿದ್ದಿತು" ಎಂದು ಆಗ ನಿನಗೆ ತೋರುವುದು.

ಜೇಮ್ಸ್.—ನನಗೆ ಅನುಭವವಾಗುವ ವರೆಗೂ ನೀನು ಹೇಳುವ ತೊಂದರೆ ಗಳು ನನಗೆ ಗೊತ್ತಾಗುವುದಿಲ್ಲ. ನೀನು ಸಮ್ಮತಿಸಿದ ಹೊರತು ನಾನು ಸಮುದ್ರಕ್ಕೂ ಹೋಗುವುದಿಲ್ಲ, ಮತ್ತೆಲ್ಲಿಗೂ ಹೋಗು ವುದಿಲ್ಲ.

ಎಲಿಜೆ.—ಒಳ್ಳೆಯದು, ನೋಡೋಣ. ನೀನು ಈರೀ ಸರೋವರದ ಮೇಲೆ ಒಂದು ಹಡಗಿನಲ್ಲಿ ಕೆಲಸ ಮಾಡಿ ನೋಡು ; ಪ್ರಾಯಶಃ ನಿನಗೆ ಅದು ಒಗ್ಗುವುದಿಲ್ಲ; ಹೇಗಾದರೂ ನೀನು ಮನೆಗೆ ಸಮೀಪದಲ್ಲಿಯೇ ಇದ್ದಂತಾಗುವುದು.

ಜೇಮ್ಸ್.—(ಸಂತೋಷದಿಂದ) ಅಮ್ಮಾ! ನೀನು ಹೇಳುವುದು ನಿಜವೊ? ನಾನು ಈರೀ ಸರೋವರಕ್ಕೆ ಹೊರಡಲು ನಿಜವಾಗಿಯೂ ನೀನು ಸಮ್ಮತಿಸುವೆಯಾ?

ಎಲಿಜೆ.—(ದುಃಖದೊಡನೆ) ಅಟ್ಲಾಂಟಿಕ್ ಸಾಗರವನ್ನು ದಾಟುವುದಕ್ಕೆ ಬದಲಾಗಿ ಇದನ್ನು ನೀನು ಪರೀಕ್ಷೆ ಮಾಡಬಹುದು; ನನ್ನ ಅಡ್ಡಿಯಿಲ್ಲ.

ಜೇಮ್ಸ್.—ಹಾಗಾದರೆ ನಾನು ಈರೀ ಸರೋವರಕ್ಕೆ ಜಾಗ್ರತೆಯಾಗಿ ಹೊರಡುತ್ತೇನೆ.

ಮಗನ ಅಭಿಲಾಷೆಯನ್ನು ಪೂರ್ತಿಯಾಗಿ ತಿರಸ್ಕರಿಸುವುದು ಸರಿ ಯಲ್ಲವೆಂದು ಭಾವಿಸಿ, ಹತ್ತಿರದಲ್ಲಿರುವಾಗಲೆ ಅವನಿಗೆ ಸಮುದ್ರದ ಹುಚ್ಚು ಬಿಟ್ಟುಹೋಗಲೆಂದು ತಾಯಿ ಈ ಉಪಾಯವನ್ನು ಮಾಡಿ ದಳು; ನಾವಿಕನಾಗಿರುವ ಆಸೆಯು ಬಹು ಕಾಲದ ವರೆಗೆ ಮಗನಿಗಿರ ಲಾರದೆಂದು ಅವಳು ಭಾವಿಸಿದ್ದಳು.

ಜೇಮ್ಸ್ ತನ್ನ ಬಟ್ಟೆಗಳನ್ನೂ ಸ್ವಲ್ಪ ಹಣವನ್ನೂ ತೆಗೆದುಕೊಂಡು ಕ್ಲೀವ್ಲಾಂಡು ಪಟ್ಟಣಕ್ಕೆ ಹೊರಟನು. ಕಣ್ಣೀರನ್ನು ಸುರಿಸುತ್ತ

ತಾಯಿ ಮಗನನ್ನು ಆಶೀರ್ವದಿಸಿ ಕಳುಹಿಸಿದಳು. ಜೇಮ್ಸ್ ಹದಿನೇಳು ಮೈಲಿಗಳನ್ನು ನಡೆದು ಮಧ್ಯಾಹ್ನದ ಹನ್ನೆರಡು ಗಂಟೆಗೆ ಈರೀ ಸರೋವರದ ದಡವನ್ನು ಸೇರಿದನು. ಒಡನೆಯೇ ಅವನು ಎದುರಿಸಲ್ಲಿದ್ದ ಒಂದು ಸಣ್ಣ ಹಡಗಿಗೆ ಹೋಗಿ, "ಇಲ್ಲಿ ಒಬ್ಬ ಹೊಸಬನಿಗೆ ಚಾಕರಿ ಸಿಕ್ಕುವುದೊ?" ಎಂದು ಅಲ್ಲಿಯ ಸೇವಕನೊಬ್ಬನನ್ನು ಕೇಳಿದನು. "ಯಜಮಾನನು ಈಗಲೆ ಇತ್ತ ಬರುತ್ತಾನೆ, ಕಾದಿರು" ಎಂದು ಅವನು ಹೇಳಿದನು. ಜೇಮ್ಸ್ ಪುಸ್ತಕಗಳಲ್ಲಿ ಓದಿದ್ದಂತೆ, ಹಡಗಿನ ಯಜಮಾನನು ಗಂಭೀರನಾಗಿಯೂ ಆಜಾನು ಬಾಹುವಾಗಿಯೂ ಇರುವ ದೊಡ್ಡ ಮನುಷ್ಯನಾಗಿರಬೇಕೆಂದು ತನ್ನ ಮನಸ್ಸಿನಲ್ಲಿ ಭಾವಿಸಿಕೊಂಡು ಕಾದಿದ್ದನು.

ಸ್ವಲ್ಪ ಹೊತ್ತಿನಲ್ಲಿ ಒಬ್ಬ ಮನುಷ್ಯನ ಗರ್ಜನೆಯ ಶಬ್ದವು ಕೇಳಿಸಿತು. ಒಡನೆಯೇ, ಮದ್ಯಪಾನದಿಂದ ಮತ್ತನಾಗಿ ಅವಾಚ್ಯಗಳನ್ನಾಡುತ್ತ ಆ ಹಡಗಿನ ಯಜಮಾನನು ಜೇಮ್ಸನೆಡೆಗೆ ಬಂದನು. ಇಂತಹ ನೀಚನನ್ನು ಜೇಮ್ಸ್ ಇದುವರೆಗೂ ನೋಡಿರಲಿಲ್ಲ. ಜೇಮ್ಸ್ ಅವನೇ ಯಜಮಾನನೆಂದು ತಿಳಿದು ಧೈರ್ಯವನ್ನು ತಾಳಿ, "ಸ್ವಾಮಿ, ಯಜಮಾನರೆ!" ಎಂದು ಅವನನ್ನು ಸಂಬೋಧಿಸಿದನು.

ಯಜಮಾನ.—ಏನೋ ನಿನ್ನ ಗೋಳು? ಒಗುಳು!

ಜೇಮ್ಸ್.—ನಿಮ್ಮ ಹಡಗಿನಲ್ಲಿ ಸಂಬಳಕ್ಕೆ ಇನ್ನೊಬ್ಬ ಆಳು ಬೇಕಾಗಿದೆಯೊ?

ಯಜಮಾನ.—ಬೇಕಾಗಿದ್ದರೇನು? ಹಳ್ಳಿಯ ಮಂಕ! ಹಡಗನ್ನು ಬಿಟ್ಟು ಈ ಕ್ಷಣವೇ ತೊಲಗು! ಇಲ್ಲವಾದರೆ ನಿನ್ನನ್ನು ಸಿಗಿದು ಸರೋವರದಲ್ಲಿ ಹಾಕಿಬಿಡುವೆನು. ತೊತ್ತಿನ ಮಗನೆ! ತೊಲಗು.

ಅದಕ್ಕೆ ಜೇಮ್ಸ್ ಮರ್ಯಾದೆಯಿಂದ ಉತ್ತರ ಕೊಡಲು ಪ್ರಯತ್ನಪಟ್ಟನು. ಆದರೆ ಯಜಮಾನನು ಮತ್ತಷ್ಟು ರೇಗಿಕೊಂಡು, "ಇನ್ನೂ ಇಲ್ಲಿಯೇ ಇದ್ದೀಯಾ? ನಿನಗೆ ಜೀವದ ಮೇಲಣ ಆಸೆಯೇ ಇಲ್ಲವೊ? ಹೂಂ! ಹಾಳಾಗಿ ಹೋಗು. ಕೆಲಸಕ್ಕೆ ಬಾರದ ನಿನ್ನನ್ನು ಹಡಗಿನ

ಕೆಲಸಕ್ಕೆ ಸೇರಿಸಿಕೊಳ್ಳಬೇಕೊ? ತೊಲಗು!'' ಎನ್ನುತ್ತ ಹೊಡೆಯು ವುದಕ್ಕೆ ಹೋದನು.

ಇದನ್ನು ನೋಡಿ ಜೇಮ್ಸ್ ಅಲ್ಲಿ ನಿಲ್ಲದೆ ಹೊರಟನು. ಇಂತಹ ಮನುಷ್ಯರೂ ಇರುವರೆಂಬ ಅನುಭವವು ಅಂದಿನವರೆಗೂ ಅವನಿಗೆ ಬಂದಿರಲಿಲ್ಲ. ಪುಸ್ತಕಗಳಲ್ಲಿಯ ವರ್ಣನೆಗಳು ನಿಜವಲ್ಲವೆಂಬುದು ಆಗ ಅವನಿಗೆ ತೋರಲು, ಸಮುದ್ರದ ಹುಚ್ಚು ಅರ್ಧಪಾಲು ಬಿಟ್ಟು ಹೋಯಿತು. ಜೇಮ್ಸನ ಭಾಗಕ್ಕೆ ಆ ಕುಡಿಕನು ಮಹೋಪಕಾರಿ ಯಾಗಿ, ನಾವಿಕನಾಗುವುದನ್ನು ನಿಲ್ಲಿಸುವಂತಿದ್ದಿತು. ಆದರೆ ಈ ವಿಚಿ ತ್ರಾನುಭವದಿಂದಲೂ ತನ್ನ ಮನದಾಸೆಯನ್ನು ಜೇಮ್ಸ್ ಕೂಡಲೆ ಬಿಡಲಿಲ್ಲ. ಅವನು ಒಂದು ಮರದ ತುಂಡಿನ ಮೇಲೆ ಕುಳಿತು ಊರಿ ನಿಂದ ತಾನು ತಂದಿದ್ದ ರೊಟ್ಟಿಯನ್ನು ತಿನ್ನುತ್ತ ಲೋಕದ ವಿಚಿತ್ರ ರೀತಿಯನ್ನು ಕುರಿತು, ''ಇದೇನು! ಹಡಗಿನ ಯಜಮಾನನು ನನ್ನ ಮೇಲೆ ರೇಗಲು ಕಾರಣವೇನು? ನನ್ನನ್ನು ಕಾಣುವುದಕ್ಕೆ ಮೊದಲೇ ಅವನಿಗೆ ಕೋಪ ಬಂದಿದ್ದಿತೇನೊ? ನನ್ನ ಬಟ್ಟೆಗಳನ್ನೂ ನಡೆನುಡಿ ಗಳನ್ನೂ ನೋಡಿ ನಾನು ಹಳ್ಳಿಯ ಹುಡುಗನೆಂದೂ ಅಪ್ರಯೋಜಕ ನೆಂದೂ ಅವನಿಗೆ ತೋರಿತೇನೊ? ಅದೂ ನ್ಯಾಯವೇ; ಅವನ ತಪ್ಪೇನೂ ಇಲ್ಲ. ಯಾವ ರೀತಿಯಲ್ಲಿ ಅವನೆದುರಿಗೆ ಮಾತನಾಡಬೇಕಾಗಿದ್ದಿತೊ ಅದನ್ನು ಮೊದಲೇ ತಿಳಿದುಕೊಳ್ಳದೆ ಇದ್ದುದು ನನ್ನ ತಪ್ಪು'' ಎಂದು ತನಗೆ ತಾನೆ ಹೇಳಿಕೊಂಡನು. ನಾವಿಕನಾಗಬೇಕೆಂಬ ಹುಚ್ಚು ಅವನನ್ನು ಇನ್ನೂ ಬಿಟ್ಟುಹೋಗಿರಲಿಲ್ಲ.

ಹೀಗಿರುವಲ್ಲಿ, ತನ್ನ ಹೆಸರನ್ನು ಹಿಡಿದು ಯಾರೋ ಕೂಗಿದಂತಾ ಗಲು, ಜೇಮ್ಸ್ ಹಿಂದಿರುಗಿ ನೋಡಿದಾಗ, ತನ್ನ ಚಿಕ್ಕಮ್ಮನ ಮಗ ನಾದ ಏಮಾಸ್ ಲೆಚರನನ್ನು ಕಂಡನು. ಅವನು ಒಂದು ದೊಡ್ಡ ದೋಣಿಯಿಂದ ಜೇಮ್ಸನ್ನು ಮಾತನಾಡಿಸಿದನು. ಇಬ್ಬರಿಗೂ ಆಗ ಆನಂದವುಂಟಾಯಿತು.

ಲೆಚರು.—''ಜಿಮ್ಮಾ, ಇದೇನು ಇಲ್ಲಿಗೆ ಬಂದೆ! ನೀನು ಎಲ್ಲಿಯೊ ಮರಗಳನ್ನು ಕಡಿಯುತ್ತಿರಲಿಲ್ಲವೆ?''

ಜೇಮ್ಸ್ ತನ್ನ ವೃತ್ತಾಂತವನ್ನು ತಿಳಿಸಿ ಆ ಹಡಗಿನ ಯಜಮಾನನು ರಾಕ್ಷಸನಂತೆ ವರ್ತಿಸಿದುದನ್ನು ಹೇಳಿದನು.

ಲೆಚರು.—(ನಸು ನಗುತ್ತ) ಹಡಗಿನಲ್ಲಿ ಅಂಥವರೊಡನೆ ಕೆಲಸಕ್ಕೆ ನಿಲ್ಲುವುದು ನಿನಗಿಷ್ಟವೊ?

ಜೇಮ್ಸ್.—ಇಷ್ಟವಿಲ್ಲ, ಅದಕ್ಕಿಂತಲೂ ಮರ ಕಡಿಯುವ ಕೆಲಸವೇ ಮೇಲು.

ಲೆಚರು.—ಕಾಲುವೆಯ ದೋಣಿಯ ಕೆಲಸವು ನಿನಗೊಗ್ಗುವುದೊ?

ಜೇಮ್ಸ್.—ಅದರ ವಿಚಾರವೇ ನನಗೆ ತಿಳಿಯದು. ದೋಣಿಯಲ್ಲಿ ಕೆಲಸವನ್ನು ಕಲಿತರೆ ಮುಂದಕ್ಕೆ ಹಡಗಿನಲ್ಲಿ ನಾವಿಕನಾಗಬಹುದೊ?

ಲೆಚರು.—ಆಗಬಹುದು.

ಜೇಮ್ಸ್.—ಹಾಗಾದರೆ ಈ ದೋಣಿಯಲ್ಲಿ ಇನ್ನೊಬ್ಬ ಆಳು ಬೇಕೊ?

ಲೆಚರು.—ಬೇಕು, ನಮಗೆ ಇನ್ನೊಬ್ಬ ಕುದುರೆಯ ಆಳು ಬೇಕು.

ಜೇಮ್ಸ್.—ಈ ದೋಣಿಯ ಮುಖ್ಯಾಧಿಕಾರಿಯು ಯಾರು?

ಲೆಚರು.—ನಾನು.

ಜೇಮ್ಸ್.—(ಆಶ್ಚರ್ಯದಿಂದ) ನೀನೇ?

ಲೆಚರು.—ನೀನು ಇಲ್ಲಿ ಕೆಲಸಕ್ಕೆ ಸೇರಿದರೆ ನನಗೆ ಸಂತೋಷ.

ಜೇಮ್ಸ್.—ಕುದುರೆಯ ಕೆಲಸಕ್ಕೊ?

ಲೆಚರು.—ಅಹುದು; ಇದು ಮರವನ್ನು ಕಡಿಯುವಷ್ಟು ಕಷ್ಟದ ಕೆಲಸವಲ್ಲ.

ಈರೀ ಸರೋವರಕ್ಕೆ ಹಡಗುಗಳಲ್ಲಿ ಬಂದ ತಾಮ್ರದ ಅದುರನ್ನು ಪೂರ್ವ ದಿಕ್ಕಿನಲ್ಲಿರುವ ಪಿಟ್ಸ್‌ಬರ್ಗಿಗೆ ಕಾಲುವೆಯ ಮಾರ್ಗವಾಗಿ ಆ ದೋಣಿಯ ಮೂಲಕ ಸಾಗಿಸುತ್ತಿದ್ದರು. ತಿಂಗಳಿಗೆ ಹನ್ನೆರಡು ಡಾಲರು ಸಂಬಳಕ್ಕೆ ಜೇಮ್ಸ್ ಆ ದೋಣಿಯಲ್ಲಿ ಕೆಲಸಕ್ಕೆ ನಿಂತನು. ಅದರಲ್ಲಿ ಏಳು ಮಂದಿ ಕೆಲಸಗಾರರಿದ್ದರು: ಮುಖ್ಯಾಧಿಕಾರಿಯೊಬ್ಬನು, ದೋಣಿ

ಯನ್ನು ಸರಿಯಾದ ದಿಕ್ಕಿಗೆ ತಿರುಗಿಸುವ ಕೆಲಸವನ್ನು ನೋಡಿಕೊಳ್ಳುವವ ರಿಬ್ಬರು, ಕುದುರೆಗಳನ್ನು ದಡದಲ್ಲಿ ನಡೆಯಿಸುವವರು ಇಬ್ಬರು, ದೋಣಿಯ ಹಗ್ಗದ ಕೆಲಸಕ್ಕೊಬ್ಬನು, ಅಡಿಗೆಯವನೊಬ್ಬನು. ಕುದುರೆ ಯಾಳೊಬ್ಬೊಬ್ಬನಿಗೆ ಎರಡೆರಡು ಕುದುರೆಗಳಿದ್ದುವು; ಒಂದು ಕುದುರೆಯ ಮುಂದೆ ಮತ್ತೊಂದು ಕುದುರೆಯನ್ನು ಕಟ್ಟಿ, ದಡದಲ್ಲಿ ಅವುಗಳನ್ನು ನಡೆಯಿಸುತ್ತಿದ್ದರು. ಒಂದು ಜೋಡಿ ಕುದುರೆಗಳು ಆರು ಗಂಟೆಗಳು ಕೆಲಸ ಮಾಡಿದನಂತರ ಆ ಕುದುರೆಗಳೊಡನೆ ಆ ಆಳು ದೋಣಿಯೊಳಗೆ ಹೋಗಿ ಸೇರುತ್ತಿದ್ದನು; ಇನ್ನೊಬ್ಬ ಆಳು ತನ್ನ ಕುದುರೆಗಳೊಡನೆ ಕೆಲಸಕ್ಕೆ ಹೊರಡುತ್ತಿದ್ದನು. ದೋಣಿಯ ನೌಕರರು ಸಾಮಾನ್ಯವಾಗಿ ಕುಡಿಕರೂ ನೀಚರೂ ಆಗಿದ್ದರು. ಹೊಗೆಯ ಸೊಪ್ಪು ಮತ್ತು ಮದ್ಯ— ಇವೆರಡರ ಮಾತಲ್ಲದೆ ಬೇರೆ ಮಾತುಗಳು ಅವರಲ್ಲಿರಲಿಲ್ಲ. ಸತ್ಯ, ಧರ್ಮ, ನ್ಯಾಯ—ಇವುಗಳಿಗೂ ಅವರಿಗೂ ಬಹು ದೂರ. ಹೆಚ್ಚಾಗಿ ಮದ್ಯ ಪಾನ ಮಾಡಿ ಹೆಚ್ಚಾಗಿ ಬೈಗುಳನ್ನು ಬಯ್ಯುವವನೇ ಅವರಲ್ಲಿ ಧೀರನೆನಿಸಿ ಕೊಳ್ಳುತ್ತಿದ್ದನು. ಆ ಜನರ ಸಹವಾಸವು ಜೇಮ್ಸ್‌ಗೆ ಅಸಹ್ಯವಾ ಗಿದ್ದಿತು. ಸಾಧ್ಯವಾಗುವ ಮಟ್ಟಿಗೂ ಅವನು ಅವರನ್ನು ದೂರವಾ ಗಿಟ್ಟಿದ್ದನು.

ಕುದುರೆಗಳನ್ನು ನಡೆಯಿಸುವ ಕೆಲಸವು ಜೇಮ್ಸ್‌ಗೆ ಮೂರು ದಿನ ಪ್ರಾರಂಭವಾಯಿತು. ಹಡಗಿನ ಕೆಲಸವು ಸಿಕ್ಕುವುದಕ್ಕೆ ಬದಲಾಗಿ ದಡದ ಮೇಲೆ ಕುದುರೆಗಳನ್ನು ನಡೆಯಿಸಿ ದೋಣಿಯನ್ನು ಸಾಗಿಸುವ ಕೆಲಸವು ಅವನಿಗೆ ಸಿಕ್ಕಿತು. ನಾವಿಕನಾಗಲು ಇದು ಮೊದಲನೆಯ ಮೆಟ್ಟಿಲೆಂದು ಅವನು ಭಾವಿಸಿದನು.

ಒಂದು ಗಂಟೆಯ ಕಾಲದೊಳಗೆಯೇ ಇನ್ನೊಂದು ದೋಣಿಯು ಎದುರಿಗೆ ಬಂದಿತು. ಅದರ ಮಗ್ಗುಲಲ್ಲಿ ಹೋಗುವಾಗ ಬಹಳ ಎಚ್ಚರಿಕೆಯು ಆವಶ್ಯಕವಾಗಿದ್ದಿತು. ಆದರೆ ಎರಡು ಜೊತೆ ಕುದುರೆಗಳ ಹಗ್ಗಗಳೂ ಒಂದಕ್ಕೊಂದು ತೊಡಕು ಬಿದ್ದುವು. ಈ ತೊಡಕನ್ನು ಬಿಡಿಸುವುದರೊಳಗೆ ಒಂದು ದೋಣಿಯು ಮುಂದಕ್ಕೆ ನುಗ್ಗಿತು. ಇದ

ರಿಂದ, ಹಗ್ಗವು ಬಿಗಿಯಾಗಲು, ಜೇಮ್ಸೂ ಅವನ ಕುದುರೆಗಳೂ ನೀರಿಗೆ ಮುಗ್ಗರಿಸಿದುವು. ಜೇಮ್ಸು ಕುದುರೆಗಳೊಡನೆ ನೀರಿನಲ್ಲಿ ಮುಳುಗಿದನು; ಅವನ ಪ್ರಾಣ ಹೋಗುವ ಸಂಭವವೂ ಇದ್ದಿತು. ಆದರೆ ದೋಣಿಯಲ್ಲಿದ್ದವರು ನೀರಿನೊಳಗೆ ಬಿದ್ದು ಜೇಮ್ಸನ್ನೂ ಕುದುರೆಗಳನ್ನೂ ದಡಕ್ಕೆ ತಂದರು. ಇದು ವರೆಗೂ ಯಾರೂ ಕುಚೋದ್ಯದ ಮಾತುಗಳನ್ನಾಡಲಿಲ್ಲ. ಆಪತ್ಕಾಲವು ಕಳೆದು ಹೋಯಿತು, ಪರಿಹಾಸ್ಯದ ಕಾಲವು ಪ್ರಾರಂಭವಾಯಿತು. "ಸ್ನಾನವಾಯಿತೊ?" ಎಂದು ಒಬ್ಬನೂ, "ಕುದುರೆಗಳನ್ನು ತೊಳೆಯುತ್ತಿದ್ದೆಯೇನೊ?" ಎಂದು ಮತ್ತೊಬ್ಬನೂ, "ನೀರಿನಲ್ಲಿ ಮುಳುಗುವ ಮರ್ಮವನ್ನು ಕಲಿಯುತ್ತಿದ್ದೆಯೊ?" ಎಂದು ಬೇರೊಬ್ಬನೂ ಕೇಳುವುದಕ್ಕೆ ಪ್ರಾರಂಭಿಸಿದರು. ಮುಖ್ಯಾಧಿಕಾರಿಯಾದ ಲೆಚರನೂ ಕೂಡ, "ಜಿಮ್ಮಿ! ಕಾಲುವೆಯ ತಳದಲ್ಲಿ ಏನು ಮಾಡುತ್ತಿದ್ದೆ?" ಎಂದು ಕೇಳಿದನು. "ಜಪವನ್ನು ಮಾಡುತ್ತಿದ್ದೆ" ಎಂದು ಜೇಮ್ಸು ಉತ್ತರ ಕೊಟ್ಟು ಎಲ್ಲರೊಡನೆ ತಾನೂ ನಗಲಾರಂಭಿಸಿದನು.

ಜೇಮ್ಸನ ಸರದಿಯು ಪೂರಯಿಸಲು, ಅವನು ಕುದುರೆಗಳೊಡನೆ ದೋಣಿಯನ್ನೇರಿ ಕುದುರೆಗಳನ್ನು ಕಟ್ಟಿ ಅವುಗಳಿಗೆ ಹುಲ್ಲನ್ನು ಹಾಕಿದನು. ಆಗ ಲೆಚರು ಜೇಮ್ಸನ್ನು ನೋಡಿ, "ಜಿಮ್ಮಿ! ಬಹು ದೂರ ಹೋಗುವ ವರೆಗೂ ನಮಗೆ ವಿರಾಮವಿರುತ್ತದೆ. ನಿನ್ನ ಪಾಂಡಿತ್ಯವನ್ನು ಪರೀಕ್ಷಿಸಲು ನಾನು ಕೆಲವು ಪ್ರಶ್ನೆಗಳನ್ನು ಹಾಕಲೊ? ನಾನು ಮೂರು ವರ್ಷಗಳ ಕಾಲ ಉಪಾಧ್ಯಾಯನಾಗಿದ್ದೆನು" ಎಂದು ಹೇಳಿದನು. ಜೇಮ್ಸು ಒಪ್ಪಲು, ಲೆಚರು ಅನೇಕ ಪ್ರಶ್ನೆಗಳನ್ನು ಹಾಕಿದನು. ಅವುಗಳಿಗೆಲ್ಲ ಜೇಮ್ಸು ಸದುತ್ತರವನ್ನು ಕೊಟ್ಟನು. ಆಗ ಜೇಮ್ಸು, "ನಿನ್ನ ಪ್ರಶ್ನೆಗಳಿಗೆ ನಾನು ಉತ್ತರಗಳನ್ನು ಕೊಟ್ಟೆನು; ಯಾವ ನಿಯಮವಾಗಲಿ ಎರಡು ಕಡೆಗಳಿಗೂ ಅನ್ವಯಿಸಬೇಕಷ್ಟೆ! ಆದಕಾರಣ ನಾನು ಕೆಲವು ಪ್ರಶ್ನೆಗಳನ್ನು ನಿನಗೆ ಹಾಕಬಹುದೊ?" ಎಂದು ಕೇಳಿದನು. ಅದಕ್ಕೆ ಲೆಚರನು ಒಪ್ಪಲು, ಜೇಮ್ಸು ಪ್ರಶ್ನೆಗಳನ್ನು ಹಾಕಿದನು. ಯಾವ ಪ್ರಶ್ನೆಗೂ ಸರಿಯಾದ ಉತ್ತರ ಬರಲಿಲ್ಲ. ಜೇಮ್ಸನ

ಪಾಂಡಿತ್ಯವನ್ನು ನೋಡಿ ಲೆಚರನು ಆಶ್ಚರ್ಯಪಟ್ಟು, "ನೀನು ಮರ ಕಡಿಯುವನಾಗಿಯೇ ಆಗಲಿ, ದೋಣಿಯ ಆಳಾಗಿಯೇ ಆಗಲಿ ಇದ್ದು ದೇವರು ಕೊಟ್ಟ ಬುದ್ಧಿಯನ್ನು ವ್ಯರ್ಥ ಮಾಡಿಕೊಳ್ಳುವುದು ಸರಿಯಲ್ಲ" ಎಂದನು.

ಜೇಮ್ಸ್.—ಹಾಗಾದರೆ ನನ್ನ ಬುದ್ಧಿಯು ಚುರುಕಾಗಿದೆಯೆ? ನಾನು ವಿದ್ಯಾವಂತನಾಗಬಹುದೆ?

ಲೆಚರು.—ಆಗಬಹುದು, ಸಂದೇಹವೇ ಇಲ್ಲ.

ಜೇಮ್ಸ್.—ಹಾಗಾದರೆ ನಾನೇನು ಮಾಡಲಿ?

ಲೆಚರು.—ಉಪಾಧ್ಯಾಯನಾಗು. ಪಾಠಶಾಲೆಯಲ್ಲಿ ಕೆಲವು ಕಾಲದ ವರೆಗೆ ವ್ಯಾಸಂಗ ಮಾಡಿದರೆ ಸಾಮಾನ್ಯವಾದ ಪಾಠಶಾಲೆಯ ಉಪಾಧ್ಯಾಯನಾಗಬಹುದು; ವಿದ್ಯಾವಂತನಾದ ಮೇಲೆ ನಿನ್ನಿಷ್ಟ ಬಂದಂತೆ ಮಾಡುವುದಕ್ಕೆ ಶಕ್ತನಾಗುವೆ.

ಜೇಮ್ಸ್.—ಹೇಳುವುದು ಸುಲಭ, ಮಾಡುವುದು ಕಷ್ಟ. ನಾನು ಹಡಗಿನಲ್ಲಿ ಕೆಲಸಕ್ಕೆ ಏಕೆ ಸೇರಕೂಡದು?

ಲೆಚರು.—ಅದರಿಂದ ನೀನು ಗಣ್ಯನಾಗುವುದಿಲ್ಲ. ನಾವಿಕನ ಬಾಳು ಬಾಳಲ್ಲ. ನಿನಗಿರುವ ಮೇಧಾ ಶಕ್ತಿಯನ್ನು ನಿರರ್ಥಕ ಮಾಡಿಕೊಳ್ಳುವುದು ವಿವೇಕವಲ್ಲ. ನಾವಿಕನಾಗಬೇಕೆಂಬ ಬಯಕೆಯನ್ನು ಬಿಟ್ಟುಬಿಡು.

ಜೇಮ್ಸ್.—ನಾವಿಕನಾದರೂ ಬಹು ಕಾಲ ತಾಬೇದಾರಿಯಲ್ಲಿ ನಾನಿರುವುದಿಲ್ಲ; ಹುದ್ದೇದಾರನಾಗಬೇಕೆಂದು ನನ್ನ ಆಸೆ.

ಲೆಚರು.—ನಾವೆಯ ಕೆಲಸದಲ್ಲಿ ತಾಬೇದಾರಿಯಾಗಲಿ, ಹುದ್ದೇದಾರಿಯಾಗಲಿ ನಿನಗೆ ಉಚಿತವಲ್ಲ. 'ಕ್ಯಾಪ್ಟನ್ ಜೇಮ್ಸ್ ಗಾರ್‌ಫೀಲ್ಡ್' ಎನಿಸಿಕೊಂಡ ಮಾತ್ರಕ್ಕೇ ಪುರುಷಾರ್ಥವೇನಾಗುವುದು?

ಜೇಮ್ಸ್.—ಸಮುದ್ರ ಯಾನದ ಆಸೆ ನನಗೆ ಬಹಳವಾಗಿದೆ. ನಮ್ಮ ತಾಯಿಯು ಒಪ್ಪದೆ ಕೊನೆಗೆ, "ಈರೀ ಸರೋವರದ ಮೇಲೆ

ಕೆಲವು ಕಾಲ ಹಡಗಿನ ಕೆಲಸದಲ್ಲಿದ್ದು ನೋಡು'' ಎಂದು ಹೇಳಿ ಕಳುಹಿಸಿರುವಳು.

ಲೆಚರು.—ನಿಮ್ಮ ತಾಯಿಯು ಬಹಳ ವಿವೇಕಶಾಲಿನಿ. ನಿನ್ನ ಯೋಗ್ಯತೆಯನ್ನು ಅರಿತವಳಾದುದರಿಂದ ನೀನು ನಾವಿಕನಾಗುವುದಕ್ಕೆ ಆಕೆಯು ಒಪ್ಪದಿರುವುದು ಸಹಜವಾಗಿಯೇ ಇದೆ. ಪಾಠಶಾಲಾಧ್ಯಕ್ಷನಾಗಿಯೋ ಸಂಸ್ಥಾನಾಧ್ಯಕ್ಷನಾಗಿಯೋ ಬಾಳುವ ಸಂಭವವಿರುವಲ್ಲಿ, ನಾವಿಕನಾಗಬೇಕೆಂಬ ಆಸೆಯನ್ನು ಬಿಡದಿರುವುದು ಕೇವಲ ಅವಿವೇಕ.

ಜೇಮ್ಸ್.—ಅಂತಹ ಯೋಗ್ಯತೆಯು ನನಗೆ ಬರಬಹುದೆಂದು ನೀನು ನಿಜವಾಗಿಯೂ ನಂಬಿರುವೆಯೊ?

ಲೆಚರು.—ನಿಜವಾಗಿಯೂ ನಂಬಿದ್ದೇನೆ; ಹಾಗೆ ನಂಬದಿದ್ದರೆ ನಾನು ಈ ರೀತಿಯಲ್ಲಿ ಮಾತನಾಡುತ್ತಲೇ ಇರಲಿಲ್ಲ. ನಾನು ನಿನ್ನ ಸ್ಥಾನದಲ್ಲಿದ್ದ ಪಕ್ಷಕ್ಕೆ ಮುಂದಿನ ಮಾಗಿಯಲ್ಲಿ ಪಾಠಶಾಲೆಯಲ್ಲೋದಿ ತರುವಾಯ ಉಪಾಧ್ಯಾಯನಾಗುತ್ತಿದ್ದೆನು. ಈ ಬೇಸಗೆಯಲ್ಲಿ ಕೆಲಸ ಮಾಡುವುದರಿಂದ ನಿನ್ನ ವೆಚ್ಚಕ್ಕೆ ತಕ್ಕಷ್ಟು ಹಣವನ್ನು ನೀನು ಹೇಗಾದರೂ ಸಂಪಾದಿಸುವೆಯೆಂದು ನನ್ನ ನಂಬಿಕೆ.

ಇಲ್ಲಿಗೆ ಈ ಸಂಭಾಷಣೆಯು ಮುಗಿಯಿತು. ''ನನಗೆ ನಿಜವಾಗಿಯೂ ಅಷ್ಟು ಬುದ್ಧಿ ಇದೆಯೆ? ನಾವಿಕನಾಗಬೇಕೆಂದು ಒಯಸುವುದು ಮಂಕತನವೆ? ನನ್ನ ಯೋಗ್ಯತೆಯನ್ನು ನಾನು ಏತಕ್ಕೆ ನಿರರ್ಥಕ ಮಾಡಿಕೊಳ್ಳಬೇಕು? ಯಾರನ್ನು ಕೇಳಿದರೂ ಎಲ್ಲರೂ ನನ್ನ ವಿಷಯದಲ್ಲಿ ಒಂದೇ ರೀತಿಯಾಗಿ ಹೇಳುತ್ತಿದ್ದಾರಲ್ಲ! ಎಲ್ಲರೂ ತಪ್ಪು ಮಾಡುವ ಸಂಭವವಿಲ್ಲ'' ಎಂದು ಜೇಮ್ಸ್ ತನ್ನಲ್ಲಿ ತಾನೆ ಆಲೋಚಿಸಿದನು.

# ಅಧ್ಯಾಯ ೧೨

## ಸದ್ವರ್ತನೆಯ ಪ್ರಭಾವ

ಕ್ಲೀವ್ಲಾಂಡಿನಿಂದ ಪಿಟ್ಸ್‌ಬರ್ಗಿಗೂ ಪಿಟ್ಸ್‌ಬರ್ಗಿನಿಂದ ಕ್ಲೀವ್ಲಾಂಡಿಗೂ ಸಾಮಾನುಗಳನ್ನು ಸಾಗಿಸುವುದಕ್ಕೆ ಕಾಲುವೆಯ ಮಾರ್ಗವಿದೆ. ಈರೀ ಸರೋವರದ ಕಡೆಗೆ ಭೂಮಿಯು ಇಳಿಜಾರಾಗಿರುವುದು. ಭೂಮಿಯ ಮಟ್ಟವು ಹೆಚ್ಚು ಕಡಿಮೆಯಾಗಿರುವುದರಿಂದಲೂ ದೋಣಿಗಳು ಎರಡು ಕಡೆಗಳಿಗೂ ಹೋಗಿ ಬರಬೇಕಾಗಿರುವುದರಿಂದಲೂ ಅವಶ್ಯಕವಾದ ಸ್ಥಳಗಳಲ್ಲಿ ಕೊಳಗಳನ್ನು ಕಟ್ಟಿರುತ್ತಾರೆ. ಈ ಕೊಳಗಳಿಗೆ ನೀರು ಬಿಟ್ಟುಕೊಂಡು ನೀರಿನ ಮಟ್ಟವನ್ನು ಎತ್ತರಿಸಿಕೊಳ್ಳುವುದಕ್ಕೂ, ನೀರನ್ನು ಹೊರಗೆ ಹೊರಡಿಸಿ ಮಟ್ಟವನ್ನು ತಗ್ಗಿಸಿಕೊಳ್ಳುವುದಕ್ಕೂ ತಕ್ಕ ಏರ್ಪಾಡುಗಳನ್ನು ಮಾಡಿರುತ್ತಾರೆ. ದೋಣಿಯನ್ನು ಒಳಗೆ ಬಿಟ್ಟುಕೊಳ್ಳುವುದಕ್ಕೂ ಹೊರಗೆ ಹೊರಡಿಸುವುದಕ್ಕೂ ಬಾಗಿಲುಗಳಿರುತ್ತವೆ. ಇಂತಹ ಕೊಳಗಳ ಸಾಲು, ಮೇಲು ಮಟ್ಟದ ಕಾಲುವೆಗೂ ಕೆಳ ಮಟ್ಟದ ಕಾಲುವೆಗೂ ನಡುವೆ, ಓಹಿಯೋ ಸಂಸ್ಥಾನದ ಎಕ್ರಾನ್ ಎಂಬ ಪಟ್ಟಣದ ಸಮೀಪದಲ್ಲಿ, ಇರುವುದು. ಮೇಲಣ ಮಟ್ಟದ ಕಾಲುವೆಯ ಕೊನೆಗೆ ದೋಣಿಯು ಬಂದು ಕೆಳಗಣ ಮಟ್ಟದ ಕಾಲುವೆಗೆ ಇಳಿಯಬೇಕಾದಾಗ ಮೊದಲ ಕೊಳದ ನೀರಿನ ಮಟ್ಟವನ್ನು, ಅವಶ್ಯಕವಾಗಿದ್ದಲ್ಲಿ ಎತ್ತರಿಸಿ, ದೋಣಿಯನ್ನು ಒಳಗೆ ಸಾಗಿಸಿ ನೀರಿನ ಮಟ್ಟವನ್ನು ತಕ್ಕಷ್ಟು ತಗ್ಗಿಸಿ ಮತ್ತೊಂದು ಕೊಳಕ್ಕೆ ತಂದು, ಕೊನೆಗೆ ಕೊನೆಯ ಕೊಳದಿಂದ ಕೆಳಗಣ ಕಾಲುವೆಗೆ ಬಿಡುತ್ತಾರೆ. ಕೆಳಗಿನ ಮಟ್ಟದ ಕಾಲುವೆಯ ಕೊನೆಗೆ ದೋಣಿಯು ಬಂದು ಮೇಲಣ ಮಟ್ಟದ ಕಾಲುವೆಗೆ ಹೋಗಬೇಕಾದಾಗ ಕೊನೆಯ ಕೊಳದೊಳಗೆ ದೋಣಿಯನ್ನು ಸಾಗಿಸಿ ಅದರ ನೀರಿನ ಮಟ್ಟವನ್ನೆತ್ತರಿಸಿ, ಅಲ್ಲಿಂದ ಮೇಲಣ ಕೊಳಕ್ಕೆ ಹತ್ತಿಸಿ ಅವಶ್ಯಕವಿದ್ದಲ್ಲಿ ಅಲ್ಲಿಯು ನೀರಿನ ಮಟ್ಟವನ್ನೆತ್ತರಿಸಿ ಕೊನೆಗೆ ಮೇಲಣ ಕೊಳದಿಂದ

ಮೇಲಣ ಕಾಲುವೆಗೆ ದೋಣಿಯನ್ನು ಬಿಡುತ್ತಾರೆ. ಈ ಬಗೆಯ ಕೊಳಕ್ಕೆ ಲಾಕ್ (Lock) ಎಂಬ ಹೆಸರಿರುತ್ತದೆ.

ದೋಣಿಗಳು ಒಂದೇ ಹೊತ್ತಿನಲ್ಲಿ ಎರಡು ಕಡೆಯಿಂದಲೂ ಒಂದು ಲಾಕಿನ ಸಮೀಪಕ್ಕೆ ಬಂದರೆ, ಒಂದಾದ ಮೇಲೆ ಮತ್ತೊಂದು ದೋಣಿಯು ಈ ಲಾಕಿನಿಂದ ಹೊರಡಬೇಕೆಂಬ ಕಟ್ಟಳೆ ಇರುವುದು. ಮೊದಲು ಬಂದವರು ಮೊದಲು ಹೋಗುವಂತೆ ಎರಡು ದೋಣಿಯವರೂ ಒಪ್ಪಿಕೊಂಡರೆ ಜಗಳವಾಗುತ್ತಿರಲಿಲ್ಲ; ಇಲ್ಲವಾದರೆ, ಉಭಯ ಕಕ್ಷಿಯವರಿಗೂ ಗುದ್ದಾಟವಾಗಿ ಗೆದ್ದವರು ಮೊದಲು ಲಾಕನ್ನು ಉಪಯೋಗಿಸುತ್ತಿದ್ದರು. ಇಂತಹ ಜಗಳಗಳಲ್ಲಿ ದೋಣಿಯ ಒರಟು ಜನರು ಬಹಳ ಉತ್ಸಾಹದಿಂದಿರುತ್ತಿದ್ದರು. ಜೇಮ್ಸ್ ಕೆಲಸಕ್ಕೆ ಸೇರಿದ ಕೆಲವು ಕಾಲದ ಮೇಲೆ ಒಂದು ದಿನ ರಾತ್ರಿ ಜೇಮ್ಸ್‌ನ ದೋಣಿಯೂ ಇನ್ನೊಬ್ಬನ ದೋಣಿಯೂ ಹೆಚ್ಚುಕಡಿಮೆ ಏಕ ಕಾಲದಲ್ಲಿ ಒಂದು ಲಾಕಿನ ಬಳಿಗೆ ಬಂದುವು. ಮೊದಲು ಬಂದವರಾರೆಂಬುದನ್ನು ನಿರ್ಧರಿಸುವುದು ಕಷ್ಟವಾಯಿತು. ಎರಡು ದೋಣಿಗಳ ಜನರಿಗೂ ಜಗಳವಾಗುವ ಸಂಭವ ವೊದಗಿತು. ಆ ಸಮಯದಲ್ಲಿ ಜೇಮ್ಸ್ ಲೆಚರನನ್ನು ನೋಡಿ, "ಈ ಲಾಕಿಗೆ ಮೊದಲನೆಯ ಹಕ್ಕು ನಮ್ಮದಾಗಿದೆಯೊ?" ಎಂದು ಕೇಳಿದನು.

ಲೆಚರು.—ನ್ಯಾಯವಾಗಿ ನೋಡಿದರೆ ನಮ್ಮದಾಗಿಲ್ಲ; ಹೊಡೆದಾಡಿ ನಮ್ಮದನ್ನಾಗಿ ಮಾಡಿಕೊಳ್ಳಬೇಕು; ಅದೇ ನಮ್ಮ ಪೌರುಷ.

ಜೇಮ್ಸ್.—ನ್ಯಾಯವು ನಮ್ಮ ಕಡೆ ಇಲ್ಲದಾಗ ನಾವು ಜಗಳವಾಡಬಾರದು.

ಲೆಚರು.—ಅದೇಕೆ?

ಜೇಮ್ಸ್.—ಲಾಕು ನಮ್ಮದಾಗಿಲ್ಲವೆಂದು ನೀನೇ ಹೇಳಿದೆಯಲ್ಲವೆ? ಏತಕ್ಕೆ ಜಗಳವಾಡಬೇಕು?

ಲೆಚರನು ಸ್ವಲ್ಪ ಹೊತ್ತು ಪರ್ಯಾಲೋಚಿಸಿ, "ಹಾಗೆಯೇ ಆಗಲಿ" ಎಂದು ಹೇಳಿ, ಜಗಳವಾಡದಂತೆ ತನ್ನವರನ್ನು ತಡೆದು, ಎದುರು

ಕಕ್ಷಿಯ ದೋಣಿಯು ಹೊರಟಮೇಲೆ ತನ್ನ ದೋಣಿಯನ್ನು ಹೊರಡಿಸಿದನು. ಆ ರಾತ್ರಿಯೆಲ್ಲ ಅವರು ಪ್ರಯಾಣ ಮಾಡಿದರು. ಮರು ದಿನ ಭೋಜನದ ಕಾಲದಲ್ಲಿ ದೋಣಿಯವರಲ್ಲೊಬ್ಬನಾದ ಲೀ ಎಂಬವನು ಜೇಮ್ಸನನ್ನು ಬಿರ ಬಿರನೆ ನೋಡಿ, "ನಿನಗೇನು ರೋಗ?" ಎಂದು ಕೇಳಿದನು.

ಜೇಮ್ಸ್.—ರೋಗವೇನೂ ಇಲ್ಲ; ಆರೋಗ್ಯವಾಗಿದ್ದೇನೆ.

ಲೀ.—ನಿನ್ನೆಯ ರಾತ್ರಿ ಅದೇಕೆ ಎದುರು ಕಕ್ಷಿಯ ದೋಣಿಗೆ ಅವಕಾಶ ಕೊಟ್ಟೆ?

ಜೇಮ್ಸ್.—ಆ ಲಾಕಿಗೆ ನಾವು ಹಕ್ಕುದಾರರಾಗಿರಲಿಲ್ಲ.

ಲೀ.—(ಶಪಿಸುತ್ತ) ನೀನು ಮೃಗಳ್ಳ, ಹೇಡಿ, ದೋಣಿಯ ಕೆಲಸಕ್ಕೆ ಯೋಗ್ಯನಲ್ಲ. ಮರ ಕಡಿಯುವುದರಲ್ಲಿಯೂ, ಹಾಲು ಕರೆಯುವುದರಲ್ಲಿಯೂ ನೀನು ನಿಪುಣನಾಗಿರಬಹುದು. ಸಮಯ ಬಂದಾಗ ಗೌರವಕ್ಕಾಗಿ ಹೊಡೆದಾಡಲು ಹೆದರುವವನು, ಹುಡುಗನಾಗಲಿ ದೊಡ್ಡವನಾಗಲಿ, ದೋಣಿಯ ಕೆಲಸಕ್ಕೆ ಯೋಗ್ಯನಲ್ಲ.

ಜೇಮ್ಸ್ ನಗುತ್ತ ಯಾವ ಉತ್ತರವನ್ನೂ ಕೊಡದೆ ಸುಮ್ಮನೆ ಊಟಮಾಡಿದನು. ಲೆಚರನು ಜೇಮ್ಸನ ಸೌಜನ್ಯವನ್ನೂ ಧೈರ್ಯವನ್ನೂ ಸಹನೆಯನ್ನೂ ನೋಡಿ ಬಹಳ ಸಂತೋಷಪಟ್ಟನು.

ಓಹಿಯೋ ನದಿಯ ದಡದಲ್ಲಿರುವ ಬೀವರ್ ಪಟ್ಟಣಕ್ಕೆ ಲೆಚರಿನ ದೋಣಿಯು ಸರಕಿನೊಡನೆ ಬಂದಿತು. ಹೊಗೆಯ ಜಹಜೊಂದು ಆ ದೋಣಿಯನ್ನು ಎಳೆದುಕೊಂಡು ಹೋಗುವುದಕ್ಕೆ ಕಾದಿದ್ದಿತು. ದೋಣಿಯನ್ನು ಜಹಜಿಗೆ ಬಿಗಿದುಕಟ್ಟುವುದಕ್ಕಾಗಿ ಜಹಜಿನವರು ಒಂದು ಹಗ್ಗವನ್ನೆಸೆಯಲು ಆ ಹಗ್ಗವು ಜೇಮ್ಸನ ಹೆಗಲಿನ ಮೇಲೆ ಹಾದು ಆಕಸ್ಮಿಕವಾಗಿ ಮರ್ಫಿ ಎಂಬವನ ತಲೆಗೆ ತಗುಲಿ ಅವನ ಟೋಪಿಯು ನದಿಯೊಳಗೆ ಬಿದ್ದಿತು. ಒಡನೆಯೇ ಜೇಮ್ಸ್, "ಕಾಣದೆ ನಡೆದ ಕೆಲಸ, ಕೋಪ ಮಾಡಿಕೊಳ್ಳಬೇಡ, ಕ್ಷಮಿಸು" ಎಂದು ಹೇಳಿದನು. ಮರ್ಫಿಯು ರೇಗಿಕೊಂಡು, "ಕಾಣದೆ ಆದ ಕೆಲಸವೊ? ನಿನಗೆ ತಕ್ಕ ಪ್ರಾಯಶ್ಚಿತ್ತ

ವನ್ನು ಮಾಡುತ್ತೇನೆ'' ಎಂದು ಬೈಯುತ್ತ ಜೇಮ್ಸ್‌ನನ್ನು ಹೊಡೆಯಲು ನುಗ್ಗಿದನು. ಅಷ್ಟರೊಳಗೆ ಜೇಮ್ಸ್ ಫಟ್ಟನೆ ಒಂದು ಪಕ್ಕಕ್ಕೆ ಸರಿದು ನಿಂತು ಮರ್ಫಿಯನ್ನು ಮುಷ್ಟಿಯಿಂದ ಗುದ್ದಲು, ಆ ಏಟಿನಿಂದ ಮರ್ಫಿಯು ದೋಣಿಯ ತಳದಲ್ಲಿ ತುಂಬಿದ್ದ ತಾಪ್ಪುದ ಅದುರಿನ ಮೇಲೆ ಬೋರಲಾಗಿ ಬಿದ್ದನು. ಒಡನೆಯೇ ಜೇಮ್ಸ್ ಅವನ ಮೇಲಕ್ಕೆ ಚಂಗನೆ ನೆಗೆದು ಅವನು ಅಳ್ಳಾಡದಂತೆ ಪಟ್ಟಿನಿಂದ ಹಿಡಿದನು. ಲೆಚರನು ಇದನ್ನು ನೋಡಿ, ''ಜಿಮ್ಮಿ! ಹೇಳಿದುದನ್ನು ಲಕ್ಷ್ಯ ಮಾಡದೆ ನಿನ್ನ ಮೇಲೆ ಬಿದ್ದ ಆ ನೀಚನಿಗೆ ಒಳ್ಳೆಯ ಪ್ರಾಯಶ್ಚಿತ್ತವನ್ನು ಮಾಡು'' ಎಂದನು. ''ಕೆಳಗೆ ಬಿದ್ದವನ ಮೇಲೆ ಕೈ ಮಾಡುವುದು ಧರ್ಮವಲ್ಲ'' ಎನ್ನುತ್ತ ಜೇಮ್ಸ್ ಮರ್ಫಿಯನ್ನು ನೋಡಿ, ''ಸಾಕೊ? ಇನ್ನೂ ಬೇಕೊ?'' ಎಂದು ಮುಗುಳು ನಗೆಯೊಡನೆ ಕೇಳಿದನು. ''ಸಾಕು, ಮನ್ನಿಸು'' ಎಂದು ಮರ್ಫಿಯು ಹೇಳಲು, ಜೇಮ್ಸ್ ಮೇಲಕ್ಕೆದ್ದನು. ಮರ್ಫಿಯು ಮೇಲಕ್ಕೆದ್ದೊಡನೆಯೇ ಜೇಮ್ಸ್‌ಗೆ ಕೈಯನ್ನು ನೀಡಿ, ''ಇನ್ನು ನಾವು ಸ್ನೇಹಿತರಾಗಿರೋಣ!'' ಎಂದನು. ಅಂದಿನಿಂದ ಅವರಿಬ್ಬರೂ ಪರಮ ಮಿತ್ರರಾದರು.

ಆ ದೋಣಿಯ ನೌಕರರಲ್ಲಿ ಹ್ಯಾರಿ ಎಂಬವನೊಬ್ಬನಿದ್ದನು. ಅವನಿಗೆ ಜೇಮ್ಸ್‌ನಲ್ಲಿ ಬಹು ಗೌರವವಿದ್ದಿತು. ಜೇಮ್ಸ್ ಸಮಯ ದೊರೆತಾಗೆಲ್ಲ ಮದ್ಯವನ್ನೂ ಹೊಗೆಯ ಸೊಪ್ಪನ್ನೂ ಬೈಗುಳನ್ನೂ ಬಿಡೆಂದು ಅವನಿಗೆ ಬುದ್ಧಿಯನ್ನು ಹೇಳಿ, ಅವನನ್ನು ಒಳ್ಳೆಯ ದಾರಿಗೆ ತರುತ್ತಿದ್ದನು. ಒಂದು ದಿವಸ ಅವರಿಬ್ಬರಿಗೂ ಮುಂದೆ ಹೇಳುವ ಸಂವಾದವು ನಡೆಯಿತು:—

ಹ್ಯಾರಿ.—ಜಿಮ್ಮಿ! ನೋಡು, ನಿನ್ನಂತಾಗಬೇಕೆಂದು ಎಷ್ಟು ಪ್ರಯತ್ನ ಪಟ್ಟರೂ ನನಗೆ ಸಾಗುವುದಿಲ್ಲ.

ಜೇಮ್ಸ್.—ಅದೆಲ್ಲ ಸುಳ್ಳು; ಮನಸ್ಸು ಮಾಡಿದರೆ ಯಾವುದು ತಾನೆ ಆಗದಿರುವುದು? ಮದ್ಯವನ್ನೂ ಹೊಗೆಯ ಸೊಪ್ಪನ್ನೂ ತೊರೆದು ಬಿಡು; ಮರ್ಫಿಯ ಟೋಪಿಯು ಹೋದಂತೆ ಅವೂ ಹೋಗಲಿ.

ಹ್ಯಾರಿ.—ನನಗಿರುವ ಸುಖವನ್ನೇ ಬಿಟ್ಟುಬಿಡೆಂದು ಹೇಳುವೆಯಾ?

ಜೇಮ್ಸ್.—ಅಹುದು, ಹೇಳುತ್ತೇನೆ. ಅವುಗಳೊಡನೆಯೇ ಅವಾಚ್ಯಗಳೆಲ್ಲವೂ ತೊಲಗುವುವು. ಅವುಗಳಿಂದೇನು ಲಾಭ?

ಹ್ಯಾರಿ.—ಲಾಭವೂ ಇಲ್ಲ, ಏನೂ ಇಲ್ಲ.

ಜೇಮ್ಸ್.—ಹಾಗಾದರೆ ಅವನ್ನೇಕೆ ಇಟ್ಟುಕೊಂಡಿರುವೆ?

ಹ್ಯಾರಿ.—ಒಳ್ಳೆಯುದಕ್ಕೂ ಅಲ್ಲ, ಕೆಟ್ಟುದಕ್ಕೂ ಅಲ್ಲ, ಅಭ್ಯಾಸ.

ಜೇಮ್ಸ್.—ಹಾಗಾದರೆ ನೀನು ಒಂದು ಪಶುವೇ ಸರಿ.

ಹ್ಯಾರಿಗೆ ಸ್ವಲ್ಪವೂ ಕೋಪ ಬರಲಿಲ್ಲ; ತನ್ನ ಅವಿವೇಕಕ್ಕಾಗಿ ತಾನೇ ನಗಲಾರಂಭಿಸಿದನು. ಅವನು ಒಂದು ದಿನ ಮರ್ಫಿಯೊಡನೆ, ''ಜಿಮ್ಮಿಯು ಬಹಳ ದೊಡ್ಡ ಮನುಷ್ಯ; ನಮ್ಮ ಹಿತ ಚಿಂತನೆಯಿಂದಲೇ ಹಾಗೆ ಮಾತನಾಡುವನು. ಅವನಾಡುವುದೆಲ್ಲ ನಿಜ. ರತ್ನದಂತಹ ಹುಡುಗ; ಮದ್ಯವನ್ನು ಕುಡಿಯುವುದಿಲ್ಲ, ಚುಟ್ಟವನ್ನು ಸೇದುವುದಿಲ್ಲ, ಹೊಗೆಯ ಸೊಪ್ಪನ್ನು ಹಾಕುವುದಿಲ್ಲ, ಅವಾಚ್ಯಗಳನ್ನು ಆಡುವುದಿಲ್ಲ, ಜಗಳಕ್ಕೆ ಹೋಗುವುದಿಲ್ಲ, ಕಥೆಗಳನ್ನು ಹೇಳುವುದರಲ್ಲಿ ನಿಪುಣ; ಈ ಎರಡು ಮೂರು ದೋಣಿಗಳಲ್ಲಿಯ ಜನರ ಒಟ್ಟು ಜ್ಞಾನಕ್ಕಿಂತ ಹೆಚ್ಚಾದ ಜ್ಞಾನವು ಅವನ ಚಿಕ್ಕ ತಲೆಯಲ್ಲಿ ಅಡಕವಾಗಿದೆ'' ಎಂದು ಹೇಳಿದನು. ಲೆಚರಿನ ದೋಣಿಯವನೊಬ್ಬನು ಮತ್ತೊಂದು ದೋಣಿಯವನನ್ನು ಕುರಿತು, ''ಅಯ್ಯಾ! ನಮ್ಮ ದೋಣಿಯ ಕೆಲಸದಲ್ಲಿ ಒಬ್ಬ ಧೀರನಿದ್ದಾನೆ; ಅವನಿಗೆ ಸಮನಾದವನನ್ನು ನೀನೆಲ್ಲಿಯೂ ಕಾಣೆ; ಸಿಂಹದಂತೆ ಬಲಶಾಲಿ; ನಮ್ಮಲ್ಲಿ ಯಾರನ್ನಾದರೂ ಉರುಳಿಸಬಲ್ಲನು; ಅವನಂತೆ ಕೆಲಸ ಮಾಡುವುದಕ್ಕೆ ಯಾರಿಂದಲೂ ಆಗದು; ಅಂತಹ ಹುಡುಗನನ್ನು ನಾನೆಲ್ಲಿಯೂ ನೋಡಿಲ್ಲ'' ಎಂದು ಜೇಮ್ಸನನ್ನು ಹೊಗಳಿದನು.

ದೋಣಿಯ ಕೆಲಸದಲ್ಲಿದ್ದಾಗ ಜೇಮ್ಸಿಗೆ ಓದಲು ಯಾವ ಪುಸ್ತಕವೂ ಸಿಕ್ಕಲಿಲ್ಲ. ಆಗಾಗ ಲೆಚರನು ಬೆಲೆಗೆ ತೆಗೆದುಕೊಳ್ಳುತ್ತಿದ್ದ ವರ್ತಮಾನ ಪತ್ರಿಕೆಗಳನ್ನು ಜೇಮ್ಸ್ ಮೊದಲಿಂದ ಕೊನೆಯ ವರೆಗೂ ಓದುತ್ತಿದ್ದನು; ತನ್ನ ಸುತ್ತಲೂ ಇರುವ ಜನರನ್ನೂ ವಿದ್ಯಮಾನ

ಗಳನ್ನೂ ಜೇಮ್ಸ್ ಪರೀಕ್ಷಿಸಿ ತಿಳಿಯುತ್ತ ಲೆಚರಿಗೆ ನೂರಾರು ಪ್ರಶ್ನೆಗಳನ್ನು ಹಾಕಿ ಪ್ರಾಪಂಚಿಕ ಜ್ಞಾನವನ್ನು ವೃದ್ಧಿಪಡಿಸಿಕೊಳ್ಳುತ್ತಿದ್ದನು.

ಜೇಮ್ಸಿಗೂ ನೀರಿಗೂ ಸಂಬಂಧವಿದ್ದಿರಬಹುದು: ಅವನು ದೋಣಿಯ ಕೆಲಸದಲ್ಲಿದ್ದ ಎರಡು ಮೂರು ತಿಂಗಳೊಳಗೆ ಹದಿನಾಲ್ಕು ಸಾರಿ ನೀರಿಗೆ ಬಿದ್ದನು. ಇದು ಅವನ ಅಜಾಗರೂಕತೆಯಿಂದಾದುದಲ್ಲ; ಶ್ರದ್ಧಾ ಭಕ್ತಿಗಳೊಡನೆ ಕೆಲಸ ಮಾಡುವ ಸಂಭ್ರಮದಲ್ಲಿ ತನಗೆ ಅಪಾಯ ಪೊದಗಬಹುದೆಂಬ ವಿಷಯವನ್ನು ಮರೆಯುತ್ತಿದ್ದನು.

ಕಡೆಯ ಸಾರಿ ಮುಳುಗಿದಾಗ ಅವನ ಪ್ರಾಣವೇ ಹೋಗುವಂತಿದ್ದಿತು. ಒಂದು ದಿನ ರಾತ್ರಿ ಮಳೆ ಸುರಿಯುತ್ತಿದ್ದಾಗ ಲೆಚರನು ಜೇಮ್ಸನ್ನು ಗಾಢ ನಿದ್ರೆಯಿಂದೆಬ್ಬಿಸಿ ದೋಣಿಯನ್ನು ನಡೆಯಿಸಲು ನಿಯಮಿಸಿದನು. ಜೇಮ್ಸ್ ನಿದ್ದೆಗಣ್ಣಿನಿಂದ ದೋಣಿಯ ತುದಿಯಲ್ಲಿ ನಿಂತು ದೋಣಿಯನ್ನು ನೆಟ್ಟಗೆ ನಿಲ್ಲುವಂತೆ ಮಾಡುವುದಕ್ಕಾಗಿ ಒಂದು ಹಗ್ಗವನ್ನು ಎಳೆದನು. ಅದು ಬರಲಿಲ್ಲ; ಬಲವಾಗಿ ಝಾಡಿಸಿ ಎಳೆಯಲು, ಅದು ಥಟ್ಟನೆ ಬಂದಿತು. ಆಗ ನೀರಿನ ಕಡೆಗೆ ಹುಯ್ಲು ಬರಲು, ಅವನು ನೀರಿನೊಳಗೆ ದೊಪ್ಪನೆ ಬಿದ್ದನು; ಆಗ ಮಧ್ಯರಾತ್ರಿ; ಅವನು ನೀರಿನಲ್ಲಿ ಬಿದ್ದ ಸಂಗತಿ ಯಾರಿಗೂ ತಿಳಿಯಲಿಲ್ಲ. ದೋಣಿಯು ಮುಂದು ಮುಂದಕ್ಕೆ ಹೋಗುತ್ತಿದ್ದಿತು. ದಿಕ್ಕು ತೋರದೆ ಅವನು ನೀರಿನೊಳಗೆ ಕೈ ಕಾಲುಗಳನ್ನು ಬಡಿಯುತ್ತಿರುವಾಗ ದೈವ ವಶದಿಂದ ಅವನ ಕೈಗೆ ಒಂದು ಹಗ್ಗವು ಸಿಕ್ಕಲು, ಅದನ್ನು ಹಿಡಿದುಕೊಂಡು ಸರ ಸರನೆ ಹತ್ತಿ ದೋಣಿಯನ್ನು ಸೇರಿದನು. ತೊಯ್ದ ಬಟ್ಟೆಗಳಲ್ಲಿ ಗಡ ಗಡನೆ ನಡುಗುತ್ತ ನಿಂತುಕೊಂಡು ಜೇಮ್ಸ್, "ಈಗ ನಾನು ಸಾಯದೆ ಬದುಕಿದುದು ಹೇಗೆ? ಇದು ದೇವರ ದಯೆಯೇ ಅಲ್ಲವೆ! ಬದುಕುವುದು ಸಾಧ್ಯವೆಂದು ನನಗೆ ತೋರಿರಲಿಲ್ಲ. ಹಗ್ಗವು ಎಲ್ಲಿಯೋ ಸಿಕ್ಕಿಕೊಂಡಿದ್ದ ಕಾರಣ ಹಠಾತ್ತಾಗಿ ಅದು ಕೈಗೆ ಸಿಕ್ಕಲು, ನಾನು ಉಳಿದೆನು. ಇದೀಗ ಪರಮಾಶ್ಚರ್ಯ! ದೇವರ ದೃಷ್ಟಿಯಲ್ಲಿ ನನ್ನ ಜೀವವೂ ಗಣ್ಯವಾಗಿದ್ದಿತಲ್ಲವೆ? ದೇವರು ಕಾಪಾಡಿದ ಜೀವವನ್ನು ಸಮುದ್ರದ ಮೇಲೆ ಅಲೆ

ದಲೆದು ವ್ಯರ್ಥಮಾಡಬಾರದು. ನಾನು ವಿವೇಕಶೂನ್ಯನು. ನಾವಿಕ
ನಾಗಬೇಕೆಂಬ ಹುಚ್ಚು ಇಂದಿಗೆ ಕೊನೆಗಾಣಲಿ. ನಾನು ವಿದ್ಯಾವಂತ
ನಾಗಿ ಖ್ಯಾತಿ ಪಡೆಯಬೇಕು'' ಎಂದುಕೊಂಡನು.

ಹೀಗೆ ಆಲೋಚಿಸಿ ತಾನು ಪ್ರಯತ್ನಪೂರ್ವಕವಾಗಿ ಎಸೆದರೆ
ಮೊದಲಿನಂತೆ ಸಿಕ್ಕಿಕೊಳ್ಳುವುದೊ ಇಲ್ಲವೊ ಪರೀಕ್ಷಿಸಬೇಕೆಂದು
ಎಷ್ಟೋ ಬಾರಿ ಹಗ್ಗವನ್ನು ಎಸೆದನು. ಏನೇನು ಮಾಡಿದರೂ ಹಗ್ಗವು
ಆ ರೀತಿಯಲ್ಲಿ ದೋಣಿಯ ಸಂದಿಯಲ್ಲಿ ಸಿಕ್ಕಿಕೊಳ್ಳಲಿಲ್ಲ. ತಾನು ಬದುಕಿ
ದುದು ದೇವರ ದಯೆಯಿಂದಲೇ ಎಂದು ಅವನ ಮನಸ್ಸಿಗೆ ನಂಬಿಕೆ
ಯುಂಟಾಯಿತು. ಆಗ ಅವನ ಮನೋಭಾವವೇ ಬದಲಾಯಿಸಿತು. ಅವನ
ಆಲೋಚನೆಗಳು ಮನೆಯ ಕಡೆಗೆ ತಿರುಗಿದುವು. ತಾಯಿಯ ಆಶೀರ್ವಾದ
ದಿಂದಲೇ ಅಲ್ಲವೆ ನಾನು ಬದುಕಿದುದು? ಎಂದು ಭಾವಿಸಿ ತಾಯಿಯ
ಪ್ರೀತಿಯನ್ನೂ ವಿವೇಕವನ್ನೂ ಬುದ್ಧಿವಾದವನ್ನೂ ಮನಸ್ಸಿಗೆ ತಂದು
ಕೊಂಡು, ತಾಯಿಯ ಮಾತನ್ನು ಇನ್ನು ಮೀರುವುದಿಲ್ಲವೆಂದು ಶಪಥ
ಮಾಡಿ, ದೋಣಿಯ ಕೆಲಸವನ್ನು ಕೂಡಲೆ ಬಿಡಬೇಕೆಂದು ನಿಶ್ಚಯಿ
ಸಿದನು.

ಇದು ನಡೆದ ಒಂದೆರಡು ವಾರಗಳಲ್ಲಿ ಜೇಮ್ಸ್‌ನಿಗೆ ಚಳಿಯ ಜ್ವರವು
ಬಂದು ದೋಣಿಯ ಕೆಲಸ ಮಾಡುವುದು ಕಷ್ಟವಾಯಿತು. ಕೆಲಸ
ವನ್ನು ಬಿಟ್ಟು ಮನೆಗೆ ಹೊರಡಲು ಅದೇ ತಕ್ಕ ಸಮಯವೆಂದು ಆಲೋ
ಚಿಸಿ ಮುಖ್ಯಾಧಿಕಾರಿಯಾದ ಲೆಚರಿನ ಸಮೀಪಕ್ಕೆ ಬಂದು, ''ನಾನು
ಊರಿಗೆ ಹೋಗಬೇಕೆಂದಿದ್ದೇನೆ'' ಎಂದು ಹೇಳಿದನು.

ಲೆಚರು.—ಇದು ಒಳ್ಳೆಯ ಆಲೋಚನೆ. ನಿನ್ನ ದೇಹಸ್ಥಿತಿ ಸರಿಯಾಗಿಲ್ಲ;
ನೀನು ಮನೆಗೆ ಹೋಗುವುದೇ ಉತ್ತಮ. ನಿನ್ನನ್ನಗಲಿರುವುದು
ನನಗೂ ನಮ್ಮವರಿಗೂ ದುಃಖವನ್ನುಂಟುಮಾಡುವುದು; ಆದರೂ
ನೀನು ಹೊರಡು.

ಜೇಮ್ಸ್.—ನಿನ್ನ ಬಳಿಯ ಕೆಲಸವನ್ನು ಬಿಡುವುದು ನನಗೂ ಇಷ್ಟ
ವಿಲ್ಲ; ಇಲ್ಲಿ ನಾನು ಬಹಳ ಸಂತೋಷದಿಂದಿದ್ದೆನು. ನಿನ್ನ

ಬುದ್ಧಿವಾದದಂತೆ ನಾನು ವಿದ್ಯೆಯನ್ನು ಕಲಿಯಬೇಕೆಂದು ಸಂಕಲ್ಪಿಸಿದ್ದೇನೆ.

ಲೆಚರು.—ಅದೇ ಅತ್ಯುತ್ತಮವಾದ ಕೆಲಸ. ಆರೋಗ್ಯವಂತನಾದೊಡನೆಯೇ ವಿದ್ಯೆಯನ್ನು ಕಲಿಯಲು ಪ್ರಯತ್ನಪಡು; ಒಂದು ದಿನವೂ ನಾವಕಾಶ ಮಾಡಬೇಡ.

ಜೇಮ್ಸ್ನು ತನ್ನ ಸಂಬಳವನ್ನು ತೆಗೆದುಕೊಂಡು ಮನೆಗೆ ಹೊರಟನು. ಶಕ್ತಿಯಿಲ್ಲದೆ ಮೆಲ್ಲಗೆ ನಡೆಯುತ್ತ, "ಎರಡು ಮೂರು ತಿಂಗಳಿಂದಲೂ ನಾನು ನನ್ನ ತಾಯಿಗೆ ಕಾಗದವನ್ನು ಬರೆಯಲಿಲ್ಲ; ಅದು ತಪ್ಪು. ನಾನು ಈರೀ ಸರೋವರದಲ್ಲಿರುವೆನೆಂದು ಆಕೆಯು ಭಾವಿಸಿರುವಳು; ನಾನು ಇಲ್ಲಿಲ್ಲಿಯೇ ಅಲೆಯುತ್ತಿದ್ದೇನೆ. ಒಂದು ಕಾಗದವನ್ನು ಬರೆದಿದ್ದರೆ ಚೆನ್ನಾಗಿರುತ್ತಿದ್ದಿತು" ಎಂದುಕೊಂಡು ರಾತ್ರಿ ಹನ್ನೊಂದು ಗಂಟೆಯ ಹೊತ್ತಿಗೆ ಮನೆಗೆ ಬಂದನು.

ದೂರದಲ್ಲಿಯೇ ಮನೆಯ ಬೆಳಕು ಕಾಣಿಸಲು, ಜೇಮ್ಸಿನ ಎದೆಯು ಡವಗುಟ್ಟಲಾರಂಭಿಸಿತು. ಮನೆಯ ಬಳಿಗೆ ಬಂದು ಮನೆಯೊಳಗೆ ಹೋಗದೆ ಕಿಟಕಿಯ ಬಳಿಯಲ್ಲಿ ನಿಂತು ಒಳಗೆ ನೋಡಿದನು. ತಾಯಿಯು ಚಿಕ್ಕಮನೆಯ ಒಂದು ಮೂಲೆಯಲ್ಲಿ ಮೊಣಕಾಲೂರಿ ಕುಳಿತಿದ್ದಳು. ಎದುರಿಗೆ ಕಾಲುಮಣೆಯ ಮೇಲೆ ಬೈಬಲ್ಲು ಪುಸ್ತಕವಿದ್ದಿತು. ಆಕೆಯು ದೇವರ ಧ್ಯಾನದಲ್ಲಿರುವಂತೆ ಕಾಣಬಂದಿತು. ಸ್ವಲ್ಪ ಹೊತ್ತಿನ ಮೇಲೆ ಆಕೆಯ ಪ್ರಾರ್ಥನಾ ವಚನಗಳು ಕೇಳಬಂದುವು: "ದೇವರೇ! ನಮ್ಮ ಕಡೆ ನಿನ್ನ ಕಟಾಕ್ಷವೀಕ್ಷಣವಿರಲಿ! ನಿನ್ನ ದಾಸಿಗೆ ಮನೋದಾರ್ಢ್ಯವನ್ನೂ ನಿನ್ನಡಿದಾವರೆಯಲ್ಲಿ ನಿರಂತರವಾದ ಭಕ್ತಿಯನ್ನೂ ಕರುಣಿಸು. ನಿನ್ನ ದಾಸಿಯಾದ ನನ್ನನ್ನೂ ನನ್ನ ಪುತ್ರನನ್ನೂ ಉದ್ಧಾರ ಮಾಡು. ನಮಗೆ ನೀನೇ ಗತಿ" ಎಂಬ ಮಾತುಗಳು ಕೇಳಬಂದುವು. ಜೇಮ್ಸ್ನಿಗೆ ಇನ್ನು ತಡೆಯುವುದಕ್ಕಾಗಲಿಲ್ಲ; ಮನೆಯೊಳಗೆ ಪ್ರವೇಶಮಾಡಿದನು. ತಾಯಿಯೂ ಮಗನೂ ಒಬ್ಬರನ್ನೊಬ್ಬರು ಅಪ್ಪಿಕೊಂಡರು. ಇಬ್ಬರ ಕಣ್ಣುಗಳಿಂದಲೂ ಆನಂದ ಬಾಷ್ಪಗಳು ಸುರಿದುವು.

# ಅಧ್ಯಾಯ ೧೩

## ಸಂಕಲ್ಪ ನಿರ್ಣಯ

ಜೇಮ್ಸ್ ತಾಯಿಯೊಡನೆ ತನ್ನ ವೃತ್ತಾಂತವನ್ನೆಲ್ಲ ಹೇಳಲು ಆಕೆಯು, "ದೇವರು ಇದುವರೆಗೂ ನನ್ನ ಪ್ರಾರ್ಥನೆಗಳನ್ನು ಲಾಲಿಸಿ ನಿನ್ನನ್ನು ಪಾಲಿಸುತ್ತ ಬಂದಿರುವನು, ನಿನ್ನನ್ನು ಕ್ಷೇಮದಿಂದ ಮನೆಗೆ ಕರೆತಂದಿರುವನು" ಎಂದು ಹೇಳಿದಳು. "ಆ ರಾತ್ರಿ ಕಗ್ಗತ್ತಲೆಯಲ್ಲಿ ನನ್ನನ್ನು ಉಳಿಸಿದವನು ದೇವರಲ್ಲದೆ ಮತ್ತಾರು?" ಎಂದು ಜೇಮ್ಸ್ ಹೇಳಲು, ಇದನ್ನು ಕೇಳಿ ತಾಯಿಯು ಸಂತೋಷದಿಂದ ಉಬ್ಬಿದಳು. ಮಗನಲ್ಲಿ ಈ ಬಗೆಯ ದೈವ ಭಕ್ತಿಯುಂಟಾದುದು ಆಕೆಗೆ ಪರಮಾನಂದ ವನ್ನುಂಟುಮಾಡಿತು. "ಈ ರಾತ್ರಿಗೆ ಈ ಕಥೆಯು ಸಾಕು. ನೀನು ದಣಿದು ಬಂದಿರುತ್ತೀಯೆ; ಜ್ವರವೂ ಬಂದಿದೆ; ಊಟಮಾಡಿ ಮಲಗು; ಮುಂದಿನ ಆಲೋಚನೆಗಳನ್ನು ನಾಳೆ ಮಾಡೋಣ" ಎಂದು ತಾಯಿ ಹೇಳಿದಳು.

ಮಾರನೆಯ ದಿವಸ ಜೇಮ್ಸ್‌ಗೆ ಜ್ವರವು ಕಡಿಮೆಯಾದರೂ, ಅದರ ಮಾರನೆಯ ದಿನ ಜ್ವರವು ಮತ್ತಷ್ಟು ಹೆಚ್ಚಾಗಿ ಬಂದಿತು. ಸಮೀಪದಲ್ಲಿ ಯಾರೂ ವೈದ್ಯರಿರಲಿಲ್ಲ. ಒಂದೆರಡು ದಿನ ತಾಯಿಯು ಅವಳಿಗೆ ತಿಳಿದ ಔಷಧವನ್ನು ಕೊಟ್ಟಳು; ಆದರಿಂದ ಸ್ವಲ್ಪವೂ ಗುಣವಾಗಲಿಲ್ಲ. ಆಮೇಲೆ ನೆರೆಯೂರಿನಿಂದ ಒಬ್ಬ ವೈದ್ಯನನ್ನು ಕರೆಯಿಸಿದಳು. ವೈದ್ಯನು ಕೊಟ್ಟ ಔಷಧಗಳಿಂದ ಒಂದೆರಡು ವಾರಗಳಲ್ಲಿ ಜ್ವರವು ನಿಂತಿತು. ಜೇಮ್ಸ್‌ಗೆ ಗುಣಮುಖವಾದುದನ್ನು ತಾಯಿಯು ನೋಡಿ, "ನೀನು ಮನೆಗೆ ಬಂದುದು ಎಷ್ಟು ಉತ್ತಮವಾಯಿತು! ಪರಸ್ಥಳದಲ್ಲಿ ರೋಗ ಪೀಡಿತನಾಗಿದ್ದರೆ ಎಷ್ಟು ತೊಂದರೆಯಾಗುತ್ತಿದ್ದಿತು!" ಎಂದು ಹೇಳಿದಳು.

ಜೇಮ್ಸ್.—ರೋಗವಿಲ್ಲದಿದ್ದರೆ ನಾನು ಇನ್ನೂ ಜಾಗ್ರುತೆಯಾಗಿ ಮನೆಗೆ ಬರುತ್ತಿದ್ದೆನು.

ಎಲಿಜೆ.—ಹಾಗಾದರೆ ದೋಣಿಯ ಕೆಲಸವು ರುಚಿಸಲಿಲ್ಲವೊ?

ಜೇಮ್ಸ್.—ಇಲ್ಲ, ಆ ಕೆಲಸವು ನನಗೆ ಸಾಕಾಯಿತು. ಮೇಲಾದ ಕೆಲಸಗಳನ್ನು ಮಾಡಲು ನನಗೆ ಸಾಧ್ಯವಿರುವಾಗ ಆ ಅಲ್ಪಕಾರ್ಯದಲ್ಲಿ ಬಿದ್ದಿರುವುದು ಹೆಡ್ಡತನವೆಂದೂ ವಿದ್ಯೆಯನ್ನು ಮೊದಲು ಸಂಪಾದಿಸಬೇಕೆಂದೂ ಲೆಚರನು ನನಗೆ ಬುದ್ಧಿವಾದ ಹೇಳಿದನು.

ಎಲಿಜೆ.—ನಾನು ಹೇಳುತ್ತ ಬಂದಿರುವುದೂ ಅದೇ ಅಲ್ಲವೆ?

ಜೇಮ್ಸ್.—ಆ ರಾತ್ರಿಯಲ್ಲಿ ನನ್ನನ್ನುಳಿಸಿದುದಕ್ಕೆ ಭಗವಂತನಿಗೆ ಏನೋ ಉದ್ದೇಶವಿರಲೇಬೇಕು. ನಾನು ದೈವೇಚ್ಛೆಯಂತೆಯೇ ನಡೆಯುವೆನು.

ಎಲಿಜೆ.—ಕಷ್ಟಕಾಲದಲ್ಲಿ ನಮ್ಮನ್ನು ಪಾರು ಮಾಡುವವನು ದೇವರೇ ಅಲ್ಲದೆ ಮತ್ತಾರೂ ಅಲ್ಲ. ನೀನು ನಾವಿಕನಾಗುವುದು ದೇವರ ಚಿತ್ತಕ್ಕೆ ಸರಿಬೀಳಲಿಲ್ಲ. ಆ ಕಾರಣದಿಂದಲೇ ಇರಬಹುದು, ಆ ಹಡಗಿನ ಯಜಮಾನನು ನಿನ್ನ ಮೇಲೆ ನಿಷ್ಕಾರಣವಾಗಿ ರೇಗಿದುದು.

ಜೇಮ್ಸ್.—ನಿಜ! ನಿಜ!

ಎಲಿಜೆ.—ದೇವರು ನನ್ನ ಪ್ರಾರ್ಥನೆಯನ್ನು ನಡೆಯಿಸುವುದಾದರೆ ನೀನು ವಿದ್ಯಾರ್ಜನೆ ಮಾಡಿ ಉಪಾಧ್ಯಾಯನಾಗಿಯೊ ಧರ್ಮೋಪದೇಶಕನಾಗಿಯೊ ಪ್ರಸಿದ್ಧಿಗೆ ಬರಬಹುದು; ಆಗ ನನ್ನ ಭಾಗ್ಯಕ್ಕೆ ಎಣೆಯೇ ಇಲ್ಲದಂತಾಗುವುದು.

ಜೇಮ್ಸ್.—ನಾನು ವಕೀಲನಾಗಕೂಡದೊ?

ಎಲಿಜೆ.—ಸಂಪನ್ನನಾಗಿರುವುದಾದರೆ ಆಗಬಹುದು. ನೀತಿ ಹೀನನಾದ ವಕೀಲನು ನಾವಿಕನಂತೆಯೇ ಕುತ್ಸಿತನಾಗಿರುವನು. ಭಕ್ತಿಯಿಂದ ದೇವರನ್ನು ಭಜಿಸಿ ಅವನನ್ನೇ ನಂಬಿ ಲೋಕಹಿತವಾದ ಕೆಲಸದಲ್ಲಿ ನಿರತನಾಗಿರುವ ಆಲೋಚನೆಯನ್ನು ಮಾಡು.

ಜೇಮ್ಸ್.—ಅದನ್ನೇ ನಾನೂ ಆಲೋಚಿಸುತ್ತಿದ್ದೇನೆ.

ಈ ವಿಚಾರವನ್ನು ತಾಯಿಯು ಮುಂದಕ್ಕೆ ಬೆಳೆಯಿಸಲಿಲ್ಲ. ಮಗನಲ್ಲಿ ದೇವರು ಕರುಣಿಸಿರುವನೆಂದೂ ಅವನನ್ನು ಮುಂದಕ್ಕೆ ತರುವ

ನೆಂದೂ ಆಕೆಯು ದೃಢವಾಗಿ ನಂಬಿದ್ದಳು. ಮೊದಲಿಗಿಂತಲೂ ಅತಿಶಯ ವಾಗಿ ಆಕೆಯು ದೇವತಾ ಪ್ರಾರ್ಥನೆಯನ್ನು ಮಾಡತೊಡಗಿದಳು.

ಚಳಿಗಾಲವು ಬಂದಿತು. ಜೇಮ್ಸ್‌ನಿಗೆ ಕೆಲಸ ಮಾಡುವುದಕ್ಕೆ ತಕ್ಕಷ್ಟು ಶಕ್ತಿಯು ಒಂದೆರಡು ವಾರಗಳಲ್ಲಿ ಬರುವಂತೆ ತೋರಿತು. ಆ ಚಳಿಗಾಲ ದಲ್ಲಿ ಅಲ್ಲಿಯ ಪಾಠಶಾಲೆಗೆ ಬೇಟ್ಸ್ ಎಂಬವನು ಉಪಾಧ್ಯಾಯನಾಗಿ ಬಂದನು. ಆತನು ಬುದ್ಧಿವಂತನಾಗಿಯೂ ವ್ಯವಹಾರ ಜ್ಞಾನವುಳ್ಳವ ನಾಗಿಯೂ ಇದ್ದನು. ಮಕ್ಕಳನ್ನು ಬುದ್ಧಿಯಲ್ಲಿಯೂ ಶೀಲದಲ್ಲಿಯೂ ದೈವಭಕ್ತಿಯಲ್ಲಿಯೂ ಶ್ರೇಷ್ಠರನ್ನಾಗಿ ಮಾಡಬೇಕೆಂಬ ಆಸೆಯು ಆತನಿ ಗಿದ್ದಿತು. ಅಲ್ಲಿಗೆ ಬಂದಂದಿನಿಂದಲೂ ಆತನು ಎಲ್ಲರ ಪ್ರೀತಿಗೂ ಗೌರ ವಕ್ಕೂ ಪಾತ್ರನಾಗಿದ್ದನು. ಎಲಿಜೆಯು ಆತನ ಪರಿಚಯವನ್ನು ಬೇಗನೆ ಮಾಡಿಕೊಂಡು ವಿದ್ಯೆಯನ್ನು ಕಲಿಯುವಂತೆ ಜೇಮ್ಸನನ್ನು ಪ್ರೋತ್ಸಾಹಿ ಸೆಂದು ಆತನನ್ನು ಕೇಳಿಕೊಂಡಳು. ಆತನು ಹಾಗೆಯೇ ಮಾಡಲೊಪ್ಪಿ ಆಗಾಗ ಮನೆಗೆ ಬರುತ್ತ, ವಿದ್ಯಾರ್ಜನೆಯ ಮಾತನ್ನಾಡಲು ತಕ್ಕ ಸಮಯವನ್ನು ಹುಡುಕುತ್ತಿದ್ದನು.

ಒಂದು ದಿನ ಎಲಿಜೆಯು ಜೇಮ್ಸ್‌ನಿಗೆ, "ಬೇಟ್ಸನು ಧರ್ಮೋಪ ದೇಶಕನಾಗಬೇಕೆಂದಿದ್ದಾನೆ. ಅದಕ್ಕೆ ಶಿಕ್ಷಣವನ್ನು ಪಡೆಯಲು ಬೇಕಾದ ವೆಚ್ಚಕ್ಕಾಗಿ ಆತನು ಈಗ ಉಪಾಧ್ಯಾಯನಾಗಿ ಧನಾರ್ಜನೆಯನ್ನು ಮಾಡುತ್ತಿದ್ದಾನೆ. ನೀನು ವಿದ್ಯಾಶಾಲೆಗೆ ಹೋಗಿ ಓದುತ್ತ, ಚಳಿಗಾಲ ದಲ್ಲಿ ಆತನಂತೆ ಅಲ್ಲಲ್ಲಿ ಪಾಠವನ್ನು ಹೇಳುತ್ತ, ನಿನ್ನ ವಿದ್ಯಾರ್ಜನೆಗೆ ಬೇಕಾಗುವ ಹಣವನ್ನು ಸಂಪಾದಿಸಬಹುದು" ಎಂದು ಹೇಳಿದಳು.

ಜೇಮ್ಸ್.—ಅದು ನನ್ನಿಂದ ಸಾಧ್ಯವಾಗುವುದೊ ಇಲ್ಲವೊ ಹೇಳಲಾರೆನು. ಅಮ್ಮಾ! ನಾವಿಕನಾಗುವ ಆಸೆ ನನ್ನನ್ನಿನ್ನೂ ಬಿಟ್ಟಿಲ್ಲ; ನನಗೂ ಸಮುದ್ರಕ್ಕೂ ಏನೋ ಸಂಬಂಧವಿರಬೇಕು; ಇಲ್ಲವಾದರೆ ನನಗೆ ಈ ಗೀಳು ಇರುತ್ತಿರಲಿಲ್ಲ. ಹಡಗಿನ ದರ್ಶನವು ನನ್ನ ಮನಸ್ಸನ್ನು ಸೂರೆಗೊಳ್ಳುತ್ತದೆ. ಹಡಗಿನ ವಿಚಾರವನ್ನೆತ್ತಿದರೆ ಹಡಗಿನಲ್ಲಿರ ಬೇಕೆಂದು ನನ್ನ ಮನಸ್ಸು ತವಕಪಡುವುದು.

ಈ ಹುಚ್ಚು ಜೇಮ್ಸನ್ನು ಬಿಟ್ಟಿತೆಂದು ಭಾವಿಸಿದ್ದ ಎಲಿಜೆ, "ಅಪ್ಪಯ್ಯಾ! ದೋಣಿಯ ಕೆಲಸದಲ್ಲಿ ಬೇಸರವು ಇನ್ನೂ ಹುಟ್ಟಿಲ್ಲವೆ? ನಾವಿಕನಾಗಲು ನಿನ್ನ ಮನಸ್ಸಿಗೆ ಅಸಹ್ಯವುಂಟಾಗುವುದಿಲ್ಲವೆ?" ಎಂದು ಕೇಳಿದಳು.

ಜೇಮ್ಸ್.—ಆ ವೃತ್ತಿಯೇ ಉತ್ತಮವೆಂದು ತೋರುವ ಪಕ್ಷಕ್ಕೆ ನಾವಿಕನಾಗಲು ನನಗೆ ಈಗಲೂ ಇಷ್ಟವುಂಟು.

ಎಲಿಜೆ.—ಅದೆಂದಿಗೂ ಉತ್ತಮವಲ್ಲ.

ಜೇಮ್ಸ್.—ನನ್ನ ರೋಗವು ಈಗ ಗುಣವಾಗಿದೆ; ನಾವಿಕನಾಗಬೇಕೆಂಬ ಆಸೆ ಇನ್ನೂ ಬಿಟ್ಟಿಲ್ಲ. ಒಂದು ವೇಳೆ ನಾವಿಕನಾಗದಿದ್ದರೆ ಮುಂದೆ ನನಗೆ ಮನಃಕ್ಲೇಶವುಂಟಾಗುವುದೊ ಏನೊ!

ಎಲಿಜೆ.—ಆ ಬಗೆಯ ಸಂದೇಹವು ನಿನಗಿರಕೂಡದು. ಒಂದು ಸಾರಿ ನಿನಗೆ ಓದಿನಲ್ಲಿ ಆಸಕ್ತಿ ಹುಟ್ಟಿದರೆ ನೀನು ಸಮುದ್ರದ ಗೀಳನ್ನು ಬಿಟ್ಟು ವಿದ್ಯೆಯನ್ನು ಕಲಿಯುತ್ತೀಯೆಂಬ ಧೈರ್ಯವು ನನಗಿದೆ. ನೀನು ಉಪಾಧ್ಯಾಯನಾದರೆ ಗೌರವವೂ ಹಣವೂ ದೊರೆಯುವುವು. ಪ್ರಾರಂಭದಲ್ಲಿ ಬೇಕಾಗುವ ಹಣವನ್ನು ಹೇಗಾದರೂ ಮಾಡಿ ನಿನಗೆ ಒದಗಿಸಿಕೊಡುತ್ತೇನೆ; ನೀನು ಸಂದೇಹಪಡಬೇಡ.

ಜೇಮ್ಸ್.—ಹಾಗೆಯೇ ಆಗಲಿ; ಈ ವಿಷಯದಲ್ಲಿ ಆಲೋಚನೆ ಮಾಡುತ್ತೇನೆ. ಆತುರದಲ್ಲಿ ಇದನ್ನು ವ್ಯವಸ್ಥೆಮಾಡಬಾರದು.

ಎಲಿಜೆ.—ನೀನು ದೋಣಿಯಲ್ಲಿ ಕೆಲಸ ಮಾಡಿದರೂ ನಾವಿಕನಾದರೂ ನಿನಗೆ ವರ್ಷವೆಲ್ಲ ಕೆಲಸವಿರುವುದಿಲ್ಲ; ಚಳಿಗಾಲದಲ್ಲಿ ಹೊತ್ತು ಕಳೆಯುವುದೇ ಕಷ್ಟವಾಗುವುದು. ವಿದ್ಯಾರ್ಜನೆ ಮಾಡಿ ಉಪಾಧ್ಯಾಯನಾದರೆ ನಿನಗುಂಟಾಗುವ ಅನುಕೂಲ್ಯಗಳನ್ನು ನೀನೇ ನೋಡು: ಬೇಸಗೆಯಲ್ಲಿ ಸಮುದ್ರದ ಮೇಲೆ ಅಲೆದಾಡಿ ಚಳಿಗಾಲದಲ್ಲಿ ಉಪಾಧ್ಯಾಯನಾಗಿರಬಹುದು.

ನಾವಿಕನಾಗಬೇಡವೆಂದರೆ ತನ್ನ ಉದ್ದೇಶವು ಸಿದ್ಧಿಸುವುದಿಲ್ಲವೆಂದು ತಿಳಿದು ಎಲಿಜೆಯು ಈ ಯುಕ್ತಿಯನ್ನು ಹುಡುಕಿದಳು. ವಿದ್ಯೆ

ಯನ್ನು ಕಲಿತು ಜೇಮ್ಸ್ ಒಂದು ಸಾರಿ ಉಪಾಧ್ಯಾಯನಾದರೆ ಅವನಿಗೆ ಪುಸ್ತಕಗಳಲ್ಲಿ ಪ್ರೀತಿ ಹೆಚ್ಚಿ ಹಡಗಿನ ಭ್ರಾಂತಿಯು ತೊಲಗುವುದೆಂದು ಆಕೆ ಅಭಿಪ್ರಾಯಪಟ್ಟಿದ್ದಳು.

ಉಪಾಧ್ಯಾಯನಾದ ಬೇಟ್ಸ್ ತನ್ನ ಬಳಿಗೆ ಬಂದಾಗೆಲ್ಲ ಜೇಮ್ಸ್ ಆತನೊಡನೆ ಕ್ರೈಸ್ತ ಧರ್ಮದ ವಿಚಾರದ ಮಾತನ್ನಾಡುತ್ತಿದ್ದನು. ಜೇಮ್ಸಿಗೆ ಇದರಿಂದ ವಿಶೇಷ ಪ್ರಯೋಜನವಾಯಿತು. ಉಪಾಧ್ಯಾಯನ ಸಹವಾಸ ಪ್ರಭಾವದಿಂದ ಮಗನು ಸರಿಯಾದ ದಾರಿಗೆ ಬರುವನೆಂದು ತಾಯಿಯು ನಂಬಿದ್ದಳು.

ಒಂದು ದಿನ ಜೇಮ್ಸನ್ನು ನೋಡಿ ಬೇಟ್ಸ್, "ಜಿಮ್ಮಾ! ಪಂಡಿತ ನಿಗೂ ನಾವಿಕನಿಗೂ ಇರುವ ಭೇದವು ಇಷ್ಟೆ: ಪಂಡಿತನು ಸುಪ್ರಸಿದ್ಧ, ಗಣ್ಯ ಪುರುಷ; ನಾವಿಕನು ಅಪ್ರಸಿದ್ಧ, ಸಾಮಾನ್ಯ ಪುರುಷ. ನೀನು ನನ್ನೊಡನೆ ಚೆಸ್ಟರಿನ ವಿದ್ಯಾಶಾಲೆಗೆ ಹೊರಡುವುದಕ್ಕೆ ಸಂಕಲ್ಪಿಸು; ಸಂಕಲ್ಪ ಮಾಡುವುದು ಮೊದಲನೆಯ ಕೆಲಸ" ಎಂದು ಹೇಳಿದನು. ಆಗ ಜೇಮ್ಸ್ ತನ್ನ ತಾಯಿಯ ಕಡೆಗೆ ತಿರುಗಿ, "ಅಮ್ಮಾ! ನಾನು ಚೆಸ್ಟರು ಪಟ್ಟಣದ ವಿದ್ಯಾಶಾಲೆಗೆ ಹೋಗಿ ವಿದ್ಯಾರ್ಜನೆಯನ್ನು ಮಾಡು ತ್ತೇನೆ" ಎಂದು ಹೇಳಿದನು. ಬೇಟ್ಸ್ ಸಂತೋಷದಿಂದ, "ಇದೀಗ ವಿವೇಕಿಯ ಮಾರ್ಗ; ಹಣದ ವಿಚಾರವನ್ನು ಆಮೇಲೆ ನೋಡಿ ಕೊಳ್ಳೋಣ. ಮನಸ್ಸೊಂದಿದ್ದರೆ ಮಾರ್ಗವೂ ಇರುವುದಷ್ಟೆ! ವಿದ್ಯಾ ರ್ಜನೆಯನ್ನು ಮಾಡುತ್ತೇನೆಂದು ನೀನು ಸಂಕಲ್ಪಿಸಿರುವುದೇ ದೊಡ್ಡ ವಿಷಯ. ಈಗ ಚೆಸ್ಟರಿನ ವಿದ್ಯಾಶಾಲೆಯ ವಿಷಯವು ನಿನ್ನ ಮನಸ್ಸಿ ನಲ್ಲಿ ನಿಂತಿತಷ್ಟೆ! ಇನ್ನು ಸಮುದ್ರದ ಗೀಳು ನಿನ್ನನ್ನು ಬಾಧಿಸುವು ದಿಲ್ಲ" ಎಂದನು. ಆಗ, "ವಿದ್ಯಾರ್ಜನೆಯನ್ನು ಮಾಡಿಯೇ ಮಾಡು ತ್ತೇನೆ" ಎಂದು ಜೇಮ್ಸ್ ದೃಢ ಸಂಕಲ್ಪವನ್ನು ಮಾಡಿದನು. ಉಪಾ ಧ್ಯಾಯನ ವಚನಗಳು ಜೇಮ್ಸನ ಆಲೋಚನೆಯ ಮಾರ್ಗವನ್ನೇ ಬದಲಾಯಿಸಿದುವು.

ಜೇಮ್ಸ್ ಪ್ರಸಿದ್ಧ ಪುರುಷನಾದನಂತರ, ಒಂದಾನೊಂದು

ಸಮಯದಲ್ಲಿ ಯುವಕ ಮಂಡಲಿಯಲ್ಲಿ ಉಪನ್ಯಾಸ ಮಾಡುವಾಗ, "ದೃಢ ಸಂಕಲ್ಪವನ್ನು ಮಾಡುವುದೇ ಕ್ಲಿಷ್ಟತಮವಾದ ಕೆಲಸ. ಯುವಕನು ತನ್ನ ಸಂಕಲ್ಪಸಿದ್ಧಿಗಾಗಿ ವರ್ಷಾಂತರಗಳ ವರೆಗೂ ಪ್ರಯಾಸಪಡುವೆನೆಂದು ಮನಸ್ಸು ಮಾಡುವುದೇ ದೊಡ್ಡದು; ಅದಾದ ಮೇಲೆ ಉಳಿದುವೆಲ್ಲವೂ ಸುಲಭವಾಗುವುವು" ಎಂದು ಹೇಳಿರುತ್ತಾನೆ.

ಕೆಲವು ದಿವಸಗಳ ಮೇಲೆ ಎಲಿಜೆಯು ಮಗನನ್ನು ನೋಡಿ, "ಈಗ ನನ್ನಲ್ಲಿ ಸ್ವಲ್ಪ ಹಣವಿದೆ; ಇನ್ನೂ ಸ್ವಲ್ಪವನ್ನು ಸೇರಿಸಿ ನೀನು ಓದುವುದಕ್ಕೆ ಹೊರಡಲು ತಕ್ಕಷ್ಟು ಹಣವನ್ನು ಒದಗಿಸುತ್ತೇನೆ" ಎಂದು ಹೇಳಿದಳು.

ಜೇಮ್ಸ್.—ಆ ಆಲೋಚನೆಯೇಕೆ? ಏರಾವು ಕಾಲದಲ್ಲಿ ನಾನು ಕೂಲಿಗೆ ಕೆಲಸವನ್ನು ಮಾಡಿ ಚೆಸ್ಟರಿನಲ್ಲಿ ನನ್ನ ವೆಚ್ಚಕ್ಕೆ ತಕ್ಕಷ್ಟು ಹಣವನ್ನು ಸಂಪಾದಿಸಿಕೊಳ್ಳಬಲ್ಲೆನು.

ಎಲಿಜೆ.—ಆಗಬಹುದು. ಮುಂದಕ್ಕೆ ಓದಬೇಕೆಂದು ಸಂಕಲ್ಪವನ್ನು ನೀನು ದೇವರ ಕೃಪೆಯಿಂದ ಮಾಡಿರುತ್ತೀಯೆ. ಇನ್ನು ಮುಂದೆ ಎಲ್ಲವೂ ಅನುಕೂಲಿಸುವುದು.

ಜೇಮ್ಸ್.— ನಮ್ಮ ಚಿಕ್ಕಮ್ಮನ ಮಕ್ಕಳು ವಿಲಿಯಮ್ಮ ಮತ್ತು ಹೆನ್ರಿಯು ಓದಲು ನನ್ನ ಜೊತೆಯಲ್ಲಿ ಬರುವರೇನೊ ವಿಚಾರಿಸಬೇಕು.

ಎಲಿಜೆ.—ವಿಚಾರಿಸೋಣ; ಅವರೂ ಹೊರಟರೆ ಒಳ್ಳೆಯ ಜೊತೆಯಾಗುವುದು.

ವಿದ್ಯಾಶಾಲೆಯಲ್ಲಿ ಪಾಠಗಳು ಪ್ರಾರಂಭವಾಗುವುದಕ್ಕೆ ಇನ್ನೂ ಮೂರು ವಾರವಿದ್ದಾಗ ವಿಲಿಯಮ್ಮ, ಹೆನ್ರಿ—ಇವರೊಡನೆ ಜೇಮ್ಸ್ ಈ ವಿಚಾರವನ್ನು ಕುರಿತು ಮಾತನಾಡಿದನು. ಅವರು ಒಂದು ವಾರದ ವರೆಗೆ ಮನೆಯಲ್ಲಿ ಆಲೋಚಿಸಿ ಜೇಮ್ಸಿನ ಜೊತೆಯಲ್ಲಿ ಹೊರಡಲು ಸಮ್ಮತಿಸಿದರು.

ಈ ಸಮಯದಲ್ಲಿ ಪ್ರಸಿದ್ಧ ವೈದ್ಯನೊಬ್ಬನು ಆರೆಂಜು ಶಾಳೆಯಕ್ಕೆ

ಬಂದನು. ಜೇಮ್ಸ್ ಆತನೆಡೆಗೆ ಹೋಗಿ, "ಸ್ವಾಮೀ! ನಾನು ಚೆಸ್ಟರು ವಿದ್ಯಾಶಾಲೆಯಲ್ಲಿ ವಿದ್ಯಾರ್ಜನೆಯನ್ನು ಮಾಡಬೇಕೆಂದು ಸಂಕಲ್ಪಿಸಿದ್ದೇನೆ; ಸಮರ್ಥನಾಗುವ ಸಂಭವವಿಲ್ಲದಿದ್ದರೆ ಆ ಆಲೋಚನೆಯನ್ನು ಬಿಟ್ಟುಬಿಡುತ್ತೇನೆ; ಹೋಗುವುದು ಉಚಿತವಲ್ಲವೆಂದು ತಾವು ಅಭಿಪ್ರಾಯಪಟ್ಟರೆ ನಾನು ಹೊರಡದೆ ಸುಮ್ಮನಿರುವೆನು. ನನ್ನ ಶರೀರ ಸ್ಥಿತಿಯನ್ನು ಪರೀಕ್ಷಿಸಿ ಬುದ್ಧಿವಾದವನ್ನು ಹೇಳಿ ನನಗೆ ಸಹಾಯ ಮಾಡಬೇಕು" ಎಂದು ಬೇಡಿಕೊಂಡನು. ಈ ವಿಷಯವಾಗಿ ಆ ವೈದ್ಯನು ಈಚೆಗೆ ಬರೆದಿರುವುದರಲ್ಲಿ ಹೇಳಿರುವುದೇನೆಂದರೆ:—"ಈ ಬಗೆಯ ವಿಚಾರವು ಇದುವರೆಗೂ ನನಗೆ ಬಂದಿರಲಿಲ್ಲ. ಬಹು ಜಾಗರೂಕತೆಯಿಂದ ಅವನ ದೇಹವನ್ನು ಪರೀಕ್ಷಿಸಿದೆನು. ಮೊದಲು ಅವನ ತಲೆಯ ಆಕಾರವನ್ನು ನೋಡಿದೆನು: ಅಸಾಧಾರಣವಾದ ಮಿದುಳಿರುವುದು ಗೊತ್ತಾಯಿತು. ಆಮೇಲೆ ಅವನ ಶ್ವಾಸಕೋಶಗಳನ್ನು ಪರೀಕ್ಷಿಸಿದೆನು: ಅವು ಬಲವಾಗಿಯೂ ರಕ್ತವನ್ನು ತಕ್ಕಷ್ಟು ಬೇಗನೆ ಪರಿಶುದ್ಧಮಾಡಿ ದೇಹಕ್ಕೆ ಒದಗಿಸಿಕೊಡುವ ಶಕ್ತಿಯುಳ್ಳವಾಗಿಯೂ ಇದ್ದುವು. ಅವನ ನಾಡಿಯನ್ನು ನೋಡಿದೆನು: ಹೃದಯವು ಅತ್ಯುತ್ತಮ ಸ್ಥಿತಿಯಲ್ಲಿರುವುದು ಕಾಣಬಂದಿತು. ಈ ರೀತಿಯಲ್ಲಿ ಕಾಲು ಗಂಟೆಯ ವರೆಗೂ ಪರೀಕ್ಷೆ ಮಾಡಿ ನಾನು ಆ ಹುಡುಗನನ್ನು ಕುರಿತು, 'ನಿನ್ನ ಸಂಕಲ್ಪದಂತೆ ನೀನು ವಿದ್ಯಾರ್ಜನೆಗೆ ಹೊರಡು; ನಿನಗೆ ದೇಹ ದಾರ್ಢ್ಯವು ಸಂಪೂರ್ಣವಾಗಿದೆ. ನೀನು ಚಿತ್ತ ಚಾಂಚಲ್ಯವಿಲ್ಲದಂತೆ ಓದಬೇಕು. ಎಷ್ಟು ಓದಿದರೂ ನಿನಗೆ ಆರೋಗ್ಯ ಹಾನಿಯ ಭಯವಿಲ್ಲ. ಮನಸ್ಸು ಮಾಡಿ ಓದಿದರೆ ನೀನು ಪ್ರಸಿದ್ಧ ಪುರುಷನಾಗುವುದರಲ್ಲಿ ಸಂಶಯವಿಲ್ಲ' ಎಂದು ಹೇಳಿದೆನು."

ಜೇಮ್ಸ್ ಬಹಳ ಸಂತೋಷದಿಂದ ಮನೆಗೆ ಬಂದು ಚೆಸ್ಟರಿಗೆ ಹೊರಡಲು ಸನ್ನದ್ಧನಾದನು. "ನಿನಗೆ ಹೊಸ ಉಡುಪಿದ್ದರೆ ಚೆನ್ನಾಗಿರುತ್ತಿದ್ದಿತು. ಈಗ ಯತ್ನವಿಲ್ಲ; ಇರುವ ಬಟ್ಟೆಗಳಲ್ಲಿಯೇ ಕಾಲವನ್ನು ಕಳೆಯಬೇಕಾಗಿದೆ" ಎಂದು ಎಲಿಜೆಯು ಮಗನಿಗೆ ಹೇಳಿದಳು. ಜೇಮ್ಸನಿಗಿದ್ದುದು ಒಂದೇ ಅಂಗಿ, ಒಂದೇ ಷರಾಯಿ. ಷರಾಯಿಯು

ಮೊಣಕಾಲ ಬಳಿಯಲ್ಲಿ ಹರಿದುಹೋಗಿದ್ದಿತು. ಆದರೆ ತಾಯಿಯು ಅದನ್ನು ಜಾಣತನದಿಂದ ರಿಪ್ಪುಮಾಡಿದ್ದಳು. "ನನಗೆ ಈ ಬಟ್ಟೆಗಳೇ ಸಾಕು" ಎಂದು ಜೇಮ್ಸ್ ಹೇಳಿದನು.

ಕೊನೆಗೆ ಜೇಮ್ಸ್, ವಿಲಿಯಮ್ಸ್, ಹೆನ್ರಿ—ಈ ಮೂವರೂ ಚೆಸ್ಟರಿನಲ್ಲಿ ತಾವೇ ಅಡಿಗೆ ಮಾಡಿಕೊಳ್ಳುತ್ತ ಊಟಮಾಡಿಕೊಂಡಿದ್ದು ಓದುವಂತೆ ನಿರ್ಧರವಾಯಿತು. ಜೇಮ್ಸ್ ಮನೆಯಲ್ಲಿದ್ದ ಹನ್ನೊಂದು ಡಾಲರುಗಳನ್ನು ತೆಗೆದುಕೊಂಡು, "ಇದೇ ನನಗೆ ಸಾಕು, ಅಲ್ಲಿ ಬೇಕಾಗುವಷ್ಟು ಹಣವನ್ನು ನಾನೇ ಸಂಪಾದಿಸಿಕೊಳ್ಳುವೆನು" ಎನ್ನುತ್ತ ತಾಯಿಯ ಆಶೀರ್ವಾದದೊಡನೆ ಚೆಸ್ಟರಿಗೆ ಹೊರಟನು.

## ಅಧ್ಯಾಯ ೧೪

# ಗೌಗಾ ವಿದ್ಯಾಶಾಲೆಯ ವ್ಯಾಸಂಗ

೧೮೪೮ನೆಯ ಇಸವಿಯ ಮಾರ್ಚಿ ೫ನೆಯ ತಾರೀಖಿನಲ್ಲಿ ಜೇಮ್ಸ್, ವಿಲಿಯಮ್ಮ್, ಹೆನ್ರಿ—ಈ ಮೂವರೂ ಪಾತ್ರೆಪದಾರ್ಥಗಳನ್ನು ಹೊತ್ತುಕೊಂಡು ಚೆಸ್ಟರಿಗೆ ನಡೆದು ಹೋದರು.

ಚೆಸ್ಟರಿನಲ್ಲಿದ್ದ ಗೌಗಾ ವಿದ್ಯಾಶಾಲೆಯ ಅಧ್ಯಕ್ಷನ ಹೆಸರು ಡ್ಯಾನಿಯಲ್ ಬ್ರಾಂಚು. ಕೆಲವು ವಿಷಯಗಳಲ್ಲಿ ಆತನು ಪಂಡಿತನಾಗಿದ್ದರೂ ಮತ್ತೆ ಕೆಲವು ವಿಷಯಗಳಲ್ಲಿ ವಕ್ರಾಭಿಪ್ರಾಯವುಳ್ಳವನಾಗಿದ್ದನು. ಆತನ ಬಳಿಗೆ ಜೇಮ್ಸ್ ತನ್ನ ಸ್ನೇಹಿತರೊಡನೆ ಹೋಗಿ, "ನಾವು ತಮ್ಮ ಪಾಠಶಾಲೆಗೆ ವಿದ್ಯಾರ್ಜನೆಗಾಗಿ ಬಂದಿರುತ್ತೇವೆ" ಎಂದು ಹೇಳಿದನು.

ಬ್ರಾಂಚು.—ನಿನ್ನ ಹೆಸರೇನು?

ಜೇಮ್ಸ್.—ನನ್ನ ಹೆಸರು ಜೇಮ್ಸ್ ಏಬ್ರಾಮ್ ಗಾರ್‌ಫೀಲ್ಡ್. ಇವರು ನಮ್ಮ ನಂಟರು: ಇವನ ಹೆಸರು ವಿಲಿಯಂ, ಅವನ ಹೆಸರು ಹೆನ್ರಿ.

ಬ್ರಾಂಚು.—ಸಂತೋಷ; ನೀವು ವಿದ್ಯಾರ್ಜನೆಗಾಗಿ ಬಂದಿರುವುದು ಉತ್ತಮವಾದ ಕೆಲಸ. ನೀವು ಧನಿಕರಾಗಿರುವಂತೆ ಕಾಣುವುದಿಲ್ಲ.

ಜೇಮ್ಸ್.—ಇಲ್ಲ, ನಮ್ಮಲ್ಲಿ ಬೆಳ್ಳಿ ಭಂಗಾರಗಳಿಲ್ಲ; ಅಡಿಗೆಯ ಪಾತ್ರೆಗಳೂ ಸಾಮಾನುಗಳೂ ಇವೆ.

ಬ್ರಾಂಚು.—ನೀವೇ ಅಡಿಗೆಯನ್ನು ಮಾಡಿಕೊಳ್ಳುತ್ತೀರೊ?

ಜೇಮ್ಸ್.—ಮಾಡಿಕೊಳ್ಳುತ್ತೇವೆ; ನಮಗೆ ಒಂದು ಕೊಠಡಿಯನ್ನು ದಯೆಮಾಡಿ ಕೊಡಿಸಿರಿ.

ಬ್ರಾಂಚು.—ಇಲ್ಲಿ ನಿಮ್ಮಂತೆಯೇ ಅನೇಕರು ತಾವೇ ಅಡಿಗೆಯನ್ನು ಮಾಡಿಕೊಂಡು ಓದುತ್ತಿದ್ದಾರೆ. ಅಗೊ! ಅಲ್ಲಿ ಕಾಣುವ ಹಳೆಯ ಮನೆಯಲ್ಲಿ ಬಡ ಮುದುಕಿಯೊಬ್ಬಳು ಇದ್ದಾಳೆ;

ಅಲ್ಲಿಗೆ ಹೋಗಿ ಕೇಳಿರಿ; ಆಕೆಯು ನಿಮ್ಮ ವಾಸಕ್ಕೆ ಸ್ಥಳವನ್ನು ಕೊಡುವಳು.

ಮೂವರೂ ಅಧ್ಯಕ್ಷನಿಗೆ ವಂದನೆಯನ್ನು ಮಾಡಿ ಮುದುಕಿಯ ಮನೆಗೆ ಹೋಗಿ ಅಲ್ಲಿ ಒಂದು ಕಿರುಮನೆಯನ್ನು ಬಾಡಿಗೆಗೆ ತೆಗೆದುಕೊಂಡು ಅಡಿಗೆ ಊಟಗಳನ್ನು ಮಾಡಿಕೊಂಡಿದ್ದರು.

ಚೆಸ್ಟರೆಂಬುದು ಚಿಕ್ಕ ಊರಾದರೂ ಗೌಗಾ ವಿದ್ಯಾಶಾಲೆಯ ಪ್ರಭಾವದಿಂದ ಪ್ರಸಿದ್ಧ ಸ್ಥಳವಾಗಿದ್ದಿತು. ಆ ವಿದ್ಯಾಶಾಲೆಯಲ್ಲಿ ಹುಡುಗರೂ ಹುಡುಗಿಯರೂ ಸುಮಾರು ನೂರರ ವರೆಗೆ ವ್ಯಾಸಂಗ ಮಾಡಿಕೊಂಡಿದ್ದರು. ಶಾಲೆಯು ಉತ್ತಮ ಸ್ಥಿತಿಯಲ್ಲಿದ್ದಿತು.

ಮರು ದಿನ ಪಾಠಗಳು ಪ್ರಾರಂಭವಾದುವು. ಅಧ್ಯಕ್ಷನ ಅಪ್ಪಣೆಯಂತೆ ಜೇಮ್ಸು ವ್ಯಾಕರಣ ಶಾಸ್ತ್ರವನ್ನೂ ಅಂಕ ಗಣಿತವನ್ನೂ ಬೀಜ ಗಣಿತವನ್ನೂ ಪ್ರಾಕೃತಿಕ ಶಾಸ್ತ್ರವನ್ನೂ ವ್ಯಾಸಂಗಕ್ಕೆ ತೆಗೆದುಕೊಂಡನು. ಉತ್ತಮವಾದ ಉಡುಪುಗಳನ್ನು ಹಾಕಿಕೊಂಡಿದ್ದ ಅಪರಿಚಿತರಾದ ನೂರು ಮಂದಿ ವಿದ್ಯಾರ್ಥಿಗಳ ಜೊತೆಯಲ್ಲಿರುವುದು ಪ್ರಾರಂಭದಲ್ಲಿ ಜೇಮ್ಸಿಗೆ ಅಸಾಧಾರಣವಾದ ನವೀನಾನುಭವವಾಗಿದ್ದಿತು. ಕೆಲವು ದಿನಗಳಲ್ಲಿಯೇ ಎಲ್ಲವೂ ಸರಿಹೋಗಲು, ಅವನು ಸಂಕೋಚಪಡದೆ ನಿರಾತಂಕವಾಗಿದ್ದನು.

ಶಾಲಾಧ್ಯಕ್ಷನಾದ ಬ್ರಾಂಚು ಹೇಳಿಕೊಡುತ್ತಿದ್ದ ವ್ಯಾಕರಣ ಶಾಸ್ತ್ರವು ವಿಜಾತೀಯವಾಗಿದ್ದಿತು. ಪ್ರಸಿದ್ಧ ವೈಯಾಕರಣರ ಮತಗಳನ್ನು ಅವನು ದೂರ ಮಾಡಿ ವಿಚಿತ್ರವಾದ ತನ್ನದೊಂದು ಮತವನ್ನಿಟ್ಟುಕೊಂಡಿದ್ದನು. ಜೇಮ್ಸಿಗೂ ಅಧ್ಯಕ್ಷನಿಗೂ ವ್ಯಾಕರಣಾಂಶಗಳ ವಿಷಯದಲ್ಲಿ ಆಗಾಗ ವಾಗ್ವಾದವು ನಡೆಯುತ್ತಿದ್ದಿತು. ಈ ವಾಗ್ವಾದದಿಂದ ಜೇಮ್ಸಿನ ಯೋಗ್ಯತೆಯು ಅಧ್ಯಕ್ಷನಿಗೆ ಬಹು ಶೀಘ್ರದಲ್ಲಿ ತಿಳಿಯ ಬಂದಿತು. ಸಕಾರಣವಾಗಿ ತಿಳಿಸಿದುದನ್ನು ಹೊರತು ಬರಿಯ ವಿತಂಡಾ ವಾದಗಳನ್ನು ಜೇಮ್ಸು ಒಪ್ಪುತ್ತಿರಲಿಲ್ಲ. ಹೀಗೆ ಜೇಮ್ಸು ಚರ್ಚೆ ಮಾಡುತ್ತಿದ್ದರೂ ಅವನ ಬುದ್ಧಿಶಕ್ತಿಯನ್ನು ನೋಡಿ ಬ್ರಾಂಚಿಗೆ ಅವನಲ್ಲಿ ಪ್ರೀತಿಯು ಬೆಳೆಯಿತು.

ಪುಸ್ತಕಗಳನ್ನು ಜೆಲೆಗೆ ಕೊಂಡು ಆವಶ್ಯಕವಾದ ಇತರ ವೆಚ್ಚಗಳನ್ನು ಮಾಡುತ್ತಬರಲು, ಜೇಮ್ಸ್‌ನ ಹನ್ನೊಂದು ಡಾಲರುಗಳು ಮುಗಿಯುತ್ತಬಂದುವು. ಆಗ ತಾನು ಎಲ್ಲಿಯಾದರೂ ಕೆಲಸವನ್ನು ಹುಡುಕಿ ಹಣವನ್ನು ಸಂಪಾದಿಸದಿದ್ದರೆ ನಿರ್ಗತಿಕನಾಗುವೆನೆಂದು ಹೆದರಿ, ಅವನು ಆ ಊರಿನ ಬಡಗಿಯ ಬಳಿಗೆ ಕೆಲಸವನ್ನು ಕೇಳಲು ಹೋಗಿ ತನ್ನ ಪೂರ್ವ ಕಥೆಯನ್ನೂ ತನಗಿದ್ದ ಮರಗೆಲಸದ ಪರಿಚಯವನ್ನೂ ತಿಳಿಸಿ, ಕೂಲಿಯ ಕೆಲಸವನ್ನು ಮಾಡಲು ಒಪ್ಪಿದನು. ಈ ಸಂಪಾದನೆಯಲ್ಲಿ, ತನ್ನ ವೆಚ್ಚಗಳು ಕಳೆದುಳಿದ ಎರಡು ಮೂರು ಡಾಲರುಗಳನ್ನು ತೆಗೆದುಕೊಂಡು, ಜೇಮ್ಸ್ ರಜದ ಕಾಲದಲ್ಲಿ ತನ್ನೂರಿಗೆ ಹೋದನು.

ಆ ಶಾಲೆಯ ಪುಸ್ತಕಾಲಯದಲ್ಲಿ ೧೫೫೦ ಗ್ರಂಥಗಳು ಮಾತ್ರ ವಿದ್ದರೂ, ಅಷ್ಟರಿಂದಲೇ ಜೇಮ್ಸ್‌ಗೆ ಪರಮಾನಂದವಾಗುತ್ತಿದ್ದಿತು. ಪುಸ್ತಕಗಳನ್ನೋದುವುದಕ್ಕೆ ಅವನಿಗೆ ಅವಕಾಶವು ಹೆಚ್ಚಾಗಿರಲಿಲ್ಲ. ಆದರೂ, ಹಗಲು ಬಿಡುವಾದಾಗಲೂ ನಿದ್ದೆಗೆಟ್ಟು ರಾತ್ರಿಯಲ್ಲಿಯೂ ಅವನು ಸಾಧ್ಯವಾದಷ್ಟು ಪುಸ್ತಕಗಳನ್ನು ಓದಿದನು.

ಶಾಲೆಯ ಪಾಠದ ಪಟ್ಟಿಯಂತೆ ಜೇಮ್ಸ್ ತಿಂಗಳಿಗೆರಡು ಸಾರಿ ವಾಕ್ಯರಚನೆಯನ್ನು ಅಭ್ಯಾಸಮಾಡುತ್ತಿದ್ದನು. ಆಗಾಗ ವಿದ್ಯಾರ್ಥಿಗಳು ಊರಿನ ಮಹಾ ಜನದ ಮುಂದೆ ತಂತಮ್ಮ ಪ್ರಬಂಧವನ್ನು ಓದುವ ಪದ್ಧತಿ ಇದ್ದಿತು. ಜೇಮ್ಸ್ ತನ್ನ ಪ್ರಬಂಧವನ್ನು ಮೊದಲನೆಯ ಸಾರಿ ಓದಿದಾಗ ಅವನ ಕಾಲುಗಳು ಗಡಗಡನೆ ನಡುಗಿದುವು; ಮುಂದೆ ಶತ್ರುಗಳ ಗುಂಡಿನೇಟಿನೆದುರಿಗೆ ಕೂಡ ಜೇಮ್ಸ್ ಆ ರೀತಿ ನಡುಗಲಿಲ್ಲ. ಅವನು ಮನೆಗೆ ಬಂದ ಮೇಲೆ ಜೊತೆಯವರನ್ನು ನೋಡಿ, "ನನ್ನ ಪುಣ್ಯಕ್ಕೆ ನನ್ನ ಕಾಲುಗಳ ಮುಂದೆ ಒಂದು ತೆರೆಯಿದ್ದಿತು" ಎಂದು ಹೇಳಿದನು.

ವಿಲಿಯಂ.—ಅದು ಹೇಗೆ ಪುಣ್ಯ?

ಜೇಮ್ಸ್.—ನನ್ನ ಕಾಲುಗಳನ್ನು ನೀನು ನೋಡಿದ್ದರೆ ನನಗೆ ಅದಿರು ವಾಯು ಬಂದಿದ್ದಿತೆಂದು ಹೇಳುತ್ತಿದ್ದೆ.

ವಿಲಿಯಂ.—ನಿನಗೂ ನಡುಕವೆ? ನನಗಾಶ್ಚರ್ಯವಾಗುತ್ತದೆ; ನಿನಗೂ ಹೆದರಿಕೆಯಾಯಿತೆ?

ಜೇಮ್ಸ್.—ಹಾಗೆ ತಾನೆ ಹೇಳಬೇಕು.

ವಿಲಿಯಂ.—ನಿನ್ನ ವಾಕ್ಯ ರಚನಾ ರೀತಿಯು ಅತ್ಯುತ್ತಮವಾಗಿದ್ದಿತು. ಅದಕ್ಕೆ ಕೊಂಚವೂ ಅದಿರು ವಾಯು ಬಂದಿರಲಿಲ್ಲ. ಹಾಗೆ ಬರೆಯಲು ನನಗೂ ಬರುವುದಾದರೆ ನಾನು ನಿನಗಿಂತ ಹೆಚ್ಚಾಗಿ ನಡುಗಲು ಇಷ್ಟಪಡುತ್ತಿದ್ದೆನು. ನಿನ್ನ ಬಟ್ಟೆಗಳನ್ನು ನೋಡಿ ಕೆಲವರು, "ಆ ಹರುಕು ಬಟ್ಟೆಯೊಳಗೆ ಈ ಅದ್ಭುತ ಪ್ರಜ್ಞೆಯು ಅಡಗಿದೆಯೆ?" ಎಂದು ಬೆರಗಾದರು.

ಜೇಮ್ಸ್.—ನಾನು ಕೃತಜ್ಞನಾಗಿದ್ದೇನೆ. ನನ್ನ ಬಟ್ಟೆಗಳನ್ನು ಪರಿಹಾಸ್ಯ ಮಾಡಿ ನನ್ನ ವಾಕ್ಯ ರಚನೆಯನ್ನು ನೀನು ಹೊಗಳುವಂತಿದೆ. ನನ್ನ ಭಾಗಕ್ಕೆ ವಾಕ್ಯ ರಚನೆಯು ಸುಲಭವಾದ ಕೆಲಸ; ಆಲೋಚಿಸಿ ಬರೆದರೆ ಒಳ್ಳೆಯ ವಾಕ್ಯ ರಚನೆಯಾಗಬಹುದು. ಆದರೆ ಒಳ್ಳೆಯ ಬಟ್ಟೆಗೆ ಹಣವು ಆವಶ್ಯಕ; ಆ ಹಣಕ್ಕೆ ಮಾತ್ರ ಅಭಾವವಾಗಿದೆ.

ಜೇಮ್ಸ್ ಪುಸ್ತಕಾಲಯದಲ್ಲಿದ್ದ ಹೆನ್ರಿ ರೈಟ್ ಎಂಬವನ ಚರಿತ್ರೆಯನ್ನು ಓದಿ ಅವನ ಬಡತನ, ಸ್ವಾರ್ಥತ್ಯಾಗ, ವಿದ್ಯಾರ್ಜನೆಯ ಪ್ರಯತ್ನ, ದೃಢ ಸಂಕಲ್ಪ—ಇತ್ಯಾದಿಗಳೆಲ್ಲವನ್ನೂ ತಿಳಿದು ವಿಸ್ಮಯಪಟ್ಟನು. ಗೌಗಾ ವಿದ್ಯಾಶಾಲೆಯಲ್ಲಿ ವಿದ್ಯಾರ್ಥಿಗಳ ವಾಕ್ಕೌಶಲಾಭಿವೃದ್ಧಿಗಾಗಿ ವಾಗ್ವಾದ ಸಂಘವೊಂದಿದ್ದಿತು. ಈ ಸಂಘದಲ್ಲಿ ವಿಚಾರ ವಿಷಯಗಳನ್ನು ಸ್ಪರ್ಧೆಯಿಂದ ಚರ್ಚಿಸುತ್ತ ಯುವಕರು ತಮ್ಮ ವಾಗ್ಝರಿಯನ್ನೂ ವಿಷಯ ಜ್ಞಾನವನ್ನೂ ವೃದ್ಧಿಪಡಿಸಿಕೊಳ್ಳಲು ಅವಕಾಶವಿದ್ದಿತು. ಚರ್ಚೆಯ ವಿಷಯಗಳನ್ನು ಜೇಮ್ಸ್ ಮುಂದಾಗಿ ಪರ್ಯಾಲೋಚಿಸಿ, ತನ್ನಭಿಮತವನ್ನು ಸಮರ್ಥನ ಮಾಡುವುದಕ್ಕೆ ಬೇಕಾದ ವಿಷಯಗಳನ್ನು ಪುಸ್ತಕಗಳಲ್ಲಿ ಹುಡುಕಿ ಗುರುತುಮಾಡಿಟ್ಟುಕೊಳ್ಳುತ್ತಿದ್ದನು. ಜೇಮ್ಸನ ವಾಗ್ಝರಿಯನ್ನೂ ವಾಕ್ಪಟುತ್ವವನ್ನೂ

ವಿಷಯ ಗ್ರಹಣ ಶಕ್ತಿಯನ್ನೂ ಸ್ವಾಭಿಪ್ರಾಯ ಸಮರ್ಥನ ಚಾತುರ್ಯ ವನ್ನೂ ನೋಡಿ ವಿದ್ಯಾರ್ಥಿಗಳೂ ಉಪಾಧ್ಯಾಯರೂ ಆಶ್ಚರ್ಯಪಡು ತ್ತಿದ್ದರು. ಈ ಅಭ್ಯಾಸದಿಂದ, ರಾಷ್ಟ್ರೀಯ ಸಭೆಗಳಲ್ಲಿ ತಾನು ಮುಂದೆ ಮಾಡಲು ಆವಶ್ಯಕವಾದ ಶಕ್ತಿಯನ್ನು ಜೇಮ್ಸ್ ಪಡೆಯುತ್ತ ಬಂದನು. ಅವನು ಬಹಳ ಸಮರ್ಥನಾದ ವಾಗ್ಮಿಯಾಗುವನೆಂದು ಎಲ್ಲರೂ ಹೇಳುತ್ತಿದ್ದರು. ಜೇಮ್ಸ್‌ನ ವಾಗ್ಝರಿಯನ್ನು ಕೊಂಡಾಡುವಾಗ, ಅವನ ಷರಾಯಿಯು ಕಾಲಿಗೆ ಸಾಲದೆ ಅರ್ಧಡಿ ಮೇಲಕ್ಕಿದ್ದುದನ್ನು ಯಾರೂ ಗಣನೆಗೆ ತರಲಿಲ್ಲ. "ವಸ್ತ್ರ ಭೂಷಣವು ಭೂಷಣವಲ್ಲ, ವಾಗ್ಭೂಷಣವೇ ಭೂಷಣ" ಎಂಬ ಲೋಕವಾರ್ತೆಯು ನಿಜವಲ್ಲವೆ!

## ಅಧ್ಯಾಯ ೧೫

# ಉಪಾಧ್ಯಾಯನಾಗಬೇಕೆಂಬ ಸಂಕಲ್ಪ

ಬೇಸಗೆಯ ಕಾಲದ ಎರಡು ತಿಂಗಳ ರಜ ಬಂದ ಕೂಡಲೆ ಜೇಮ್ಸ್ ಮನೆಗೆ ಬಂದನು. ಥಾಮಸ್ಸೂ ಜೇಮ್ಸೂ ಇಬ್ಬರೂ ಸೇರಿ ತಮ್ಮ ಉಪಯೋಗಕ್ಕಾಗಿ ಕಣಜವೊಂದನ್ನು ಪರರ ಸಹಾಯವಿಲ್ಲದೆ ಕಟ್ಟಿದರು. ಇಷ್ಟು ಕಾಲ ಕಳೆದ ಮೇಲೆ ಗಾರ್ಫೀಲ್ಡನ ಸಂಸಾರಕ್ಕೆ ಅನುಕೂಲ ಸ್ಥಿತಿಯು ಒದಗಿ ಮರದ ಗುಡಿಸಿಲಿನ ತೊಂದರೆಗಳು ತಪ್ಪಿದುವು. ಜನ ಸಂಖ್ಯೆಯು ಹೆಚ್ಚಿದುದರಿಂದ ಆರೆಂಜು ಪಾಳೆಯವೂ ಅಭಿವೃದ್ಧಿಗೆ ಬಂದಿತು; ವಿಜನವಾದ ಕಾಡು ಜನ ಭರಿತವಾದ ಪಾಳೆಯವಾಯಿತು.

ಚೆಸ್ಟರಿಗೆ ಹಿಂದಿರುಗಿ ಹೋಗುವುದಕ್ಕೆ ಮೊದಲು ಬಟ್ಟೆ ಬರೆಗಾಗಿ ಹಣವನ್ನು ಸಂಪಾದಿಸಬೇಕೆಂದು ಜೇಮ್ಸ್ ಕೂಲಿಯ ಕೆಲಸವನ್ನು ಹುಡುಕಿದನು. ಹುಲ್ಲನ್ನು ಮೆದೆ ಹಾಕಲು ಶಕ್ತಿಯಿಲ್ಲದೆ ತೊಂದರೆ ಪಡುತ್ತಿದ್ದ ಒಬ್ಬ ರೈತನು ಜೇಮ್ಸನ್ನು ಕೂಲಿಗಿಟ್ಟುಕೊಂಡನು. ಆ ರೈತನ ಕೆಲಸವು ಜೇಮ್ಸಿನ ಸಹಾಯದಿಂದ ಒಂದು ವಾರದಲ್ಲಿಯೇ ಪೂರಯಿಸಿದುದರಿಂದ ರೈತನು ಬಹಳ ಸಂತೋಷಪಟ್ಟನು. ರಜವು ಕಳೆದುಹೋಗುವ ವರೆಗೂ ಜೇಮ್ಸಿಗೆ ಕೂಲಿಯ ಕೆಲಸವು ದೊರೆಯುತ್ತಿದ್ದಿತು. ಈ ಸಂಪಾದನೆಯಿಂದ, ಹಿಂದೆ ತನಗೆ ಔಷಧವನ್ನು ಕೊಟ್ಟಿದ್ದ ವೈದ್ಯನ ಸಾಲವನ್ನು ತೀರಿಸಿ ಜೇಮ್ಸ್ ಹೊಸ ಬಟ್ಟೆಗಳನ್ನು ಹೊಲಿಸಿಕೊಂಡನು.

ರಜದಲ್ಲಿ ಜೇಮ್ಸ್ ಹೀಗೆ ಹಗಲೆಲ್ಲ ಕೂಲಿಯ ಕೆಲಸ ಮಾಡಿಕೊಂಡಿದ್ದು ಸಾಯಂಕಾಲದಲ್ಲಿ ವಿದ್ಯಾವ್ಯಾಸಂಗ ಮಾಡುತ್ತ ಪಾಠಶಾಲೆಯಿಂದ ತಂದಿದ್ದ ಪುಸ್ತಕಗಳನ್ನೋದಿದುದಲ್ಲದೆ ಬೀಜ ಗಣಿತವನ್ನೂ ಅಭ್ಯಾಸ ಮಾಡಿದನು. ವಿದ್ಯಾವಂತನಾಗಬೇಕೆಂಬ ಆಶೆಯು ಅವನಿಗೆ ಹೆಚ್ಚುತ್ತ ಬಂದಹಾಗೆಲ್ಲ ನಾವಿಕನಾಗಬೇಕೆಂಬ ಬಯಕೆಯು ಬಿಟ್ಟುಹೋಯಿತು. ಅದನ್ನು ಕಂಡು ತಾಯಿಯು ಬಹು ಸಂತೋಷಪಟ್ಟಳು. ರಜವು ಪೂರಯಿಸಲು, ಜೇಮ್ಸ್ ಪಾಠಶಾಲೆಗೆ ಹೊರಡುವಾಗ ತಾಯಿಯು

ಅವನನ್ನು ಕುರಿತು, "ನಿನ್ನಲ್ಲಿ ಸ್ವಲ್ಪ ಹಣವಿದ್ದರೆ ಚೆನ್ನಾಗಿರುತ್ತಿದ್ದಿತು" ಎಂದಳು.

ಜೇಮ್ಸ್.—ನನಗೆ ಹಣವೇತಕ್ಕೆ? ನನ್ನಲ್ಲಿರುವ ಈ ಕಾಲು ಡಾಲರಿನ ನಾಣ್ಯವು ನನಗೆ ಸಾಕು. ನಾನು ಚೆಸ್ಟರಿನಲ್ಲಿ ಮರಗೆಲಸವನ್ನು ಮಾಡಿ ನನ್ನ ವೆಚ್ಚಕ್ಕೆ ಬೇಕಾದಷ್ಟು ಹಣವನ್ನು ಸಂಪಾದಿಸಿಕೊಳ್ಳುತ್ತೇನೆ.

ಎಲಿಜೆ.—ಅದೇನೊ ಸರಿ; ಮೊದಲೇ ಬರಿಗೈಯಲ್ಲಿರುವುದಕ್ಕಿಂತ ಹತ್ತಿರ ಒಂದೆರಡು ಡಾಲರುಗಳಿದ್ದರೆ ಉತ್ತಮ.

ಜೇಮ್ಸ್.—ಒಂದೆರಡು ಡಾಲರನ್ನು ಕೈಯಲ್ಲಿ ತೆಗೆದುಕೊಂಡು ಹೊರಟು ಬರಿಯ ಕೈಯಲ್ಲಿ ಹಿಂದಿರುಗಿ ಬರುವುದಕ್ಕಿಂತ ಬರಿಗೈಯಲ್ಲಿ ಹೊರಟು ಒಂದೆರಡು ಡಾಲರುಗಳನ್ನು ಮನೆಗೆ ತರುವುದು ಮತ್ತೂ ಉತ್ತಮ.

ಎಲಿಜೆ.—ಹಾಗಾದರೆ ಹಣವನ್ನುಳಿಸಿಕೊಂಡು ಬರುವೆಯೊ?

ಜೇಮ್ಸ್.—ಬರಬೇಕೆಂದಿದ್ದೇನೆ. ನಾನು ಈ ಮಾಗಿಯ ಕಾಲದಲ್ಲಿ ಉಪಾಧ್ಯಾಯನಾಗಲು ಸ್ವಲ್ಪ ಹಣವನ್ನು ಕೈಯಲ್ಲಿಟ್ಟುಕೊಂಡಿರಬೇಕು.

ಎಲಿಜೆ.—ಓಹೊ! ಈ ಮಾಗಿಯ ಕಾಲದಲ್ಲಿ ಉಪಾಧ್ಯಾಯನಾಗುವೆಯಾ?

ಜೇಮ್ಸ್.—ಆಗಬೇಕೆಂದಿದ್ದೇನೆ; ಆದರೆ ಕೆಲಸವು ಸಿಕ್ಕುವುದೊ ಇಲ್ಲವೊ?

ಎಲಿಜೆ.—ಏಕೆ ಸಿಕ್ಕುವುದಿಲ್ಲ? ಚಳಿಗಾಲದಲ್ಲಿ ಉಪಾಧ್ಯಾಯನಾದರೆ, ಚೆಸ್ಟರಿನಲ್ಲಿ ನಿನಗೆ ಒಂದು ವರ್ಷಕ್ಕೆ ಸಾಕಾಗುವಷ್ಟು ಹಣವು ದೊರೆಯುವುದರಿಂದ, ಒಂದು ದಿನವೂ ಬಿಡುವಿಲ್ಲದೆ ಬಡಗಿಯ ಬಳಿ ಕೆಲಸ ಮಾಡುವ ಆವಶ್ಯಕತೆಯು ತಪ್ಪುವುದು.

ಜೇಮ್ಸ್.—ಅಂತಹ ಕಾಲವು ಎಂದಿಗೆ ಬರುವುದೊ ನೋಡೋಣ! ಈಗಿನಂತೆಯೇ ನಾನು ದುಡಿದು ಹಣವನ್ನು ಸಂಪಾದಿಸುತ್ತ ವಿದ್ಯಾವ್ಯಾಸಂಗವನ್ನು ಮಾಡುತ್ತೇನೆ. ನನ್ನ ಆರೋಗ್ಯಸ್ಥಿತಿಯು ಉತ್ತಮವಾಗಿರುವುದರಿಂದ ಎಷ್ಟು ದುಡಿದರೂ ಬಾಧಕವಾಗುವಂತಿಲ್ಲ.

ಹನ್ನೆರಡಾಣೆಯ ಬೆಲೆಯುಳ್ಳ ಒಂದೇ ಒಂದು ನಾಣ್ಯವನ್ನು ತೆಗೆದುಕೊಂಡು ಜೇಮ್ಸ್ ಚೆಸ್ಟರಿನ ವಿದ್ಯಾಶಾಲೆಗೆ ಹೋದನು. ಜೊತೆಯೇ ಇಲ್ಲದೆ ಆ ನಾಣ್ಯವು ಮರುಗುತ್ತಿದೆಯೆಂದು ಜೇಮ್ಸ್ ಹೇಳುತ್ತಿದ್ದನು. ಮೊದಲನೆಯ ಭಾನುವಾರದ ದಿವಸ ಪ್ರಾರ್ಥನಾಲಯದಲ್ಲಿರುವಾಗ ಧರ್ಮದ ಗೋಲಕವೊಂದನ್ನು ಅವನ ಮುಂದೆಯೂ ತಂದು ಹಿಡಿದರು. ತನ್ನ ನಾಣ್ಯವು ಒಂಟಿಯಾಗಿಯೇ ಇದೆಯೆಂಬ ಅನುತಾಪದಿಂದಲೊ ಧರ್ಮಬುದ್ಧಿಯಿಂದಲೊ ಅವನು ಆ ನಾಣ್ಯವನ್ನು ಜೇಬಿನಿಂದ ತೆಗೆದು ಗೋಲಕಕ್ಕೆ ಹಾಕಿಬಿಟ್ಟನು: ಪ್ರಾಯಶಃ ಧರ್ಮಬುದ್ಧಿಯಿಂದಲೇ ಇರಬಹುದು.

ಚಳಿಗಾಲದಲ್ಲಿ ತಾನು ಉಪಾಧ್ಯಾಯನಾಗಬೇಕೆಂದಿರುವ ಆಲೋಚನೆಯನ್ನು ಜೇಮ್ಸ್ ಶಾಲಾಧ್ಯಕ್ಷನಿಗೆ ತಿಳಿಸಿರಲಿಲ್ಲ. ಅಧ್ಯಕ್ಷನೇ ಒಂದು ದಿನ ಈ ಪ್ರಸ್ತಾವವನ್ನೆತ್ತಿ ತನ್ನ ಕೈಯಲ್ಲಾಗುವ ಸಹಾಯವನ್ನು ಮಾಡುವುದಾಗಿ ವಾಗ್ದಾನಮಾಡಿದನು. ಅವನು ಜೇಮ್ಸಿನ ಪೂರ್ವವೃತ್ತಾಂತವನ್ನೂ ಅವನ ಸಾಹಸಗಳನ್ನೂ ತಿಳಿದಿದ್ದನು. ಅವನ ಬುದ್ಧಿಶಕ್ತಿಯನ್ನೂ ಮಾತೃಭಕ್ತಿಯನ್ನೂ ನೋಡಿ ಸಂತೋಷಪಡುತ್ತ ಅಧ್ಯಕ್ಷನು ಜೇಮ್ಸಿನಲ್ಲಿ ಬಹು ವಿಶ್ವಾಸವನ್ನಿಟ್ಟಿದ್ದನು. ಉಪಾಧ್ಯಾಯನಾಗಲು ತನ್ನಲ್ಲಿ ಶಕ್ತಿಯುಂಟೊ ಇಲ್ಲವೊ ಎಂದು ಜೇಮ್ಸ್ ಸಂದೇಹಪಡುತ್ತಿರಲು ಅಧ್ಯಕ್ಷನು, "ನಿನಗೆ ಉತ್ಕೃಷ್ಟವಾದ ವ್ಯಾಸಂಗವು ನಡೆದಿರುವುದು ಒಂದು ಮುಖ್ಯವಾದ ಅಂಶ. ಅರ್ಥವನ್ನು ಸಮರ್ಥನಮಾಡುವ ಮಾತುಗಳನ್ನು ಜೋಡಿಸಿ ನಿನ್ನ ಅಭಿಪ್ರಾಯಗಳನ್ನು ನೀನು ಹೇಳಬಲ್ಲವನಾಗಿದ್ದೀಯೆ. ಈ ಶಕ್ತಿಯು ಉಪಾಧ್ಯಾಯನಿಗೆ ಆವಶ್ಯಕವಾದುದು. ನಿನ್ನ ಬುದ್ಧಿಯು ಸೂಕ್ಷ್ಮವಿಷಯ

ಗಳನ್ನು ಗ್ರಹಿಸುವ ಸಾಮರ್ಥ್ಯವುಳ್ಳುದು ; ಉಪಾಧ್ಯಾಯನು ಪ್ರಸಿದ್ಧ ನಾಗಲು ಈ ಶಕ್ತಿಯೇ ಕಾರಣ. ಜೊತೆಯವರೊಡನೆ ಹೊಂದಿಕೊಂಡಿರುವ ಸ್ವಭಾವವುಳ್ಳವನಾದುದರಿಂದ ನೀನು ಪಾಠಶಾಲೆಯ ಕೆಲಸವನ್ನು ತೃಪ್ತಿಕರವಾಗಿ ನಡೆಯಿಸುವೆಯೆಂದು ನನಗೆ ಭರವಸೆಯಿದೆ'' ಎಂದು ಹೇಳಿದನು. ಇದನ್ನು ಕೇಳಿ ಜೇಮ್ಸ್ ಸಂತುಷ್ಟನಾಗಿ ತನ್ನ ಸಂಕಲ್ಪವನ್ನು ಸಾಧಿಸಬೇಕೆಂದು ನಿಶ್ಚಯಿಸಿದನು.

ಈ ಕಾಲದಲ್ಲಿ ನಡೆದ ಒಂದು ಸಂಗತಿಯು ಜೇಮ್ಸಿನ ಸುಸ್ವಭಾವವನ್ನು ಪ್ರಕಾಶಪಡಿಸುತ್ತದೆ. ಬೆಲ್ ಎಂಬ ಕೋಪಸ್ವಭಾವವುಳ್ಳ ಒಬ್ಬ ಹುಡುಗನು ಅಪಮರ್ಯಾದೆಯ ಮಾತನ್ನಾಡಿ ಚೆಸ್ಟರ್ ಪಟ್ಟಣದ ಪ್ರಮುಖನೊಬ್ಬನಿಗೆ ಕೋಪವನ್ನುಂಟುಮಾಡಿದನು. ಆ ಪ್ರಮುಖನು ಅಧ್ಯಕ್ಷನಿಗೆ ಈ ವಿಚಾರದಲ್ಲಿ ಒಂದು ಕಾಗದವನ್ನು ಬರೆದನು. ಬೆಲ್ಲಿಗೆ ತಕ್ಕ ದಂಡನೆಯಾಗುವುದೆಂದು ಅನೇಕರು ತಿಳಿದಿದ್ದರು. ಪಾಠಶಾಲೆಗಳಲ್ಲಿ ಹುಡುಗರು ಸಾಮಾನ್ಯವಾಗಿ ನ್ಯಾಯಾನ್ಯಾಯ ವಿಮರ್ಶವೇ ಇಲ್ಲದೆ ಒಕ್ಕಟ್ಟಾಗಿರುವುದುಂಟಷ್ಟೆ! ಈ ಸಂಭವದಲ್ಲಿ ಸುಮಾರು ಇಪ್ಪತ್ತು ಮಂದಿ ವಿದ್ಯಾರ್ಥಿಗಳು ಬೆಲ್ಲನ್ನು ಶಾಲೆಯಿಂದೋಡಿಸಿದರೆ ತಾವೂ ಶಾಲೆಯನ್ನು ಬಿಡುವುದಾಗಿ ನಿರ್ಧರ ಮಾಡಿಕೊಂಡರು ; ತಮ್ಮ ಗುಂಪಿಗೆ ಇತರ ವಿದ್ಯಾರ್ಥಿಗಳನ್ನೂ ಸೇರಿಸಿಕೊಳ್ಳುವುದಕ್ಕೆ ಹೊರಟು, ಜೇಮ್ಸನನ್ನೂ ತಮ್ಮ ಗುಂಪಿಗೆ ಸೇರಬೇಕೆಂದು ಕೇಳಿಕೊಂಡರು. ಜೇಮ್ಸ್ ಅವರನ್ನು ನೋಡಿ, ''ಬೆಲ್ಲನ್ನು ಶಾಲೆಯಿಂದೋಡಿಸಿದರೆ ನಾನೇತಕ್ಕೆ ಶಾಲೆಯನ್ನು ಬಿಡಬೇಕು ?'' ಎಂದು ಪ್ರಶ್ನೆಮಾಡಿದನು. ಉತ್ತರ ಕೊಡುವುದು ಸುಲಭವಾಗಿರಲಿಲ್ಲ. ಆದರೂ ಒಬ್ಬ ವಿದ್ಯಾರ್ಥಿಯು ''ನಮ್ಮ ಅಸಮಾಧಾನವನ್ನು ತೋರಿಸುವುದಕ್ಕೆ'' ಎಂದನು.

ಜೇಮ್ಸ್.—ಏತಕ್ಕೆ ಅಸಮಾಧಾನ ?

ವಿದ್ಯಾರ್ಥಿ.—ಬೆಲ್ಲನ್ನು ಓಡಿಸಿದುದಕ್ಕೆ.

ಜೇಮ್ಸ್.—ಅವನನ್ನು ಓಡಿಸಿಲ್ಲ ; ಪ್ರಾಯಶಃ ಓಡಿಸದೆಯೂ ಇರಬಹುದು.

ವಿದ್ಯಾರ್ಥಿ.—ಬೆಲ್ಲು ಏನೋ ಮಾತನಾಡಿದನಂತೆ ; ಅದರಿಂದ ಆ ಪ್ರಮುಖನಿಗೇನೋ ಅಪಮಾನವಾಯಿತಂತೆ; ಅದೆಲ್ಲ ನಮಗೇಕೆ ? ನಮ್ಮೊಡನಾಡಿಗಳನ್ನು ಕೈಬಿಡಬಾರದಲ್ಲವೆ ?

ಜೇಮ್ಸ್.—ನ್ಯಾಯಾನ್ಯಾಯ ವಿಚಾರವಿಲ್ಲದೆ ಒಕ್ಕಟ್ಟಿರಬೇಕೊ ?

ವಿದ್ಯಾರ್ಥಿ.—ಆವಶ್ಯಕವಿದ್ದಲ್ಲಿ ಇರಬೇಕು.

ಜೇಮ್ಸ್.—ಆ ರೀತಿಯ ನಿಯಮವನ್ನು ಮಾಡುವುದಾದರೆ ನಿಮ್ಮ ಗುಂಪಿಗೆ ನಾನು ಸೇರಲಾರೆನು. ಯಾವ ಹುಡುಗನಾದರೂ ತಪ್ಪು ಮಾಡಿದರೆ, ನ್ಯಾಯ ಮಾರ್ಗವನ್ನು ಬಿಟ್ಟು ಅವನಿಗೆ ನಾನು ಸಹಾಯ ಮಾಡುವುದಿಲ್ಲ.

ವಿದ್ಯಾರ್ಥಿ.—ಬೆಲ್ಲು ಏನೋ ಹರಟಿದರೆ ಆ ಪ್ರಮುಖನು ನಮ್ಮ ಅಧ್ಯಕ್ಷ ನೊಡನೆ ದೂರನ್ನು ಹೇಳಬಹುದೊ ? ಅದು ಅವನ ಯೋಗ್ಯತೆಗೆ ಸರಿಯೊ ?

ಜೇಮ್ಸ್.—ಹೀಗೆ ನೀನು ಹೇಳುವುದು ಸರಿಯಲ್ಲ. ಬೆಲ್ಲು ತನ್ನ ಕೈಯಂತೆಯೇ ನಾಲಗೆಯನ್ನೂ ಸರಿಯಾಗಿ ಉಪಯೋಗಿಸ ಬೇಕು ; ಇಲ್ಲವಾದರೆ ತಕ್ಕ ಶಿಕ್ಷೆಯನ್ನು ಅನುಭವಿಸಲು ಸಿದ್ಧ ನಾಗಿರಬೇಕು.

ವಿದ್ಯಾರ್ಥಿ.—ಸರಿ ! ಏನೋ ಅಜಾಗರೂಕತೆಯಿಂದ ಬೆಲ್ಲು ಮಾತ ನಾಡಿದನು. ಅವನನ್ನು ನಾವು ಕೈಬಿಡಬಾರದು.

ಜೇಮ್ಸ್.—ಅವನು ತನ್ನ ತಪ್ಪನ್ನೊಪ್ಪಿಕೊಂಡು ಕ್ಷಮಾಪಣೆಯನ್ನು ಕೇಳಿದ ಮೇಲೆಯೂ ಅವನಿಗೆ ಶಿಕ್ಷೆಯಾಗುವುದಾದರೆ, ಆಗ ಅವನಿಗೆ ಸಹಾಯ ಮಾಡಲು ನಾನು ಸಿದ್ಧನಾಗಿರುವೆನು.

ವಿದ್ಯಾರ್ಥಿ.—ಈಗ ನಾವು ಪ್ರಯತ್ನಪಟ್ಟಿರುವ ರೀತಿಯು ನಿನ್ನ ಮನಸ್ಸಿಗೆ ಸರಿಯಾಗಿ ತೋರುವುದಿಲ್ಲವೊ ?

ಜೇಮ್ಸ್.—ಇಲ್ಲ ; ಬೆಲ್ಲು ಆ ಪ್ರಮುಖನ ಬಳಿಗೆ ಹೋಗಿ ಕ್ಷಮಾಪಣೆ ಯನ್ನು ಕೇಳಬೇಕು ; ತಪ್ಪಾಯಿತೆಂದೂ, ಇನ್ನು ಮುಂದಕ್ಕೆ

ಹಾಗೆ ಮಾಡುವುದಿಲ್ಲವೆಂದೂ ಶಾಲಾಧ್ಯಕ್ಷನಿಗೆ ಹೇಳಬೇಕು; ಅನಂತರ ಅವನಿಗೆ ಶಿಕ್ಷೆಯಾಗದಂತೆ ನಾವು ನೋಡಿಕೊಳ್ಳಬಹುದು. ಏನನ್ನೂ ಮಾಡದೆ ಸುಮ್ಮನೆ ಕುಳಿತಿದ್ದರೆ ಅವನು ಶಿಕ್ಷೆಯನ್ನು ಅನುಭವಿಸಲೇ ಬೇಕು.

ಶಾಲೆಯಲ್ಲಿ ಹುಡುಗರು ಮಾಡಬೇಕೆಂದಿದ್ದ ದೊಂಬಿಯು ಜೇಮ್ಸನ ನಿಷ್ಪಕ್ಷಪಾತ ಪ್ರವೃತ್ತಿಯಿಂದ ನಿವೃತ್ತಿಯಾಯಿತು. ಜೇಮ್ಸ್ ಸೂಚಿಸಿದಂತೆಯೇ ಬೆಲ್ಲ್ ನಡೆದುಕೊಂಡನು. ಅವನಿಗೆ ಶಿಕ್ಷೆಯೂ ತಪ್ಪಿತು, ಜೇಮ್ಸನ ಕೀರ್ತಿಯೂ ಹಬ್ಬಿತು.

ಜೇಮ್ಸ್ ಬಡಗಿಯ ಕೆಲಸವನ್ನು ಮಾಡಿ ಸಂಪಾದಿಸಿದ ಹಣದಲ್ಲಿ ಉಳಿದ ಹತ್ತು ಡಾಲರುಗಳನ್ನು ತೆಗೆದುಕೊಂಡು ಮಾಗಿಯ ರಜವು ಪ್ರಾರಂಭವಾದ ಕೂಡಲೆ ತನ್ನೂರಿಗೆ ಬಂದು ಸೇರಿದನು.

# ಅಧ್ಯಾಯ ೧೬

## ಪಾಠಶಾಲೆಯ ಕಾರ್ಯ ನಿರ್ವಾಹ

ಗೌಗಾ ವಿದ್ಯಾಶಾಲೆಯಿಂದ ಮನೆಗೆ ಬಂದ ಮರು ದಿನವೇ ಜೇಮ್ಸ್ನು ಸುತ್ತಮುತ್ತಲಿರುವ ಪಾಳೆಯಗಳಲ್ಲಿ ಉಪಾಧ್ಯಾಯನ ಕೆಲಸವನ್ನು ಹುಡುಕಲು ಹೊರಟನು. ತಾಯಿಯು ಭಾವಿಸಿದಂತೆ ಕೆಲಸವು ದೊರೆಯ ಲಿಲ್ಲ. ಒಂದು ಪಾಳೆಯದವರು ಅವನು ಚಿಕ್ಕವನೆಂದೂ, ಇನ್ನೊಂದು ಪಾಳೆಯದವರು ತಮಗೆ ಉಪಾಧ್ಯಾಯನಿರುವನೆಂದೂ, ಮೂರನೆಯ ಪಾಳೆಯದವರು ಚೆಸ್ಟರಿನ ವಿದ್ಯಾಶಾಲೆಯವನೊಬ್ಬನು ತಮ್ಮ ಪಾಠ ಶಾಲೆಯನ್ನು ಹಾಳುಮಾಡಿದುದರಿಂದ ಮತ್ತೆ ಅಲ್ಲಿಯವರು ತಮಗೆ ಬೇಡವೆಂದೂ, ನಾಲ್ಕನೆಯ ಪಾಳೆಯದವರು, "ಒಂದು ವಾರದ ಹಿಂದೆ ಬಂದಿದ್ದರೆ ಚೆನ್ನಾಗಿರುತ್ತಿದ್ದಿತು; ಬ್ರಾಂಚಿನ ಶಿಷ್ಯನಾಗಿರುವವನಿಗೆ ಎಲ್ಲಿಯಾದರೂ ಕೆಲಸವು ದೊರೆಯುವುದು" ಎಂದೂ ಹೇಳಿದರು. ಜೇಮ್ಸ್ನು ಹೀಗೆ ಎರಡು ದಿನಗಳು ಅಲೆದಲೆದು ನಿರುತ್ಸಾಹಿಯಾಗಿ ಮನೆಗೆ ಬಂದು ತಾಯಿಯೊಡನೆ, "ಎಲ್ಲಿಯೂ ಕೆಲಸ ದೊರೆಯಲಿಲ್ಲ. ಅನೇಕರು ಉಪಾಧ್ಯಾಯನನ್ನು ನಿಯಮಿಸಿಕೊಂಡಿದ್ದಾರೆ. ನಾನು ಯಾರಿಗೂ ಬೇಡವಾಗಿದ್ದೇನೆ" ಎಂದು ತಿಳಿಸಿದನು.

ಎಲಿಜೆ.— "ಮಗೂ! ವ್ಯಥೆಪಡಬೇಡ. ಇದುವರೆಗೂ ಎಷ್ಟೋ ವಿಘ್ನಗಳನ್ನು ನೀನು ಗೆಲ್ಲಲಿಲ್ಲವೆ? ದೇವರು ನಿನ್ನ ಶ್ರೇಯೋಭಿ ವೃದ್ಧಿಗಾಗಿಯೇ ಹೀಗೆ ಮಾಡಿರಬಹುದು. ಈಗ ಬಳಲಿ ಬಂದಿರುತ್ತೀಯೆ; ನಾಳೆ ನಿಮ್ಮ ಸೋದರ ಮಾವನಾದ ಏಮಾಸಿನೊಡನೆ ಮುಂದಿನ ಕರ್ತವ್ಯ ವನ್ನು ಆಲೋಚನೆ ಮಾಡಬಹುದು."

ಮರು ದಿನ ಪ್ರಾತಃಕಾಲದಲ್ಲಿ, ಜೇಮ್ಸ್ನು ಇನ್ನೂ ಮಲಗಿರು ವಾಗಲೆ, ನೆರೆಯ ಪಾಳೆಯದ ದೊಡ್ಡಮನುಷ್ಯನೊಬ್ಬನು ಗಾಡಿಯಲ್ಲಿ ಕುಳಿತು ಬಂದು ಮನೆಯ ಮುಂದಿಳಿದು, ಎಲಿಜೆಯನ್ನು ಕೂಗಿದನು. ಎಲಿಜೆಯು ಒಡನೆಯೇ ಬಾಗಿಲ ಬಳಿಗೆ ಬಂದು ನಿಲ್ಲಲು ಆತನು, "ಅಮ್ಮಾ! ನಿಮ್ಮ ಮಗನೆಲ್ಲಿ?" ಎಂದು ಕೇಳಿದನು.

ಎಲಿಜೆ.—ಮಲಗಿದ್ದಾನೆ, ಎಬ್ಬಿಸಲೆ?

ಗೃಹಸ್ಥ.—ಲೆಡ್ಜ್ ಎಂಬ ಪಾಳೆಯದಲ್ಲಿರುವ ಪಾಠಶಾಲೆಗೆ ಈ ಮಾಗಿಯಲ್ಲಿ ಪಾಠ ಹೇಳುವುದಕ್ಕೆ ಜೇಮ್ಸ್ ಉಪಾಧ್ಯಾಯನಾಗಿರಲು ಇಷ್ಟ ಪಡುವನೊ?

ಆಗ ತಾನೆ ಎದ್ದಿದ್ದ ಜೇಮ್ಸ್ನ ಕಿವಿಗೆ 'ಪಾಠಶಾಲೆ' ಎಂಬ ಶಬ್ದವು ಕೇಳಬಂದೊಡನೆಯೇ, ದೇವರೇ ಆ ಮಹಸೀಯನನ್ನು ಕಳುಹಿಸಿರಬೇಕೆಂದು ಭಾವಿಸಿ, ಅವನು ಹಾಸಿಗೆಯನ್ನು ಬಿಟ್ಟು ಥಟ್ಟನೆ ಎದ್ದು ಬಂದು ಆತನೆದುರಿಗೆ ನಿಂತನು.

ಗೃಹಸ್ಥ.—ನಮ್ಮ ಪಾಠಶಾಲೆಗೆ ಉಪಾಧ್ಯಾಯನಾಗಲು ಒಪ್ಪುವೆಯಾ?

ಜೇಮ್ಸ್.—ನನಗೆ ಪಾಠಶಾಲೆಯ ಕೆಲಸವೇನೊ ಬೇಕು. ಆದರೂ ನಿಮ್ಮ ಪಾಳೆಯದ ಹುಡುಗರು ತುಂಟರು; ನನಗಿರುವ ಸಂದೇಹವು ಅದೊಂದೇ.

ಗೃಹಸ್ಥ.—ನಿಜ, ಬಲು ತುಂಟರು.

ಜೇಮ್ಸ್.—ಅಲ್ಲಿ ಪಾಠ ಹೇಳುವುದು ಸುಲಭವಲ್ಲ. ನಿಮ್ಮ ಹುಡುಗರೆಲ್ಲರೂ ನನ್ನನ್ನು ಚೆನ್ನಾಗಿ ಬಲ್ಲರು. ನನ್ನಿಂದ ಈ ಕೆಲಸವು ಸಾಧ್ಯವಾದೀತೆ?

ಗೃಹಸ್ಥ.—ನಮ್ಮ ಹುಡುಗರಿಗೆ ನಿನ್ನ ಯೋಗ್ಯತೆಯು ಚೆನ್ನಾಗಿ ಗೊತ್ತಿದೆ; ಬೇಕೆಂದರೆ ತಕ್ಕ ಪ್ರಾಯಶ್ಚಿತ್ತವನ್ನು ಅವರಿಗೆ ಮಾಡಲು ನಿನಗೆ ಶಕ್ತಿಯಿರುವುದೆಂದೂ ಅವರು ಬಲ್ಲರು. ಇದುವರೆಗೆ ಆ ಹುಡುಗರು ಚಳಿಗಾಲದಲ್ಲಿ ಇಬ್ಬರು ಉಪಾಧ್ಯಾಯರನ್ನು ಓಡಿಸಿ ಬಿಟ್ಟಿರುತ್ತಾರೆ. ಇನ್ನೇನು ಮಾಡದಿದ್ದರೂ ಅವರ ತುಂಟಾಟವನ್ನು ನಿಲ್ಲಿಸುವ ಉಪಾಧ್ಯಾಯನು ನಮಗೆ ಸಿಕ್ಕಿದರೆ ಸಾಕು. ನಿನಗೆ ಸರದಿಯ ಮೇರೆಗೆ ಊಟವುಪಚಾರಗಳು ನಡೆಯುವುವಲ್ಲದೆ ತಿಂಗಳಿಗೆ ಹನ್ನೆರಡು ಡಾಲರು ಸಂಬಳವೂ ಕೈಗೆ ಸಿಕ್ಕುವುದು. ನೀನು ಬರಲು ಒಪ್ಪುವೆಯಾ?

ಯಾವ ಉತ್ತರವನ್ನು ಹೇಳಬೇಕೊ ತಿಳಿಯದೆ ಜೇಮ್ಸ್ ಸಂದೇಹ ಪಡುತ್ತಿರುವ ವೇಳೆಯಲ್ಲಿ ಎಲಿಜಿಯು, "ಈ ಪ್ರಸ್ತಾವವು ಅಕಸ್ಮಾತ್ತಾಗಿ ಬರೆದಿರುವುದರಿಂದ ಜೇಮ್ಸ್ ಪರ್ಯಾಲೋಚಿಸಿ ನಾಳೆಯ ದಿನ ಉತ್ತರವನ್ನು ಹೇಳಬಹುದೆ?" ಎಂದು ಆ ಗೃಹಸ್ಥನನ್ನು ಕೇಳಿದಳು. "ಸರಿ, ಹಾಗೆ ಮಾಡುತ್ತೇನೆ" ಎಂದು ಜೇಮ್ಸ್ ಹೇಳಿದನು. "ಆಗಬಹುದು; ನೀನು ಒಪ್ಪಿಕೊಳ್ಳುವೆಯೆಂದು ನನಗೆ ನಂಬಿಕೆಯಿದೆ" ಎಂದು ಹೇಳಿ ಗೃಹಸ್ಥನು ಹೊರಟುಹೋದನು. ಅನಂತರ ಜೇಮ್ಸ್ ತಾಯಿಯನ್ನು ನೋಡಿ, "ನಾನು ಮೊದಲು, ಅಪರಿಚಿತರಿರುವ ಸ್ಥಳದಲ್ಲಿ ಪಾಠವನ್ನು ಹೇಳಬೇಕೆಂದು ಆಲೋಚಿಸಿದ್ದೆನು. ಅಮ್ಮಾ! ದೇವರು ನನಗೆ ಒಳ್ಳೆಯದನ್ನು ಮಾಡಬೇಕೆಂದು ಇಟ್ಟಿರುವುದು ಇದೇನೊ?" ಎಂದು ಕೇಳಿದನು.

ಎಲಿಜಿಯು, "ಇರಬಹುದು, ಆ ತುಂಟ ಹುಡುಗರ ಶಾಲೆಯಲ್ಲಿ ನೀನು ಶಕ್ತನೆಂದು ಹೆಸರು ಪಡೆದರೆ ಪ್ರಸಿದ್ಧನಾದ ಉಪಾಧ್ಯಾಯನಾಗುವೆ. ಅನಂತರ ಕೆಲಸವು ತಾನಾಗಿಯೇ ನೀನಿದ್ದೆಡೆಗೆ ಬರುವುದು. ಇದೇ ದೈವೇಚ್ಛೆಯಾಗಿಯೂ ಇರಬಹುದು" ಎಂದು ಸಮಾಧಾನ ಹೇಳಿದಳು. ತಾಯಿಯ ಜಾಣತನವನ್ನು ನೋಡಿ ಜೇಮ್ಸ್ ತಲೆದೂಗಿದನು. ತಾಯಿಯಂತೆಯೇ ಸೋದರ ಮಾವನಾದ ಏಮಾಸೂ ಅಭಿಪ್ರಾಯಪಡಲು ಜೇಮ್ಸ್ ತುಂಟ ಹುಡುಗರ ಊರಿನಲ್ಲಿ ಉಪಾಧ್ಯಾಯನಾಗಿರಲು ಒಪ್ಪಿಕೊಂಡನು. ಈ ಸುದ್ದಿ ಎಲ್ಲ ಹುಡುಗರಿಗೂ ತಿಳಿಯಬಂದಿತು. ಅವರಲ್ಲಿ ಕೆಲವರು ಜೇಮ್ಸನನ್ನು ಶಕ್ತನೆಂದು ಒಪ್ಪಿದರು, ಮತ್ತೆ ಕೆಲವರು ಒಪ್ಪಲಿಲ್ಲ. ಜೇಮ್ಸ್ ಬುದ್ಧಿವಂತನಾಗಿಯೂ ಧೈರ್ಯಶಾಲಿಯಾಗಿಯೂ ಇರುವನೆಂದೂ, ಸಾಮಾನ್ಯರಾದ ಉಪಾಧ್ಯಾಯರಿಗಿಂತ ಜಾಣನೆಂದೂ, ತಾವು ಸರಿಯಾಗಿ ನಡೆದುಕೊಳ್ಳದಿದ್ದರೆ ತಮ್ಮೆಲ್ಲರನ್ನೂ ಬಲಿ ಹಾಕುವನೆಂದೂ ಬಹು ಮಂದಿ ಹುಡುಗರು ಅಭಿಪ್ರಾಯಪಟ್ಟಿದ್ದರು. ಉಪಾಧ್ಯಾಯನ ಕೆಲಸಕ್ಕೆ ಹೊರಡುವಾಗ ಜೇಮ್ಸ್, "ಅಮ್ಮಾ! ಈ ದಿನವೇ ನಾನು ಹಿಂದಕ್ಕೆ ಬಂದರೂ ಬಂದೇನು; ಆ ಹುಡುಗರು ನನ್ನನ್ನು ಓಡಿಸಲೂ ಬಹುದು" ಎಂದನು.

"ಆ ಭಯವೇನೂ ಇಲ್ಲ; ನೀನು ಒಳ್ಳೆಯ ಹೆಸರನ್ನು ಪಡೆಯುವುದರಲ್ಲಿ ಸಂಶಯವಿಲ್ಲ" ಎಂದು ಎಲಿಜೆಯು ಅವನನ್ನು ಪ್ರೋತ್ಸಾಹಗೊಳಿಸಿದಳು. ಸಾಧ್ಯವಾಗುವ ವರೆಗೂ ಹುಡುಗರನ್ನು ಹೊಡೆಯದೆ ನ್ಯಾಯ ಮಾರ್ಗವನ್ನು ಬಿಡದೆ ದಯಾಪರನಾಗಿ ವಿವೇಕದಿಂದ ಶಾಲೆಯನ್ನು ನಡೆಯಿಸಬೇಕೆಂದು ಜೇಮ್ಸ್ ಮನಸ್ಸಿನಲ್ಲಿ ನಿರ್ಧರಿಸಿಕೊಂಡಿದ್ದನು. ಪ್ರಾರಂಭದಲ್ಲಿಯೇ ನೂರಾರು ನಿಯಮಗಳನ್ನು ವಿಧಿಸದೆ ಪಾಠಶಾಲೆಯನ್ನಾರಂಭಿಸಿ, ಹುಡುಗರನ್ನು ಕುರಿತು, "ಮಿತ್ರರೇ! ನಿಮ್ಮ ವ್ಯಾಸಂಗಕ್ಕೆ ಸಹಕಾರಿಯಾಗಿರಲು ನಾನು ಬಂದಿರುತ್ತೇನೆ. ಶಾಲೆಯ ಉದ್ದೇಶಗಳೂ ಉಪಯೋಗವೂ ನಿಮಗೆ ತಿಳಿದೇ ಇವೆ. ನೀವು ಶ್ರದ್ಧಾಪೂರ್ವಕವಾಗಿ ವ್ಯಾಸಂಗವನ್ನು ಮಾಡಿದರೆ ನಿಮ್ಮ ಶ್ರಮವು ಸಾರ್ಥಕವಾಗಿ ನೀವೂ ವಿದ್ಯಾವಂತರಾಗುವಿರಿ; ಈ ಶಾಲೆಯ ಹೆಸರೂ ಉನ್ನತ ಸ್ಥಿತಿಗೆ ಬರುವುದು. ಇವುಗಳಿಗಾಗಿ ನಾನು ಸರ್ವ ಪ್ರಯತ್ನವನ್ನೂ ಮಾಡುತ್ತೇನೆ; ನೀವೂ ಸಹಾಯ ಮಾಡಬೇಕು. ನಾವೆಲ್ಲರೂ ಸೌಹಾರ್ದದಿಂದಿದ್ದು ಶಾಲೆಗೆ ಕೀರ್ತಿಯನ್ನು ತರಲು ಪ್ರಯತ್ನಮಾಡೋಣ" ಎಂದು ಹೇಳಿದನು. ಈ ಭಾಷಣವನ್ನು ಕೇಳಿ ಎಲ್ಲರೂ ಸಂತುಷ್ಟರಾದರು. ದೊಡ್ಡ ಹುಡುಗರಿಗೆ ಮೊದಲೇ ಜೇಮ್ಸನ ಪರಿಚಯವಿದ್ದಿತು. ಈಗ ಎಲ್ಲರೂ ಉತ್ಸಾಹ ಭರಿತರಾಗಿ ಅವನ ಅಭಿಪ್ರಾಯದಂತೆ ನಡೆಯಲು ಒಪ್ಪಿದರು. ದುಷ್ಟರೆಂದು ಪ್ರಸಿದ್ಧರಾಗಿದ್ದವರು ವಿಧೇಯರಾಗಿ ವಿದ್ಯೆಯನ್ನು ಕಲಿಯಲಾರಂಭಿಸಿದರು. ಅವರ ಕುಚೋದ್ಯ ಮುಂತಾದುವು ಮಾಯವಾದುವು. ಪಾಠಶಾಲೆಯ ಪ್ರಯೋಜನವು ಎಲ್ಲರಿಗೂ ಗೋಚರವಾಯಿತು.

ಜೇಮ್ಸ್ ಹುಡುಗರ ಜೊತೆಗೆ ಆಟಗಳಲ್ಲಿಯೂ ಸೇರಿ ಅವರು ಕೆಟ್ಟ ಮಾತುಗಳಾಡುವುದನ್ನು ತಪ್ಪಿಸಿ ಅವರನ್ನು ಸನ್ಮಾರ್ಗಕ್ಕೆ ತಂದನು. ಹುಡುಗರೊಡನೆ ಎಷ್ಟು ಸರಳವಾಗಿದ್ದರೂ ಅವನನ್ನು ಕಂಡರೆ ಎಲ್ಲರಿಗೂ ಪ್ರೀತಿಯೂ ಗೌರವವೂ ಭಯವೂ ಇದ್ದುವು. ಪೂರ್ವ ಪದ್ಧತಿಯಂತೆ ಜೇಮ್ಸ್ ಸರದಿಯ ಮೇರೆಗೆ ಮನೆ ಮನೆಗೆ ಊಟಕ್ಕೆ ಹೋಗುತ್ತಿದ್ದನು. ಇದರಿಂದಲೂ ಹುಡುಗರಿಗೆ ಬಹಳ ಪ್ರಯೋಜನ.

ವುಂಟಾಯಿತು. ಜೇಮ್ಸ್‌ನ ಸದ್ಗುಣ ಪ್ರಭಾವದಿಂದ ಅವನ ಜೊತೆಯಲ್ಲಿದ್ದವರೂ ಸಜ್ಜನರಾಗುತ್ತ ಬಂದರು. ಅವನು ಹುಡುಗರಿಗೆ ಕಷ್ಟವಾದ ವಿಷಯಗಳನ್ನು ಚೆನ್ನಾಗಿ ವಿವರಿಸಿ ತಿಳಿಸುತ್ತಿದ್ದುದರಿಂದ ಹುಡುಗರ ವಿಶ್ವಾಸಕ್ಕೂ, ಸಾಯಂಕಾಲಗಳಲ್ಲಿ ರಸವತ್ತಾದ ಕಥೆಗಳನ್ನು ಮನೋಹರವಾಗುವಂತೆ ಹೇಳುತ್ತಿದ್ದುದರಿಂದ, ಮನೆಯವರ ವಿಶ್ವಾಸಕ್ಕೂ ಪಾತ್ರನಾಗಿದ್ದನು.

ಪ್ರತಿ ಭಾನುವಾರವೂ ಜೇಮ್ಸ್ ತನ್ನ ಮನೆಗೆ ಬರುತ್ತಿದ್ದನು. ದಿನ ದಿನಕ್ಕೆ ಅವನಲ್ಲಿ ದೈವ ಭಕ್ತಿಯು ಹೆಚ್ಚಿತು. "ನಮ್ಮ ತಾಯಿ ಹೇಳುವ ಮಾತು ಸತ್ಯ: ಯಾವಾಗಲೂ ನಮ್ಮನ್ನು ಸಲಹುತ್ತ ನಮ್ಮ ಕ್ಷೇಮ ಚಿಂತನೆಯನ್ನು ಮಾಡುತ್ತಿರುವವನು ದೇವರೇ. ನಾವು ದೈವೇಚ್ಛೆಯನ್ನು ಮೀರದೆ ಕರ್ತವ್ಯ ಪರಾಯಣರಾಗಿರಬೇಕು" ಎಂದು ಜೇಮ್ಸ್ ಹೇಳಿಕೊಳ್ಳುತ್ತಿದ್ದನು.

ಚಳಿಗಾಲವು ಕಳೆಯಿತು. ಜೇಮ್ಸ್‌ನ ಶಾಲೆಯ ಕೆಲಸವು ಬಹು ತೃಪ್ತಿಕರವಾಗಿ ನಡೆಯಿತು. "ಇಂತಹ ಉಪಾಧ್ಯಾಯನು ಇದುವರೆಗೂ ಇಲ್ಲಿಗೆ ಬಂದಿರಲಿಲ್ಲ" ಎಂದು ಹುಡುಗರೂ ದೊಡ್ಡವರೂ ಹೇಳಿದರು.

ಜೇಮ್ಸ್ ಚೆಸ್ಟರಿನ ವಿದ್ಯಾಶಾಲೆಗೆ ಮರಳಿ ಹೋದನು. ಮೊದಲೇ ಗೊತ್ತುಮಾಡಿಕೊಂಡಿದ್ದಂತೆ ಅವನು ಬಡಗಿಯ ಮನೆಯಲ್ಲಿ ಕೆಲಸ ಮಾಡಿಕೊಂಡು ಅಲ್ಲಿಯೇ ಊಟಮಾಡುತ್ತಿದ್ದನು. ಒಂದು ದಿನದ ಕೂಲಿಯು ಒಂದು ವಾರದ ಊಟದ ವೆಚ್ಚಕ್ಕೆ ಸರಿಯಾಗುತ್ತಿದ್ದಿತು. ಆ ಎರಡನೆಯ ವರ್ಷದಲ್ಲಿಯೂ ಜೇಮ್ಸ್ ಎಂದಿನಂತೆ ಶ್ರದ್ಧೆಯಿಂದ ವ್ಯಾಸಂಗ ಮಾಡಿ ಆ ವರ್ಷದ ಚಳಿಗಾಲದಲ್ಲಿ ತಿಂಗಳಿಗೆ ಹದಿನಾರು ಡಾಲರುಗಳ ಸಂಬಳದ ಮೇರೆಗೆ ಒಂದು ಪಾಳೆಯದ ಪಾಠಶಾಲೆಗೆ ಉಪಾಧ್ಯಾಯನಾದನು. ಅವನ ಕೆಲಸವು ನಿರ್ವಿಘ್ನವಾಗಿ ನಡೆದುದರಿಂದ ಅವನಿಗೆ ಕೀರ್ತಿಯು ಬಂದಿತು. ಆ ಕಾಲದಲ್ಲಿ ನಡೆದ ಒಂದು ಸಂಗತಿಯನ್ನು ಇಲ್ಲಿ ತಿಳಿಸಬೇಕಾಗಿದೆ.

ಆ ಪಾಳೆಯದಲ್ಲಿ ಜೇಮ್ಸ್ ಉಪಾಧ್ಯಾಯನಾಗಿದ್ದಾಗ ಒಬ್ಬ ಹುಡುಗನು ತನಗೆ ರೇಖಾ ಗಣಿತವನ್ನು ಹೇಳಿಕೊಡಬೇಕೆಂದು ಜೇಮ್ಸ್‌ನನ್ನು ಕೇಳಿದನು. ಜೇಮ್ಸ್ ರೇಖಾ ಗಣಿತವನ್ನು ಕಲಿತಿರಲಿಲ್ಲ. ಆದರೂ ಆ ನ್ಯೂನತೆಯನ್ನು ಹುಡುಗನಿಗೆ ತಿಳಿಸದೆ ಜೇಮ್ಸ್ ರಾತ್ರಿಯ ಕಾಲದಲ್ಲಿ ರೇಖಾ ಗಣಿತವನ್ನು ವ್ಯಾಸಂಗ ಮಾಡಿ, ಪ್ರಾತಃಕಾಲದಲ್ಲಿ ಅದನ್ನು ಹುಡುಗನಿಗೆ ಹೇಳಿಕೊಡುತ್ತಿದ್ದನು. ಅದರಿಂದ, ಮುಂದಿನ ವರ್ಷ ಕಲಿಯಬೇಕಾಗಿದ್ದ ಆ ಶಾಸ್ತ್ರವನ್ನು ಆ ವರ್ಷವೇ ಕಲಿಯಬೇಕಾಗಿ ಬಂದು ಮುಂದಿನ ವರ್ಷ ಬೇರೆಯ ವ್ಯಾಸಂಗವನ್ನು ಮಾಡುವುದಕ್ಕೆ ಅವನಿಗೆ ಅವಕಾಶ ದೊರೆಯಿತು.

## ಅಧ್ಯಾಯ ೧೭

# ಗೌಗಾ ಶಾಲೆಯ ಮೂರನೆಯ ವರ್ಷದ ವ್ಯಾಸಂಗ

ಚೆಸ್ಟರಿನ ವಿದ್ಯಾಶಾಲೆಯಲ್ಲಿ ಜೇಮ್ಸ್‌ಗೆ ಎರಡು ವರ್ಷಗಳು ಕಳೆದುವು. ಮೂರನೆಯ ವರ್ಷ ಅವನಿಗೆ ಹೊಸ ಗೆಳೆಯನೊಬ್ಬನು ಸಿಕ್ಕಿದನು. ಆತನು ನ್ಯೂಇಂಗ್ಲೆಂಡ್ ಕಾಲೇಜಿನಲ್ಲಿ ಓದಿ, ಬಿ.ಎ. ಪರೀಕ್ಷೆಯನ್ನು ಕೊಟ್ಟಿದ್ದನು. ಕಾಲೇಜಿನಲ್ಲಿ ಓದುವ ಆಲೋಚನೆಯು ಜೇಮ್ಸ್‌ಗೆ ಈಗಿನ ವರೆಗೂ ಹುಟ್ಟಿರಲಿಲ್ಲ; ತನ್ನ ಬಡತನಕ್ಕೆ ಅದು ಸಾಧ್ಯವೇ ಅಲ್ಲವೆಂದು ಭಾವಿಸಿದ್ದನು. "ನಿನಗೆ ಅದು ಸಾಧ್ಯ; ಅನೇಕ ವಿದ್ಯಾರ್ಥಿಗಳು ಹಣವನ್ನು ಸಂಪಾದಿಸಿಕೊಂಡು ಓದುತ್ತಿದ್ದುದನ್ನು ನಾನೇ ಬಲ್ಲೆನು; ಕೆಲವು ಕಾಲದ ವರೆಗೆ ನಾನೂ ಹಾಗೆಯೇ ಮಾಡಿದೆನು" ಎಂದು ಆ ಗೆಳೆಯನು ಹೇಳಿದನು.

ಜೇಮ್ಸ್.—ನನಗೆ ಸಾಧ್ಯವಾಗುವುದು ಹೇಗೆ?

ಗೆಳೆಯ.—ನ್ಯೂ ಇಂಗ್ಲೆಂಡಿನ ಹಲವು ಕಾಲೇಜುಗಳಲ್ಲಿ ಬಡ ಹುಡುಗರ ಸಹಾಯಕ್ಕೆಂದು ನಿಧಿಗಳನ್ನು ಏರ್ಪಡಿಸಿರುತ್ತಾರೆ. ಕೊಂಚ ಮಟ್ಟಿಗೆ ಅದರ ಸಹಾಯವು ನಿನಗೆ ದೊರೆಯಬಹುದು. ಕಾಲೇಜಿನ ವಿದ್ಯಾರ್ಥಿಗಳಿಗೆ ಮಾಗಿಯ ಕಾಲದಲ್ಲಿ ಉಪಾಧ್ಯಾಯನ ಕೆಲಸವು ಬಹು ಸುಲಭವಾಗಿ ದೊರೆಯುವುದು.

ಜೇಮ್ಸ್.—ಬಡಹುಡುಗರಿಗೆ ಒಟ್ಟು ವೆಚ್ಚವೆಷ್ಟಾಗಬಹುದು?

ಗೆಳೆಯ.—ಬಟ್ಟೆಬರೆಯ ವೆಚ್ಚವನ್ನು ಬಿಟ್ಟು ಪಕ್ಷಕ್ಕೆ ಇನ್ನೂರು ಡಾಲರುಗಳು ಸಾಕು. ಆದರೆ ಮಿತವ್ಯಯದ ಗುಟ್ಟನ್ನು ತಿಳಿದುಕೊಂಡಿರಬೇಕು.

ಜೇಮ್ಸ್.—ಸ್ವಾನುಭವದಿಂದ ನಾನು ಆ ಗುಟ್ಟನ್ನು ತಿಳಿದಿದ್ದೇನೆ.

ಗೆಳೆಯ.—ಚಿಲ್ಲರೆ ಕೆಲಸಗಳು ಆಗಾಗ ಸಿಕ್ಕುತ್ತವೆ; ಅವುಗಳನ್ನು ಮಾಡಿ ಹಣವನ್ನು ಸಂಪಾದಿಸಬಹುದು. ಬೇಸಗೆಯಲ್ಲಿ ಒಬ್ಬ ಹುಡುಗನು ಒಬ್ಬನ ತೋಟವನ್ನು ವ್ಯವಸಾಯ ಮಾಡಿ ಪುಷ್ಕಳವಾಗಿ

ಹಣವನ್ನು ಸಂಪಾದಿಸಿದನು. ಇನ್ನೊಬ್ಬ ಹುಡುಗನು ಒಬ್ಬ ಧನಿಕನ ಮಗನಿಗೆ ಪಾಠವನ್ನು ಹೇಳಿಕೊಟ್ಟು ಹಣವನ್ನು ಸಂಪಾದಿಸಿದನು. ಮತ್ತೊಬ್ಬ ಹುಡುಗನು ಬಡಗಿಯ ಕೆಲಸವನ್ನು ಮಾಡಿ ತನ್ನ ವೆಚ್ಚಕ್ಕೆ ಬೇಕಾಗುವ ಹಣದಲ್ಲಿ ಅರ್ಧವನ್ನು ಸಂಪಾದಿಸಿಕೊಂಡನು.

ಜೇಮ್ಸ್.—ಕಾಲೇಜಿಗೆ ಸೇರುವುದಕ್ಕೆ ನಾನಿನ್ನೆಷ್ಟು ವರ್ಷಗಳು ಓದಬೇಕು? ಕಾಲೇಜಿನಲ್ಲಿ ಬಿ.ಎ. ಪರೀಕ್ಷೆಯನ್ನು ಕೊಡುವುದಕ್ಕೆ ಎಷ್ಟು ವರ್ಷಗಳು ಬೇಕು?

ಗೆಳೆಯ.—ಕಾಲೇಜಿಗೆ ಸೇರುವುದಕ್ಕೆ ನಾಲ್ಕು ವರ್ಷ, ಕಾಲೇಜಿನಲ್ಲಿ ಓದುವುದು ನಾಲ್ಕು ವರ್ಷ. ಆದರೆ ಮೇಧಾವಿಗಳು ಒಂದೆರಡು ವರ್ಷಗಳನ್ನು ಕಡಿಮೆ ಮಾಡಿಕೊಳ್ಳುತ್ತಾರೆ. ಬಡವರು ಕೆಲವರು ಕಾಲೇಜಿನಲ್ಲಿ ಎರಡು ವರ್ಷಗಳ ವರೆಗೆ ಓದಿ, ಆಮೇಲೆ ಒಂದು ವರ್ಷದ ವರೆಗೆ ಉಪಾಧ್ಯಾಯರಾಗಿ ಹಣವನ್ನು ಸಂಪಾದಿಸಿಕೊಂಡು, ಮುಂದಿನ ವ್ಯಾಸಂಗವನ್ನು ಪೂರಯಿಸುತ್ತಾರೆ. ಮತ್ತೆ ಕೆಲವರು ಧನಿಕರಿಂದ ಸಾಲವನ್ನು ತೆಗೆದುಕೊಂಡು ವ್ಯಾಸಂಗ ಮಾಡಿ ವಿದ್ವಾಂಸರಾಗಿ ಆಮೇಲೆ ತಮಗೆ ಬರುವ ದೊಡ್ಡ ಸಂಬಳದಿಂದ ಸಾಲವನ್ನು ತೀರಿಸುತ್ತಾರೆ.

ಜೇಮ್ಸ್.—ಈ ವಿಷಯಗಳು ನನಗೆ ತಿಳಿದಿರಲಿಲ್ಲ. ನಾನೂ ಪ್ರೌಢ ವಿದ್ಯಾಭ್ಯಾಸವನ್ನು ಮಾಡಬಹುದೆಂದು ತೋರುತ್ತದೆ.

ಗೆಳೆಯ.—ಸಂದೇಹಪಡಬೇಡ. ನೀನು ಹೋಗಿ ಓದು; ಇದಕ್ಕಾಗಿ ನೀನೆಂದೂ ವ್ಯಸನಪಡುವಂತಾಗುವುದಿಲ್ಲ. ಪ್ರೌಢ ವಿದ್ಯೆಯಿಂದ ನಿನಗೆ ಲಾಭವೂ ಉಂಟು, ಕೀರ್ತಿಯೂ ಉಂಟು. ಜನರು ನಿನ್ನನ್ನು ಸನ್ಮಾನಿಸುವರು. ವಿದ್ವಾಂಸನು ಪೂಜ್ಯ ಪುರುಷ.

ಜೇಮ್ಸ್.—ಹಾಗೆಯೇ ಮಾಡುತ್ತೇನೆ.

ಕಾಲೇಜಿನಲ್ಲಿ ವ್ಯಾಸಂಗ ಮಾಡಬೇಕೆಂದು ನಿಶ್ಚಯಿಸಿದ ಕೂಡಲೆ ಜೇಮ್ಸ್ ಲ್ಯಾಟಿನ್ ಮತ್ತು ಗ್ರೀಕ್ ಭಾಷೆಗಳನ್ನು ಕಲಿಯುವುದಕ್ಕೆ

ಪ್ರಾರಂಭಿಸಿದನು. ಇಂಗ್ಲಿಷ್ ಭಾಷೆಯಲ್ಲಿ ಸಂಪೂರ್ಣವಾದ ಪಾಂಡಿತ್ಯ ವನ್ನು ಸಂಪಾದಿಸುವುದಕ್ಕೆ ಈ ಭಾಷೆಗಳ ಪರಿಚಯವೂ ಆವಶ್ಯಕ. ಈ ಮೂರನೆಯ ವರ್ಷದಲ್ಲಿ ಜೇಮ್ಸ್ ಡಿಸೈಪಲ್ಸ್ ಎಂಬ ಕ್ರೈಸ್ತ ಪಂಗಡಕ್ಕೆ ಸೇರಿ ವಿದ್ಯಾಶಾಲಾಧ್ಯಕ್ಷನಾದ ಬ್ರಾಂಚಿಗೆ ಬೈಬಲ್ಲಿನ ಪ್ರಸಂಗದ ಕಾರ್ಯ ದಲ್ಲಿ ಸಹಾಯ ಮಾಡುವುದಕ್ಕೆ ಪ್ರಾರಂಭಿಸಿದನು; ಪ್ರಾರ್ಥನಾ ನಿಲಯ ದಲ್ಲಿ ಅನೇಕ ವೇಳೆ ಧರ್ಮ ಪ್ರವಚನಗಳನ್ನು ಮಾಡತೊಡಗಿದನು. ಜೇಮ್ಸನ ಧರ್ಮ ಪ್ರವಚನವು ಸರ್ವರಿಗೂ ಸಂತೋಷವನ್ನುಂಟು ಮಾಡುತ್ತಿದ್ದಿತು. ಬ್ರಾಂಚು ಜೇಮ್ಸನ ಪ್ರವಚನಗಳನ್ನು ವಿಶೇಷ ವಾಗಿ ಶ್ಲಾಘಿಸುತ್ತಿದ್ದನು. ಜೇಮ್ಸ್ ಧರ್ಮೋಪದೇಶಕನಾಗುವ ನೆಂದು ಅನೇಕರು ಹೇಳತೊಡಗಿದರು.

ಒಬ್ಬ ಗೆಳೆಯನೊಡನೆ ಜೇಮ್ಸ್, "ಇದೇನು! ನಾನು ಧರ್ಮೋಪ ದೇಶಕನಾಗುವೆನೆಂದು ಎಲ್ಲರೂ ಹೇಳುತ್ತಿರುವರು!" ಎಂದು ಪ್ರಶ್ನೆ ಮಾಡಿದನು. "ಆ ಕೆಲಸಕ್ಕೆ ನೀನು ಅರ್ಹನಾಗಿರುವಂತೆ ಅವರು ಭಾವಿ ಸಿರುತ್ತಾರೆ. ನೀನು ಯಾವ ಕೆಲಸವನ್ನು ಮಾಡಬೇಕೆಂದು ನಿಶ್ಚಯಿ ಸಿದ್ದೀಯೆ?" ಎಂದು ಗೆಳೆಯನು ಕೇಳಲು, ಜೇಮ್ಸ್, "ಈಗಲೇ ನಿಶ್ಚ ಯಿಸುವುದು ನನಗೆ ಸಾಧ್ಯವಲ್ಲ; ಆ ಕಾಲವು ಬರಲಿ, ನೋಡೋಣ. ಧರ್ಮೋಪದೇಶಕನಾಗಬೇಕೆಂದು ನನಗೆ ಆಸೆಯಿದೆ, ಉಪಾಧ್ಯಾಯ ನಾಗಬೇಕೆಂದೂ ಆಸೆಯಿದೆ; ನಾನೇತಕ್ಕೆ ವಕೀಲನಾಗಬಾರದು ಎಂಬ ಆಲೋಚನೆಯೂ ಆಗಾಗ ತೋರುವುದು; ವೈದ್ಯನಾಗಲು ನನಗೆ ಮನ ಸ್ಸಿಲ್ಲ. ಇರಲಿ! ದೈವೇಚ್ಛೆಯಿದ್ದಂತೆ ನಡೆಯಲಿ! ಇರುವ ಅನುಕೂಲ್ಯ ಗಳನ್ನು ತೊರೆಯಬಾರದು" ಎಂದು ಉತ್ತರಕೊಟ್ಟನು.

ಗುಲಾಮರ ಮಾರಾಟವನ್ನು ನಿಲ್ಲಿಸಬೇಕೆಂದು ಚರ್ಚೆಗಳೂ ಉಪನ್ಯಾಸಗಳೂ ಬಹು ವರ್ಷಗಳಿಂದಲೂ ನಡೆಯುತ್ತಿದ್ದುವು. ಬ್ರಿಟಿಷ್ ರಾಷ್ಟ್ರಗಳಲ್ಲೆಲ್ಲಿಯೂ ಗುಲಾಮರ ವ್ಯಾಪಾರವು ಇರಕೂಡದೆಂದು ಇದಕ್ಕೆ ಮುಂಚೆಯೇ ವಿಧಾಯಕವಾಗಿದ್ದಿತು. ಸಂಯುಕ್ತ ಸಂಸ್ಥಾನ ಗಳ ಜನರೆಲ್ಲರೂ ಈ ವಿಷಯವನ್ನು ಚರ್ಚಿಸುತ್ತಿದ್ದರು. ಪಾಠಶಾಲೆಯ ವಾಗ್ವಾದದ ಸಂಘದಲ್ಲಿಯೂ ಈ ವಿಷಯವನ್ನು ಚರ್ಚೆಗಿಟ್ಟುಕೊಂಡರು.

ಚೆಸ್ಟರು ಪಟ್ಟಣದ ಪ್ರಮುಖರೆಲ್ಲರೂ ಈ ವಾಗ್ವಾದವನ್ನು ಕೇಳುವು ದಕ್ಕೆ ಬಂದಿದ್ದರು. ಗುಲಾಮರ ಮಾರಾಟದ ಮಾತನ್ನೆತ್ತಿದರೆ ಜೇಮ್ಸಿಗೆ ರೋಷವೇರುತ್ತಿದ್ದಿತು. ವಾಗ್ವಾದದಲ್ಲಿ ತನ್ನ ಮತವನ್ನು ಸಮರ್ಥಿಸು ವುದಕ್ಕೆ ಅವನು ಅನೇಕವಾಗಿ ಆಧಾರಗಳನ್ನು ಹುಡುಕಿಟ್ಟುಕೊಂಡಿದ್ದನು. "ಗುಲಾಮರ ಮಾರಾಟವು ಕ್ರೈಸ್ತ ಜನರಿಗೆಲ್ಲ ಅಪಮಾನಕರವಾಗಿದೆ. ತಮ್ಮ ಸ್ವಾತಂತ್ರ್ಯಕ್ಕಾಗಿ ಅನೇಕ ವರ್ಷಗಳ ವರೆಗೆ ಘೋರ ಯುದ್ಧವನ್ನು ನಡೆಯಿಸಿದ ಮಹನೀಯರು ಭ್ರಾತೃ ಪ್ರಾಯರಾದ ಇತರ ಮನುಷ್ಯ ರನ್ನು ಗುಲಾಮರನ್ನಾಗಿ ಮಾಡುತ್ತಿರುವುದು ಯಾವ ಬಗೆಯ ನ್ಯಾಯ? ಮಂತ್ರಾಲೋಚನೆಯ ಸಭೆಗೆ ನಮ್ಮ ಪ್ರತಿನಿಧಿಗಳನ್ನು ಕರೆಯದೆ ನಮಗೆ ತೆರಿಗೆಗಳನ್ನು ಅನ್ಯಾಯವಾಗಿ ಹಾಕಿದರೆಂದು, ಬ್ರಿಟಿಷರ ಅಧೀನದಲ್ಲಿರಲು ಸಮ್ಮತಿಸದೆ ಹೋರಾಡಿದ ಸ್ವಾತಂತ್ರ್ಯ ಪ್ರಿಯರಾದ ನಮ್ಮ ದೇಶೀ ಯರು, ಗುಲಾಮರ ವ್ಯಾಪಾರವನ್ನು ಯಾವ ನಾಲಗೆಯಿಂದ ನ್ಯಾಯ ವೆನ್ನುವರೊ ಕಾಣೆನು. ಗುಲಾಮರ ಮಾರಾಟವು ಪರಮ ನೀಚ ಕೃತ್ಯ. ವಿವೇಕವೂ ಆತ್ಮ ಗೌರವವೂ ಉಳ್ಳ ನಮ್ಮ ದೇಶೀಯರು ಈ ಅಸಂಗತ ವಾದ ಕ್ರೂರ ಕರ್ಮವನ್ನು ಪ್ರಯತ್ನ ಪೂರ್ವಕವಾಗಿ ಮಾಡಲು ಹೇಗೆ ಸಮ್ಮತಿಸುವರೊ ಊಹಿಸಲು ನನಗೆ ಸಾಧ್ಯವೇ ಇಲ್ಲ" ಎಂದು ಜೇಮ್ಸು ಸಂಘದಲ್ಲಿ ವಾದಿಸಿದನು. "ಕೂಡಲೆ ಗುಲಾಮರಿಗೆ ಸ್ವಾತಂತ್ರ್ಯವನ್ನು ಕೊಡುವುದು ಕ್ಷೇಮಕರವೊ ಅಲ್ಲವೊ ಎಂಬುದನ್ನು ಚೆನ್ನಾಗಿ ವಿಮ ರ್ಶಿಸಬೇಕು. ಕಾಲ ಕ್ರಮದಲ್ಲಿ ಅವರಿಗೆ ಸ್ವಾತಂತ್ರ್ಯವನ್ನು ಕೊಂಚ ಕೊಂಚವಾಗಿ ಕೊಡುವುದು ಉತ್ತಮವೆಂದು ತೋರುತ್ತದೆ" ಎಂದು ಮತ್ತೊಬ್ಬ ವಿದ್ಯಾರ್ಥಿಯು ಸೂಚಿಸಿದನು. "ನ್ಯಾಯವಾದುದನ್ನು ಕೂಡಲೆ ಮಾಡಬೇಕು. ತಮ್ಮಂತೆಯೇ ಮನುಷ್ಯರಾಗಿರುವವರನ್ನು ಕೋಳಿಗಳಂತೆಯೂ ದನ ಕರುಗಳಂತೆಯೂ ಕೊಂಡು ಮಾರುವುದು ಅತಿ ಘೋರ ಕೃತ್ಯ. ಈ ಬಗೆಯ ಅನ್ಯಾಯವನ್ನು ಮಾಡುವುದು ಎಂದೂ ಕ್ಷೇಮಕರವಲ್ಲ" ಎಂದು ಜೇಮ್ಸು ವಾದಿಸಿದನು. ಈ ವಿಚಾರವಾಗಿ ಜೇಮ್ಸಿನಲ್ಲಿ ಕಾಣಬಂದ ಔತ್ಸುಕ್ಯವನ್ನೂ ಸಂತಾಪವನ್ನೂ ನೋಡಿ ಅವನ ಮಿತ್ರರೂ ಉಪಾಧ್ಯಾಯರೂ ಪುರ ನಿವಾಸಿಗಳೂ ವಿಸ್ಮಿತರಾದರು;

ಜೇಮ್ಸ್ಸನ ವಾಗ್ಝರಿಯನ್ನೂ ಪ್ರೌಢಿಮೆಯನ್ನೂ ನೋಡಿ ಎಲ್ಲರೂ ಬೆರಗಾದರು. "ಮುಂದೆ ರಾಷ್ಟ್ರೀಯ ಮಂತ್ರಾಲೋಚನಾ ಸಭೆಗೆ ಪ್ರಜಾ ಪ್ರತಿನಿಧಿಯಾಗಿ ಹೋಗಲು ಈತನೇ ಅರ್ಹನು" ಎಂದು ಎಲ್ಲರೂ ಹೇಳತೊಡಗಿದರು. ಜೇಮ್ಸ್ಸನ ಕೀರ್ತಿಯು ಹಬ್ಬುವುದಕ್ಕಾರಂಭಿಸಿತು.

ಈ ಮೂರನೆಯ ವರ್ಷದಲ್ಲಿ 'ಲ್ಯುಕ್ರೀಷಿಯಾ ರುಡಾಲ್ಫ್' ಎಂಬ ಹುಡುಗಿಯು ವ್ಯಾಸಂಗಕ್ಕೆ ಗೌಗಾ ವಿದ್ಯಾಶಾಲೆಗೆ ಬಂದು ಸೇರಿದಳು. ಆಕೆಯು ಮೇಧಾವಿನಿಯೆಂದೂ ಚತುರೆಯೆಂದೂ ಜೇಮ್ಸ್ಸಗೆ ತಿಳಿಯ ಬಂದಿತು. ಸಾಮಾನ್ಯವಾಗಿ ಜೇಮ್ಸ್ಸು ಸ್ತ್ರೀಯರ ಗುಂಪಿಗೆ ಸೇರಲು ನಾಚಿಕೆಪಡುತ್ತಿದ್ದರೂ ಅದೇನೋ ಆ ಸುಂದರಿಯಾದ ಲ್ಯುಕ್ರೀಷಿಯೆಗೂ ಜೇಮ್ಸ್ಸಗೂ ಪರಿಚಯವು ತಾನಾಗಿ ಬೆಳೆಯಿತು. ಆಕೆಯ ಮೃದು ವಚನವೂ ವಿನಯ ಗಾಂಭೀರ್ಯಾದಿ ಸದ್ಗುಣಗಳೂ ಜೇಮ್ಸ್ಸನ ಮನಸ್ಸನ್ನು ಆಕರ್ಷಿಸಿದುವು. ಅಷ್ಟೇ ಹೊರತು ಅವರಿಗೆ ಆ ಕಾಲದಲ್ಲಿ ವ್ಯಾಮೋಹವಾವುದೂ ಇರಲಿಲ್ಲ. ಸಾಮಾನ್ಯವಾದ ಸ್ನೇಹವು ಹೆಚ್ಚಿ ವ್ಯಾಸಂಗದಲ್ಲಿ ಅವರು ಒಬ್ಬರಿಗೊಬ್ಬರು ಸಹಾಯ ಮಾಡುತ್ತಿದ್ದರು. ಆ ವರ್ಷವು ಕಳೆಯಲು, ಅವರು ತಂತಮ್ಮ ಊರಿಗೆ ಹೊರಟು ಹೋದರು. ಮುಂದೆ ಒಬ್ಬರನ್ನೊಬ್ಬರು ನೋಡುವೆವೆಂದು ಅವರು ಆಗ ತಿಳಿದಿರಲಿಲ್ಲ.

ಇದೇ ವರ್ಷದ ಶರದೃತುವಿನಲ್ಲಿ ಜೇಮ್ಸ್ಸಗೆ ಹೊಸಬನೊಬ್ಬನ ಸ್ನೇಹವು ದೊರೆಯಿತು. ಆತನು ಹೀರಾಮೆಂಬ ಸ್ಥಳದ ಪಾಠಶಾಲೆಯಲ್ಲಿ ಓದುವ ವಿದ್ಯಾರ್ಥಿಯಾಗಿದ್ದನು. ಒಂದು ದಿವಸ ವ್ಯಾಸಂಗದ ವಿಷಯವಾಗಿ ಮಾತನಾಡುತ್ತಿರುವಾಗ ಆ ಸ್ನೇಹಿತನು, "ಕಾಲೇಜಿನ ವ್ಯಾಸಂಗಕ್ಕೆ ಹೋಗಲು ನೀನು ಯೋಗ್ಯತೆಯನ್ನು ಪಡೆಯುವುದಕ್ಕೆ ಹೀರಾಮಿನ ವಿದ್ಯಾಶಾಲೆಯಲ್ಲಿ ವ್ಯಾಸಂಗ ಮಾಡುವುದು ಉತ್ತಮ. ಅಲ್ಲಿ ಅನೇಕರು ಓದುತ್ತಿದ್ದಾರೆ. ಅಲ್ಲಿಯ ವಿದ್ವಾಂಸರು ಬಡಹುಡುಗರಿಗೆ ಬಹಳ ಸಹಾಯ ಮಾಡುತ್ತಾರೆ" ಎಂದು ಹೇಳಿದನು.

ಜೇಮ್ಸ್ಸು.—ವೆಚ್ಚವೆಷ್ಟಾಗುವುದು ?

ಸ್ನೇಹಿತ.—ಈ ಗೌಗಾ ಪಾಠಶಾಲೆಯಲ್ಲಿ ಆಗುವ ವೆಚ್ಚಕ್ಕಿಂತ ಹೆಚ್ಚಾಗು ವುದಿಲ್ಲ. ಅಲ್ಲಿಯ ವಿದ್ವಾಂಸರು ಡಿಸೈಪಲ್ಸ್ ಪಂಗಡಕ್ಕೆ ಸೇರಿ ದವರಾಗಿರುತ್ತಾರೆ.

ಜೇಮ್ಸ್.—ನಾನೂ ಆ ಪಂಗಡದವನಾಗಿದ್ದೇನೆ.

ಸ್ನೇಹಿತ.—ನಾನೂ ಆಗಿದ್ದೇನೆ. ಅದಂತಿರಲಿ; ಆ ವಿದ್ಯಾಶಾಲೆಯು ಉತ್ಕೃಷ್ಟ ವಿದ್ಯಾಶಾಲೆಗಳಲ್ಲೊಂದಾಗಿದೆ.

ಜೇಮ್ಸ್.—ವಿದ್ವಾಂಸರು ಬಹು ಸಮರ್ಥರೊ?

ಸ್ನೇಹಿತ.— ಬಹು ಸಮರ್ಥರು; ಅಂಥವರನ್ನು ಇತರ ಕಡೆಗಳಲ್ಲಿ ಕಾಣುವುದು ದುರ್ಲಭ.

ಜೇಮ್ಸ್.—ಬಹಳ ಸಂತೋಷ. ಬರುವ ವರ್ಷ ಆ ವಿದ್ಯಾಶಾಲೆಗೇ ನಾನು ಹೋಗಿ ಸೇರುತ್ತೇನೆ.

ಹಠಾತ್ತಾಗಿ ಪರಿಚಯವಾದ ಇಬ್ಬರ ಬುದ್ಧಿವಾದದಿಂದ ಜೇಮ್ಸನ ಮುಂದಣ ವೃತ್ತಿಯು ನಿಶ್ಚಿತವಾಯಿತು. ಒಬ್ಬನ ಮಾತಿನಿಂದ ಜೇಮ್ಸ್ ಕಾಲೇಜಿನಲ್ಲಿ ಓದುವಂತೆ ಸಿರ್ಧರವಾಯಿತು; ಮತ್ತೊಬ್ಬನ ಮಾತಿನಿಂದ ಅದಕ್ಕೆ ತಯಾರು ಮಾಡುವ ಸ್ಥಳವು ಗೊತ್ತಾಯಿತು. ಎಲಿಜೆಯು ಇದನ್ನು ದೈವ ಸಹಾಯವೆಂದೆಣಿಸಿದುದು ಆಶ್ಚರ್ಯವೆ?

೧೮೫೦ನೆಯ ಇಸವಿಯ ನವೆಂಬರಿನಲ್ಲಿ ನಡೆದ ಗೌಗಾ ವಿದ್ಯಾ ಶಾಲೆಯ ವಾರ್ಷಿಕ ಸಮ್ಮೇಳನದಲ್ಲಿ ಜೇಮ್ಸ್ ಒಂದು ಉಪನ್ಯಾಸ ಮಾಡುವುದಕ್ಕೆ ನಿಯಮಿಸಲ್ಪಟ್ಟನು. ಆ ವಿದ್ಯಾಶಾಲೆಯನ್ನು ಬಿಟ್ಟು ತಾನು ಹೊರಡುವವನಾಗಿದ್ದುದರಿಂದ ಜೇಮ್ಸ್ ಆ ಉಪನ್ಯಾಸದಲ್ಲಿ ತನ್ನ ಯೋಗ್ಯತೆಯನ್ನೂ ವಾಕ್ಚಾತುರ್ಯವನ್ನೂ ಪ್ರದರ್ಶನ ಮಾಡಿ ದನು. ಅಲ್ಲಿ ನೆರೆದಿದ್ದ ಜನರೆಲ್ಲರೂ ಅವನ ಸಾಮರ್ಥ್ಯವನ್ನೂ ವಾಕ್ ಪ್ರೌಢಿಮೆಯನ್ನೂ ಧಾಟಿಯನ್ನೂ ನೋಡಿ ವಿಸ್ಮಿತರಾಗಿ ಈತನು ಪ್ರಸಿದ್ಧ ಪುರುಷನಾಗುವನೆಂದು ಹೇಳಿಕೊಂಡರು.

ಈ ವರ್ಷದ ಚಳಿಗಾಲದಲ್ಲಿಯೂ ಜೇಮ್ಸ್ ಉಪಾಧ್ಯಾಯನಾಗಿ

ಕೆಲಸ ಮಾಡಿ ತಿಂಗಳಿಗೆ ೧೮ ಡಾಲರುಗಳ ಸಂಬಳವನ್ನು ಪಡೆದನು; ಚಳಿಗಾಲವು ಕಳೆದನಂತರ ಮನೆಗೆ ಬಂದು ಸೇರಿದನು.

ಎಲಿಜೆಯು ತನ್ನ ಬಂಧು ವರ್ಗದವರನ್ನು ನೋಡಿಕೊಂಡು ಬರಬೇಕೆಂದು ಸಾನಿಸ್ವಿಲ್ ಎಂಬ ಪಟ್ಟಣದ ಬಳಿ ಒಂದು ಹಳ್ಳಿಗೆ ಹೋಗುವುದಕ್ಕೆ ಸನ್ನಾಹ ಮಾಡುತ್ತ ಮಗನನ್ನು ಕುರಿತು, "ಜಿಮ್ಮಾ! ನನ್ನ ಜೊತೆಯಲ್ಲಿ ನೀನೂ ಬರಬೇಕು" ಎಂದಳು.

ಜೇಮ್ಸ್.—ಹಿಂದಿರುಗಿ ಬರುವುದು ಎಷ್ಟು ದಿವಸವಾಗುತ್ತದೆ?

ಎಲಿಜೆ.—ವಸಂತ ಋತುವನ್ನು ಅಲ್ಲಿಯೇ ಕಳೆಯಬೇಕು; ಗ್ರೀಷ್ಮ ಋತುವಿನಲ್ಲಿಯೂ ಕೆಲವು ಕಾಲ ಇರಬೇಕಾದೀತು.

ಜೇಮ್ಸ್.—ವಸಂತರ್ತುವಿನಲ್ಲಿ ನಾನು ಹೀರಾಮಿನ ವಿದ್ಯಾಶಾಲೆಯನ್ನು ಸೇರಬೇಕೆಂದು ನಿಶ್ಚಯ ಮಾಡಿಕೊಂಡಿದ್ದೆನು.

ಎಲಿಜೆ.—ನಿಶ್ಚಯಿಸಿರುವೆಯಾ? ಅಲ್ಲಿಗೆ ಹೋಗುವುದೇತಕ್ಕೆ?

ಜೇಮ್ಸ್.—ಕಾಲೇಜಿನ ವ್ಯಾಸಂಗಕ್ಕೆ ಅರ್ಹನಾಗುವುದಕ್ಕೆ.

ಎಲಿಜೆ.—ಅಲ್ಲಿಯ ವೆಚ್ಚಗಳಿಗೆ ಮಾರ್ಗವೇನನ್ನು ಮಾಡಿಕೊಂಡಿದ್ದೀಯೆ?

ಜೇಮ್ಸ್.— ಈಗಿನಂತೆಯೇ ಕೆಲಸ ಮಾಡಿ ನನ್ನ ವೆಚ್ಚಕ್ಕೆ ಬೇಕಾಗುವಷ್ಟನ್ನು ಸಂಪಾದಿಸಿಕೊಳ್ಳುತ್ತೇನೆ.

ಎಲಿಜೆ.—ಸಂತೋಷ; ನೀನು ವಿದ್ವಾಂಸನಾಗಬೇಕೆಂಬುದೇ ನನ್ನ ಬಯಕೆ. ನೀನು ಗ್ರೀಷ್ಮರ್ತುವಿನ ಕೊನೆಯ ಭಾಗದಲ್ಲಿ ಅಲ್ಲಿಗೆ ಹೋಗಿ ಸೇರಬಹುದು.

ಜೇಮ್ಸ್.—ಅಲ್ಲಿಯ ವರೆಗೂ ವ್ಯರ್ಥ ಕಾಲಕ್ಷೇಪವಾಗುವುದಿಲ್ಲವೆ?

ಎಲಿಜೆ.— ಆಗುವುದಿಲ್ಲ; ನಿನ್ನ ಪುಸ್ತಕಗಳನ್ನು ಜೊತೆಯಲ್ಲಿಯೇ ತೆಗೆದುಕೊ. ಅಲ್ಲಿ ಕೆಲಸವೂ ಸಿಕ್ಕಬಹುದು, ಉಪಾಧ್ಯಾಯನಾಗಿ ಕೆಲಸ ಮಾಡುವುದಕ್ಕೂ ಅನುಕೂಲಿಸಬಹುದು.

ಜೇಮ್ಸ್.—ಕಾಲೇಜಿನ ವ್ಯಾಸಂಗಕ್ಕೆ ಸಂಪಾದನೆಯಾಗುವ ಸಂಭವ

ಏರುವಲ್ಲಿ ನಿನ್ನ ಜೊತೆಯಲ್ಲಿ ಹೊರಡುತ್ತೇನೆ; ದೇಶವನ್ನು ನೋಡಿದಹಾಗೂ ಆಗುತ್ತದೆ.

ಎಲಿಜೆ.—ಬಂಧು ವರ್ಗದವರ ಪರಿಚಯವೂ ಆಗುವುದು.

ತಾಯಿಯೂ ಮಗನೂ ಪ್ರಯಾಣ ಹೊರಟು ಕ್ಲೀವ್ಲಾಂಡನ್ನು ಸೇರಿ, ಅಲ್ಲಿಂದ ರೈಲು ಬಂಡಿಯನ್ನು ಹತ್ತಿ, ಆಗ ತಾನೆ ಹಾಕಿದ್ದ ರೈಲು ರಸ್ತೆಯ ಮೂಲಕ ಓಹಿಯೋ ಸಂಸ್ಥಾನದ ರಾಜಧಾನಿಯಾದ ಕೊಲಂಬಸ್ ನಗರವನ್ನು ಸೇರಿದರು. ಜೇಮ್ಸ್ ಅಂದಿನ ವರೆಗೂ ರೈಲು ರಸ್ತೆಯನ್ನೇ ಆಗಲಿ ರೈಲು ಬಂಡಿಗಳನ್ನೇ ಆಗಲಿ ನೋಡಿರಲಿಲ್ಲ. ಈಗ ಅವನ್ನು ನೋಡಿ ಅವುಗಳ ಉಪಯೋಗವನ್ನು ತಿಳಿದು ಆಶ್ಚರ್ಯ ಪಟ್ಟನು; ರಾಜಧಾನಿಯ ದೊಡ್ಡ ದೊಡ್ಡ ಕಟ್ಟಡಗಳ ಮತ್ತು ರಾಜ ಕೀಯ ಕಾರ್ಯಾಲಯಗಳ ನೊಗನನ್ನು ನೋಡಿ ವಿಸ್ಮಿತನಾದನು. ಮಂತ್ರಾಲೋಚನೆಯ ಸಭೆಗಳೆರಡೂ ಕೆಲಸ ಮಾಡುತ್ತಿದ್ದುವು. ಅಲ್ಲಿಯ ಕಟ್ಟಳೆಗಳನ್ನೂ ಕಾರ್ಯ ನಿರ್ವಾಹ ವಿಧಾನವನ್ನೂ ಇಬ್ಬರೂ ನೋಡಿ ಆನಂದ ಭರಿತರಾದರು.

ಕೊಲಂಬಸ್ಸಿನಿಂದ ಮುಂದಕ್ಕೆ ಪ್ರಯಾಣ ಮಾಡುತ್ತಿರುವಾಗ ಜೇಮ್ಸ್ ತಾಯಿಯನ್ನು ಕುರಿತು, "ಅಮ್ಮಾ! ರಾಜಧಾನಿಯ ವಿಷಯ ಗಳನ್ನು ನೀನು ನನಗೆ ತಿಳಿಸಿದ್ದರೆ ಈ ಪ್ರಯಾಣಕ್ಕೆ ನಾನು ಆಕ್ಷೇಪಿ ಸುತ್ತಲೇ ಇರಲಿಲ್ಲ. ಒಂದು ತಿಂಗಳ ವರೆಗೆ ನಾನು ಪಾಠಶಾಲೆಯ ಲ್ಲಿದ್ದರೂ ಇಷ್ಟು ವಿಷಯಗಳು ಇಷ್ಟು ಚೆನ್ನಾಗಿ ನನಗೆ ತಿಳಿಯುತ್ತಿರ ಲಿಲ್ಲ. ರಾಜ್ಯ ಕಾರ್ಯ ನಿರ್ವಾಹದ ರೀತಿಯು ಈಗ ನನಗೆ ಕೊಂಚ ಮಟ್ಟಿಗೆ ತಿಳಿಯಬಂದಿತು" ಎಂದನು.

ತಾಯಿ.—ನೀನು ಬಂದುದು ಒಳ್ಳೆಯದಾಯಿತು. ವಿಚಾರಪರರಾದ ಯುವಕರಿಗೆ ರಾಜಧಾನಿಯು ವಿವಿಧ ವಿಷಯಗಳನ್ನು ತೋರಿಸಿ ಕೊಡುವುದು.

ಜೇಮ್ಸ್.—ನಿಜ, ನಿಜ. ಪ್ರಾಪಂಚಿಕ ವ್ಯವಹಾರಗಳ ವಿಷಯದಲ್ಲಿ ಆಲೋಚನೆಯು ಪುಷ್ಕಳವಾಗಿರಬೇಕು.

ತಾಯಿ.—ಸರಿಯಾದ ಆಲೋಚನೆ ಎಂದು ಹೇಳಬೇಕಲ್ಲವೆ?

ಜೇಮ್ಸ್.—ನಿಜ, ನಿಜ; ನಮ್ಮ ಓಹಿಯೋ ಸಂಸ್ಥಾನದ ರಾಜಕೀಯ ಕಾರ್ಯನಿರ್ವಾಹದ ಕ್ರಮವನ್ನು ನನಗೆ ತಿಳಿಸುವೆಯಾ?

ಎಲಿಜೆ.—ಆಗಲಿ, ನನಗೆ ತಿಳಿದ ಮಟ್ಟಿಗೆ ಹೇಳುತ್ತೇನೆ: ನಮ್ಮ ಸಂಸ್ಥಾನದಲ್ಲಿ ಪ್ರಜಾಧಿಪತ್ಯವು ನೆಲೆಗೊಂಡಿದೆ. ಸರ್ವಾಧಿಕಾರವು 'ಕಾಂಗ್ರೆಸ್ಸಿ'ನ ಕೈಯಲ್ಲಿದೆ. ಈ ಕಾಂಗ್ರೆಸ್ಸು ಎರಡು ಸಭೆಗಳನ್ನೊಳಕೊಂಡಿದೆ. ಸುಮಾರು ಮೂವತ್ತು ಮಂದಿ ಮೆಂಬರುಗಳಿರುವ 'ಸೆನೆಟ್' ಎಂಬ ಸಭೆಯು, ಮತ್ತು ಸುಮಾರು ನೂರಿಪ್ಪತ್ತು ಮಂದಿ ಮೆಂಬರುಗಳಿರುವ ಪ್ರಜಾ ಪ್ರತಿನಿಧಿ ಸಭೆಯ ಮೆಂಬರುಗಳು ಎರಡು ವರ್ಷಕ್ಕೊಂದಾವೃತ್ತಿ ವಯೋವಂತರಾದ ಗಂಡಸರಿಂದ ಚುನಾಯಿಸಲ್ಪಡುವರು. ಎರಡು ಸಭೆಗಳೂ ಒಪ್ಪಿದ ಹೊರತು ಯಾವ ಕಾನೂನೂ ಆಗುವುದಿಲ್ಲ. ಹಣದ ವಿಷಯಗಳೆಲ್ಲವನ್ನೂ ಪ್ರಜಾ ಪ್ರತಿನಿಧಿ ಸಭೆಯವರೇ ಮೊದಲು ಚರ್ಚಿಸಬೇಕು; ಸೆನೆಟ್ಟಿನಲ್ಲಿ ಮೊದಲು ಚರ್ಚೆಯು ನಡೆಯಕೂಡದು. ಪ್ರಜಾ ಪ್ರತಿನಿಧಿ ಸಭೆಯವರೇ ಹಣಕ್ಕೆ ಯಜಮಾನರು. ಕಾಂಗ್ರೆಸ್ಸಿನ ನಿಯಮಗಳನ್ನು ಜಾರಿಗೆ ತಂದು ಕಾರ್ಯನಿರ್ವಾಹಮಾಡುವುದಕ್ಕೆ, ನ್ಯಾಯ ವಿಧಾಯಕ ವಿಷಯಗಳಲ್ಲಿ ಹೈ ಕೋರ್ಟಿನವರೂ, ಇತರ ಬಾಬುಗಳಲ್ಲಿ ಸಂಸ್ಥಾನಾಧಿಪತಿಯೂ ಅವನ ಸೆಕ್ರಟರಿಗಳೂ ಇರುತ್ತಾರೆ. ಸಂಸ್ಥಾನಾಧಿಪತಿಯನ್ನು ಎರಡು ವರ್ಷಕ್ಕೊಂದಾವೃತ್ತಿ ಜನರೇ ನಿಯಮಾನುಸಾರವಾಗಿ ಚುನಾಯಿಸುತ್ತಾರೆ. ಸೆನೆಟ್ ಸಭೆಯ ಒಪ್ಪಿಗೆಯಂತೆ ಸಂಸ್ಥಾನಾಧಿಪತಿಯು ತನ್ನ ಸೆಕ್ರಟರಿಗಳನ್ನು ನಿಯಮಿಸುತ್ತಾನೆ. ಹೈ ಕೋರ್ಟಿನ ಜಡ್ಜಿಗಳನ್ನು ಪದೇ ಪದೇ ಬದಲಾಯಿಸುವುದಿಲ್ಲ. ಅವರು ಸಂಸ್ಥಾನಾಧಿಪತಿಯ ಕೈಕೆಳಗಿಲ್ಲ. ನ್ಯಾಯವಾಗಿ ನಡೆಯುವ ವರೆಗೂ ಅವರನ್ನು ಕೆಲಸದಲ್ಲಿಟ್ಟಿರುವರು. ಸಂಸ್ಥಾನಾಧಿಪತಿಯು ಸೈನ್ಯಕ್ಕೂ ನಾವೆಗೂ ಮುಖ್ಯಾಧಿ

ಪತಿಯಾಗಿರುವನು. ಅಧಿಕಾರಿಗಳ ಮೇಲೆ ತಪ್ಪು ಹೊರಿಸಿದಾಗ ಅದರ ವಿಮರ್ಶೆಗೆ ಸೆನೆಟ್ ಸಭೆಯವರು ಸೇರುತ್ತಾರೆ. ನಮ್ಮ ಸಂಸ್ಥಾನದ ಕಾಂಗ್ರೆಸ್ಸು ನಮ್ಮ ಸಂಸ್ಥಾನದೊಳಗಿನ ವಿಷಯಗಳನ್ನು ನೋಡಿಕೊಳ್ಳುತ್ತದೆ; ಹೊರಗಣ ವಿಷಯಗಳೆಲ್ಲವೂ ಸಂಯುಕ್ತ ಸಂಸ್ಥಾನದ ಕಾಂಗ್ರೆಸ್ಸಿನ ಕೈಯಲ್ಲಿರುವುವು. ಸಂಯುಕ್ತ ಸಂಸ್ಥಾನದ ಕಾಂಗ್ರೆಸ್ಸಿನಲ್ಲಿಯೂ ಸಂಯುಕ್ತ ಸೆನೆಟ್ ಸಭೆ ಮತ್ತು ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆ ಎಂಬ ಎರಡು ಸಭೆಗಳಿವೆ. ನಮ್ಮ ಸಂಸ್ಥಾನದಿಂದ ಸಂಯುಕ್ತ ಸೆನೆಟ್ ಸಭೆಗೆ ಇಬ್ಬರು ಮೆಂಬರುಗಳನ್ನೂ ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆಗೆ ಇಪ್ಪತ್ತೆರಡು ಮಂದಿ ಮೆಂಬರುಗಳನ್ನೂ ನಮ್ಮ ಸಂಸ್ಥಾನದ ಪ್ರಜೆಗಳು ಚುನಾಯಿಸಿ ಕಳುಹಿಸುತ್ತಾರೆ.

ಜೇಮ್ಸ್.—ಈ ವಿಷಯಗಳೆಲ್ಲವನ್ನೂ ನಾನು ಚೆನ್ನಾಗಿ ಪರ್ಯಾಲೋಚಿಸಬೇಕು.

ಬಂಧು ವರ್ಗದವರು ಇವರ ಆಗಮನವನ್ನು ನಿರೀಕ್ಷಿಸಿರಲಿಲ್ಲವಾದುದರಿಂದ ಇವರನ್ನು ಕಾಣುತ್ತಲೆ ಬಹಳ ಸಂತೋಷಪಟ್ಟರು; ಜೇಮ್ಸ್‌ಗೆ ಉಪಾಧ್ಯಾಯನ ಕೆಲಸವನ್ನೂ ಹೊಂದಿಸಿಕೊಟ್ಟರು. ಮೂರು ತಿಂಗಳ ವರೆಗೆ ಅಲ್ಲಿದ್ದು ಎಲಿಜೆಯೂ ಜೇಮ್ಸೂ ಮರಳಿ ಆರೆಂಜು ಪಾಳೆಯಕ್ಕೆ ಬಂದು ಸೇರಿದರು. ಜೇಮ್ಸ್ ಹೀರಾಮಿನ ವಿದ್ಯಾಶಾಲೆಗೆ ಸೇರುವುದಕ್ಕೆ ತಕ್ಕ ಸನ್ನಾಹಗಳನ್ನು ಮಾಡತೊಡಗಿದನು.

## ಅಧ್ಯಾಯ ೧೮

# ಹೀರಾಮಿನ ವಿದ್ಯಾಶಾಲೆಯ ವ್ಯಾಸಂಗ

೧೮೫೧ನೆಯ ಇಸವಿಯ ಆಗಸ್ಟು ೩೧ನೆಯ ತಾರೀಖಿನಲ್ಲಿ ಜೇಮ್ಸ್ ಹೀರಾಮನ್ನು ಸೇರಿದನು. ಆ ದಿವಸ ಪಾಠಶಾಲೆಯ ಕಾರ್ಯ ನಿರ್ವಾಹಕ ಸಮಿತಿಯವರು ಸಭೆಯಲ್ಲಿ ಸೇರಿದ್ದರು. ಜೇಮ್ಸ್ ಸದಸ್ಯರುಗಳ ಬಳಿಗೆ ಹೋಗಿ, "ನಾನು ಇಲ್ಲಿ ವಿದ್ಯಾ ವ್ಯಾಸಂಗ ಮಾಡಬೇಕೆಂದು ಬಂದಿರುತ್ತೇನೆ ; ಗೌಗಾ ವಿದ್ಯಾಶಾಲೆಯಲ್ಲಿ ಮೂರು ವರ್ಷ ವ್ಯಾಸಂಗ ಮಾಡಿರುವೆನು. ನಾನು ಬಡವ; ನಿಮ್ಮ ಪಾಠಶಾಲೆಯಲ್ಲಿ ಗಂಟೆಯನ್ನು ಹೊಡೆಯುವ ಮತ್ತು ಕಸವನ್ನು ಗುಡಿಸುವ ಕೆಲಸವು ಸಿಕ್ಕಿದರೆ ನನಗೆ ಬಹಳ ಸಹಾಯವಾಗುತ್ತದೆ. ಗೌಗಾ ಶಾಲೆಯ ಅಧ್ಯಕ್ಷರು ಈ ಯೋಗ್ಯತಾ ಪತ್ರಿಕೆಯನ್ನು ಕೊಟ್ಟಿರುವರು" ಎಂದು ಹೇಳಿ ಆ ಪತ್ರಿಕೆಯನ್ನು ಕೊಟ್ಟನು. ಅದನ್ನು ನೋಡಿಕೊಂಡು ಸಮಿತಿಯ ಅಧ್ಯಕ್ಷನು "ಇದುವರೆಗೂ ನೀನು ಉತ್ತಮ ವಿದ್ಯಾಶಾಲೆಯಲ್ಲಿ ವ್ಯಾಸಂಗ ಮಾಡಿರುತ್ತೀಯೆ ; ಮುಂದೆ ಇಲ್ಲಿ ವ್ಯಾಸಂಗ ಮಾಡಿ ನೀನು ಕಾಲೇಜಿಗೆ ಹೋಗಬಹುದು. ನಮ್ಮ ಕೈಯಲ್ಲಾಗುವ ಸಹಾಯವನ್ನು ನಾವು ಮಾಡುತ್ತೇವೆ" ಎಂದು ಹೇಳಿದನು. "ನಿಮ್ಮ ಉಪಕಾರವು ಚಿರ ಸ್ಮರಣೀಯವಾಗಿರುವುದು" ಎಂದು ಜೇಮ್ಸ್ ಹೇಳಲು, ಅಧ್ಯಕ್ಷನು, "ನಾವು ಒಪ್ಪುವಂತೆ ಕಸವನ್ನು ಗುಡಿಸಿ ಕಾಲಕಾಲಕ್ಕೆ ಸರಿಯಾಗಿ ಗಂಟೆಯನ್ನು ಹೊಡೆಯುವುದು ನಿನ್ನ ಕೈಯಿಂದಾಗುವುದೆ?" ಎಂದು ಕೇಳಲು ಜೇಮ್ಸ್, "ಎರಡು ವಾರದ ವರೆಗೆ ನನ್ನ ಕೆಲಸವನ್ನು ಪರೀಕ್ಷಿಸಿರಿ, ನಿಮಗೆ ತೃಪ್ತಿಯಾಗದಿದ್ದರೆ ಯಾವ ಮಾತನ್ನೂ ಆಡದೆ ನಾನೇ ಹೊರಟು ಹೋಗುತ್ತೇನೆ" ಎಂದು ಉತ್ತರ ಕೊಟ್ಟನು. ಸಮಿತಿಯವರು ಅವನನ್ನು ಶಾಲೆಗೆ ಸೇರಿಸಿಕೊಂಡು, ಅವನು ಬೇಡಿದ ಕೆಲಸವನ್ನು ಕೊಟ್ಟರು.

ನಾಲ್ಕು ಮಂದಿ ವಿದ್ಯಾರ್ಥಿಗಳಿದ್ದ ಕೊಟ್ಟಡಿಯೊಂದರಲ್ಲಿ ಜೇಮ್ಸ್‌ಗೆ ವಾಸಸ್ಥಳವು ಸಿಕ್ಕಿತು. ಅಕ್ಕರೆಯಿಂದ ಅವನು ತನ್ನ ಕೆಲಸಗಳನ್ನು

ಪ್ರಾರಂಭಿಸಿದನು. ಬೆಳಗಿನ ಜಾವದಲ್ಲಿ ೫ ಗಂಟೆಗೆ ಸರಿಯಾಗಿ ಜೇಮ್ಸ್ ಮೊದಲಣ ಗಂಟೆಯನ್ನು ಹೊಡೆಯಬೇಕಾಗಿದ್ದಿತು. ಈ ಕಾರಣ ದಿಂದಲೂ ಶಾಲೆಯ ಕಸವನ್ನು ಗುಡಿಸಬೇಕಾಗಿದ್ದ ಕಾರಣದಿಂದಲೂ ಅವನು ೫ ಗಂಟೆಗೆ ಮೊದಲೇ ನಿದ್ದೆಯಿಂದೇಳುತ್ತಿದ್ದನು. ಗಂಟೆಯನ್ನು ಹೊಡೆಯುವುದರಲ್ಲಿ ಕಾಲ ನಿರ್ಣಯವು ಆವಶ್ಯಕವಾಗಿದ್ದಿತು. ಜೇಮ್ಸ್ ಕ್ಲುಪ್ತ ಕಾಲದಲ್ಲಿ ಕೆಲಸ ಮಾಡುವುದನ್ನು ಬಾಲ್ಯದಿಂದಲೂ ಕಲಿತಿದ್ದುದ ರಿಂದ ಅವನಿಗೆ ಈ ಕೆಲಸವು ಕಷ್ಟವಾಗಿ ತೋರಲಿಲ್ಲ. ಶಾಲೆಯಲ್ಲಿ ಕಸವನ್ನು ಗುಡಿಸುವುದೂ ಗಂಟೆಯನ್ನು ಹೊಡೆಯುವುದೂ ಬಹು ತೃಪ್ತಿ ಕರವಾಗಿ ನಡೆದುವು. ಜೇಮ್ಸನ ಕೆಲಸವನ್ನು ನೋಡಿ ಕಾರ್ಯ ನಿರ್ವಾಹ ಸಮಿತಿಯವರು ಸಂತೋಷಪಟ್ಟು ಅವನನ್ನು ಆ ಕೆಲಸದಲ್ಲಿ ಸ್ಥಿರಪಡಿಸಿದರು. ಹೀನ ವೃತ್ತಿಯೆಂದು ಅದುವರೆಗೂ ಎಣಿಸಲ್ಪಟ್ಟಿದ್ದ ಆ ಎರಡು ಕೆಲಸಗಳಿಗೂ ಜೇಮ್ಸನ ಕಾಲದಲ್ಲಿ ಗೌರವವು ಬಂದಿತು. ಉಪಯುಕ್ತವಾದ ಕೆಲಸಗಳೆಲ್ಲವೂ ಗಣ್ಯವಾದುವುಗಳು ಎಂಬುದನ್ನು ಜೇಮ್ಸನಿಂದ ಇತರ ವಿದ್ಯಾರ್ಥಿಗಳು ಕಲಿತರು.

ಆ ಶಾಲೆಯ ಪುಸ್ತಕಾಲಯದಲ್ಲಿ ಸುಮಾರು ಎರಡು ಸಾವಿರ ಗ್ರಂಥ ಗಳಿದ್ದುವು. ತನಗೆ ಬಿಡುವಾದಾಗಲೆಲ್ಲ ಜೇಮ್ಸ್ ಹೊಸ ಹೊಸ ಪುಸ್ತಕಗಳನ್ನು ಓದುತ್ತಬಂದನು. ಅವನಿಗೆ ಅಸಾಧಾರಣ ಜ್ಞಾಪಕ ಶಕ್ತಿಯು ಇದ್ದುದರಿಂದ ತಾನು ಓದಿದ ಮುಖ್ಯ ಮುಖ್ಯ ಗದ್ಯ ಪದ್ಯ ಗಳನ್ನು ಎಂದೂ ಮರೆಯುತ್ತಿರಲಿಲ್ಲ. ಓದಿದ ಪುಸ್ತಕಗಳ ಮುಖ್ಯ ವಿಷಯಗಳನ್ನೂ ಅವುಗಳ ಪುಟ ಸಂಖ್ಯೆಯನ್ನೂ ಅವನು ಬೇರೆಯಾಗಿ ಗುರುತು ಮಾಡಿಟ್ಟುಕೊಳ್ಳುತ್ತಿದ್ದನು. ವಿಷಯಗಳನ್ನು ಗುರುತು ಮಾಡಿಡುವ ಪದ್ಧತಿಯಿಂದ ಬಹು ಗುಣವಿರುವುದೆಂಬುದನ್ನು ಅನೇಕರು ಸ್ವಾನುಭವದಿಂದ ತಿಳಿಸಿರುತ್ತಾರೆ.

ಎರಡನೆಯ ವರ್ಷದ ಆದಿಯಲ್ಲಿ ಜೇಮ್ಸ್‌ಗೆ ಗಂಟೆಯನ್ನು ಹೊಡೆ ಯುವ ಕೆಲಸವೂ ಕಸವನ್ನು ಗುಡಿಸುವ ಕೆಲಸವೂ ತಪ್ಪಿ, ಶಾಲೆಯಲ್ಲಿ ಭಾಷೆಯನ್ನು ಬೋಧಿಸುವ ಸಹಾಯಕೋಪಾಧ್ಯಾಯನ ಕೆಲಸವು

ಸಿಕ್ಕಿತು. ಈಗ ಅವನಿಗೆ ಮೂರು ಕೆಲಸಗಳಿದ್ದುವು—ವಿದ್ಯಾರ್ಥಿಯ ಕೆಲಸ, ಸಹಾಯಕೋಪಾಧ್ಯಾಯನ ಕೆಲಸ ಮತ್ತು ಬಡಗಿಯ ಕೆಲಸ. ಜೇಮ್ಸನ ಆವಶ್ಯಕತೆಯು ಪಾಠಶಾಲೆಗೆ ಹೆಚ್ಚಿದಂತೆಯೇ ಆ ಊರಿನ ಬಡಗಿಗೂ ಹೆಚ್ಚುತ್ತ ಬಂದಿತು. ಬಿಡುವು ಸಿಕ್ಕಿದಾಗ ಜೇಮ್ಸ್ ಇತರರ ಸಹಾಯವಿಲ್ಲದೆ ಕೆಲವು ಮನೆಗಳಲ್ಲಿ ಚಿಲ್ಲರೆಯ ಕೆಲಸಗಳನ್ನು ಮಾಡಿ ಕೊಡುತ್ತಿದ್ದನು. ಇವನ ಸಾಹಸವನ್ನು ನೋಡಿ ಹುಡುಗರೂ ಉಪಾಧ್ಯಾಯರೂ ಆಶ್ಚರ್ಯಪಡುತ್ತಿದ್ದರು.

ಜೇಮ್ಸ್‌ಗೆ ಆ ವಿದ್ಯಾಶಾಲೆಯಲ್ಲಿ ಅಲಮೇಡಾ ಬೂತ್ ಎಂಬಾಕೆಯ ಪರಿಚಯವಾಯಿತು. ಈಕೆಯು ಒಬ್ಬ ಪ್ರಸಿದ್ಧನಾದ ಉಪದೇಶಕನ ಮಗಳಾಗಿದ್ದಳು. ಪಂಡಿತನಾದ ತಂದೆಯಂತೆಯೇ ಮಗಳೂ ಪ್ರತಿಭಾ ಶಾಲಿನಿಯೆನಿಸಿಕೊಂಡಿದ್ದಳು. ಬಾಲ್ಯದಲ್ಲಿಯೇ ಅವಳು ತನ್ನ ಉಪಾ ಧ್ಯಾಯರುಗಳ ತಪ್ಪುಗಳನ್ನು ತಿದ್ದುತ್ತಿದ್ದಳು. ತನ್ನನ್ನು ವರಿಸ ಬೇಕೆಂದಿದ್ದ ಯುವಕನು ದೈವಾಧೀನನಾಗಲು ಮತ್ತೊಬ್ಬನನ್ನು ವರಿಸು ವುದಕ್ಕೊಪ್ಪದೆ, ಆಕೆಯು ಆ ಪಾಠಶಾಲೆಯಲ್ಲಿ ಉಪಾಧ್ಯಾಯಿನಿಯಾ ಗಿದ್ದುಕೊಂಡು ಮುಂದಕ್ಕೆ ಲೋಕೋಪಕಾರಿಣಿಯಾಗಬೇಕೆಂಬ ಸಂಕಲ್ಪ ದಿಂದ ಅದೇ ಪಾಠಶಾಲೆಯಲ್ಲಿ ಪ್ರೌಢ ವಿದ್ಯಾಭ್ಯಾಸ ಮಾಡುತ್ತಿದ್ದಳು. ಆಗ ಆಕೆಗೆ ಮೂವತ್ತು ವರ್ಷ ವಯಸ್ಸು. ಆಕೆಯ ಮೈತ್ರಿಯಿಂದ ಜೇಮ್ಸ್‌ಗೆ ಬಹು ಪ್ರಯೋಜನವಾಯಿತು. ಅವರಿಬ್ಬರೂ ಸೇರಿ ವ್ಯಾಸಂಗ ಮಾಡುತ್ತ, ವಿದ್ವಾಂಸರ ಸಹಾಯವನ್ನು ಪಡೆದು, ಗ್ರೀಕ್ ಮತ್ತು ಲ್ಯಾಟಿನ್ ಭಾಷೆಗಳ ಪ್ರೌಢ ಗ್ರಂಥಗಳನ್ನು ಭಾಷಾ ಪರಿಚಯಕ್ಕಾಗಿ ಪರಿವರ್ತನ ಮಾಡತೊಡಗಿದರು. ಜೇಮ್ಸನ ಸಹಜವಾದ ಸುಗುಣ, ವಿವೇಕ, ದೈವಭಕ್ತಿ, ಶ್ರದ್ಧೆ, ಉತ್ಸಾಹ ಮುಂತಾದುವುಗಳನ್ನು ನೋಡಿ ಮುಂದಕ್ಕೆ ಅವನು ಪಂಡಿತನಾಗಿ ಕೀರ್ತಿಯನ್ನು ಸಂಪಾದಿಸುವನೆಂದು ಆಕೆಯು ನಂಬಿದ್ದಳು. ಒಂದು ದಿನ ಶಾಲೆಯಲ್ಲಿ ಜೇಮ್ಸ್ ಒಂದು ಉಪನ್ಯಾಸವನ್ನು ಹೇಳಬೇಕಾಗಿ ಬಂದಿತು. ಅವನು ಹಿಂದಿನ ದಿವಸ ಸಾಯಂಕಾಲ ಆಕೆಯ ಬಳಿಗೆ ಹೋಗಿ, "ನೀನು ನನಗೆ ಈಗ ಒಂದು

ಉಪಕಾರವನ್ನು ಮಾಡಬೇಕು; ನಿನ್ನ ಸಹಾಯವಿಲ್ಲದಿದ್ದರೆ ನನ್ನ ಉಪನ್ಯಾಸವು ಕೆಡುವುದು" ಎಂದು ಹೇಳಿದನು.

ಬೂತಿ.—ಉಪನ್ಯಾಸವು ಕೆಡುವುದೆಂಬ ಭಯವು ನನಗಿಲ್ಲ; ಆದರೂ ನಿನಗೆ ಸಹಾಯವನ್ನು ಮಾಡಲು ಸಿದ್ಧಳಾಗಿದ್ದೇನೆ.

ಜೇಮ್ಸ್.—ಅದೇ ನನಗೆ ಬೇಕಾಗಿರುವುದು. ಬರೆಯುವುದಕ್ಕೆ ಮೊದಲೇ ವಿಷಯಗಳನ್ನು ಚರ್ಚಿಸುವುದರಿಂದ ನನಗೆ ಬಹು ಪ್ರಯೋಜನವಾಗುವುದು.

ಬೂತಿ.—ನಿನಗೊಬ್ಬನಿಗೇ ಅಲ್ಲ; ಇತರರಿಗೂ ಪ್ರಯೋಜನವುಂಟು. ಇಬ್ಬರು ಮೇಧಾವಿಗಳು ಕಲೆತರೆ ಬರೆವಣಿಗೆಯ ಗುಣವು ಹೆಚ್ಚುವುದು. ವಿಚಾರ ಮಾಡುವುದರಿಂದ ಹೊಸ ಹೊಸ ವಿಷಯಗಳು ಮನಸ್ಸಿಗೆ ಹೊಳೆಯುವುವು, ತಪ್ಪು ಅಭಿಪ್ರಾಯಗಳು ದೂರವಾಗುವುವು, ಸ್ವಶಕ್ತಿಯು ಬೆಳೆಯಲು ಅನುಕೂಲವಾಗುವುದು. ಈಗ ನಿನಗೆ ಬೇಕಾಗಿರುವ ಸಹಾಯವು ಯಾವುದು? ಹೇಳು.

ಉಪನ್ಯಾಸದ ವಿಚಾರದಲ್ಲಿ ತನಗೆ ತೋರಿದ್ದ ಕಷ್ಟಗಳನ್ನು ಜೇಮ್ಸ್ ವಿವರಿಸಿ ನೂರಾರು ಪ್ರಶ್ನೆಗಳನ್ನು ಹಾಕಿದನು. ಬೂತಿಯು ಅವುಗಳಿಗೆ ತಕ್ಕ ಸಮಾಧಾನಗಳನ್ನು ಹೇಳಿದಳು. ಹೀಗೆ ಇಬ್ಬರೂ ವಿಚಾರ ಮಾಡುತ್ತಿರಲು, ರಾತ್ರಿಯು ಕಳೆದುಹೋಗಿ ಬೆಳಗಾದುದು ಅವರಿಗೆ ಗೋಚರವೇ ಆಗಲಿಲ್ಲ. ಹಿಡಿದ ಕಾರ್ಯದಲ್ಲಿ ಅವರಿಗಿದ್ದ ಶ್ರದ್ಧೆಯು ಇದರಿಂದ ಸ್ಪಷ್ಟಪಡುವುದಿಲ್ಲವೆ!

ಜೇಮ್ಸಿನ ದೈವಭಕ್ತಿಯು ದಿನ ದಿನಕ್ಕೆ ಅಭಿವೃದ್ಧಿಯಾಗುತ್ತಿದ್ದಿತೆಂದು ಹಿಂದೆ ಹೇಳಿದೆವಷ್ಟೆ? ಹೀರಾಮಿನಲ್ಲಿದ್ದ ಪ್ರಮುಖ ಧರ್ಮೋಪದೇಶಕನಿಗೆ ಜೇಮ್ಸಿನಲ್ಲಿ ಪ್ರೀತಿಯು ಹೆಚ್ಚಲು, ಅವನು ಒಂದೊಂದು ಭಾನುವಾರ ಪ್ರಾರ್ಥನಾಲಯದಲ್ಲಿ ಕ್ರೈಸ್ತ ಧರ್ಮದ ವಿಷಯವಾಗಿ ಉಪನ್ಯಾಸ ಮಾಡುವಂತೆ ಜೇಮ್ಸನ್ನು ಕೇಳಿಕೊಳ್ಳುತ್ತಿದ್ದನು. ಜೇಮ್ಸಿನ ಭಾಷಣವು ಎಲ್ಲರ ಮನವನ್ನೂ ಆಕರ್ಷಿಸುತ್ತಿದ್ದಿತು. ಪುಸ್ತಕದ ಪಾಠವ

ನ್ನೊಪ್ಪಿಸುವಂತೆ ಅವನು ಮಾತನಾಡುತ್ತಿರಲಿಲ್ಲ; ಪ್ರಾಜ್ಞರಂತೆ ಸ್ವಾನುಭವದಿಂದ ವಿಷಯಗಳನ್ನು ವಿವರಿಸುತ್ತಿದ್ದನು. ಸರಿಯಾದ ಪದಗಳಿಗೆ ಅವನಿಗೆ ಯಾವಾಗಲೂ ಕೊರತೆಯಿರಲಿಲ್ಲ. ಎಲ್ಲೆಯನ್ನು ಮೀರದೆ ತುಂಬಿ ಗಂಭೀರವಾಗಿ ಹರಿಯುವ ನದೀ ಪ್ರವಾಹದಂತೆ ಅವನ ವಾಕ್ ಪ್ರವಾಹವು ಶೋಭಿಸುತ್ತಿದ್ದಿತು. ಸಾಮಾಜಿಕ ವಿಚಾರವಾಗಿಯೇ ಆಗಲಿ, ವಿದ್ಯಾ ವಿಚಾರವಾಗಿಯೇ ಆಗಲಿ, ರಾಜಕೀಯ ವಿಚಾರವಾಗಿಯೇ ಆಗಲಿ, ಧರ್ಮ ವಿಚಾರವಾಗಿಯೇ ಆಗಲಿ ಅವನು ಮಾತನಾಡಿದರೆ ಜನರು ಗಂಪು ಗುಂಪಾಗಿ ಬಂದು ಸೇರುತ್ತಿದ್ದರು.

ಜೇಮ್ಸನ ಯಶಸ್ಸನ್ನು ಹರಡುವುದಕ್ಕೆ ಇನ್ನೊಂದು ವಿಷಯವು ಸಹಕಾರಿಯಾಯಿತು. ಕೆಲಸದಿಂದ ಓಡಿಹೋದ ಗುಲಾಮರನ್ನು ಹಿಡಿದು ತಂದು ಮತ್ತೆ ಅವರವರ ಯಜಮಾನರಿಗೆ ಒಪ್ಪಿಸುವಂತೆ ಒಂದು ರಾಜಕೀಯ ಶಾಸನವು ಆ ಕಾಲದಲ್ಲಿ ಆಚರಣೆಗೆ ಬಂದಿತು. ಇದು ಜೇಮ್ಸ್‌ಗೆ ಬಹಳ ಸಂತಾಪವನ್ನುಂಟುಮಾಡಿತು. ಅದುವರೆಗೆ ಪ್ರಸಿದ್ಧ ಪುರುಷನಾಗಿದ್ದ ವೆಬ್‌ಸ್ಟರ್ ಎಂಬಾತನ ಪಾಂಡಿತ್ಯದಲ್ಲಿ ಜೇಮ್ಸ್‌ಗೆ ವಿಶೇಷ ಗೌರವವಿದ್ದಿತು. ಆತನು ಈಗ ಆ ಗುಲಾಮರ ಶಾಸನವನ್ನು ಅನುಮೋದಿಸಿದುದರಿಂದ ಜೇಮ್ಸ್‌ಗೆ ಆತನಲ್ಲಿದ್ದ ಗೌರವವು ತಗ್ಗಿತು. ಈ ಶಾಸನದ ವಿಚಾರದಲ್ಲಿ ಜೇಮ್ಸ್ ವಾಗ್ವಾದ ಸಭೆಯಲ್ಲಿ, ''ಈ ಶಾಸನವು ಮೃತ್ಯುವಿನೊಡನೆ ಮಾಡಿಕೊಂಡ ಒಡಂಬಡಿಕೆಯಾಗಿಯೂ ಯಮನೊಡನೆ ಮಾಡಿಕೊಂಡ ಕರಾರಾಗಿಯೂ ಇದೆ. ಅನ್ಯಾಯದ ಹಿಂಸೆಗೂ, ಕ್ರೂರವಾದ ದಾಸ್ಯಕ್ಕೂ ಗುರಿಯಾಗಿ ನರಳುತ್ತಿರುವ ಬಡಪಾಯಿಗಳ ಗೋಳು ಜಗದ್ರಕ್ಷಕನಾದ ಭಗವಂತನನ್ನು ಮುಟ್ಟಿಯೇ ಮುಟ್ಟುವುದು. ಆ ಶಾಸನದ ಪ್ರತಿಫಲವನ್ನು ಎಲ್ಲರೂ ಅನುಭವಿಸಬೇಕಾಗುವುದು. ಹಿಂಸೆಗೆ ಹಿಂಸೆಯೇ ಪ್ರತಿಫಲವಲ್ಲವೆ? ಅಧರ್ಮ ವೈರಿಯಾದ ಭಗವಂತನು ಸೊರಟು ಮುರುಟಾಗಿ ಬೆಳೆದಿರುವ ದಾಸ್ಯವೆಂಬ ಈ ಮುದಿಗಿಡವನ್ನು ಕೊಂಬೆಯಾಗಲಿ ಬೇರಾಗಲಿ ಉಳಿಯದಂತೆ ತನ್ನ ಕೋಪಜ್ವಾಲೆಯಿಂದ ಸುಟ್ಟು ಬೂದಿ ಮಾಡುವನು'' ಎಂದು ವಾದಿಸುತ್ತ ತನ್ನ ವಾಕ್ ಪ್ರೌಢಿಮೆಯನ್ನು ತೋರ್ಪಡಿಸಿದನು.

ಜೇಮ್ಸ್ ಸಹಾಯಕೋಪಾಧ್ಯಾಯನಾಗಿರುವಾಗ, ಹಿಂದೆ ಹೇಳಿದ ಲ್ಯುಕ್ರೇಷಿಯಾ ರುಡಾಲ್ಫ್ ಎಂಬಾಕೆಯು ಅವನಿಗೆ ಶಿಷ್ಯಳಾದಳು. ಅಂತಹ ಮೇಧಾವಿನಿಯು ತನ್ನ ಶಿಷ್ಯಳಾದುದು ಜೇಮ್ಸ್‌ಗೆ ಬಹಳ ಸಂತೋಷವಾಯಿತು. ಇವರ ಪರಸ್ಪರ ಸ್ನೇಹವು ಮಿತಿ ಮೀರಿ ಹೆಚ್ಚುವು ದೆಂದು ಜೇಮ್ಸ್‌ಗೆ ಆಗ ತಿಳಿದಿರಲಿಲ್ಲ. ಹೀಗೆ ಕೆಲವು ತಿಂಗಳು ಕಳೆದುವು. ಶಿಷ್ಯಳ ಪಾಂಡಿತ್ಯವನ್ನು ಜೇಮ್ಸ್ ಕೊಂಡಾಡುತ್ತ ಬಂದನು. ಆಕೆಯ ವಿನಯವೂ ಲಾವಣ್ಯವೂ ಸುಗುಣಗಳೂ ಜೇಮ್ಸ್‌ನ ಮನಸ್ಸನ್ನು ಪೂರ್ತಿ ಯಾಗಿ ಆಕರ್ಷಿಸಿದುವು. ಆಕೆಯಲ್ಲಿ ಅನುರಾಗವು ದಿನ ದಿನಕ್ಕೆ ಬೆಳೆಯಿತು. ಜೇಮ್ಸ್‌ನ ಕಾಲೇಜು ವ್ಯಾಸಂಗವು ಪೂರಯಿಸಿದೊಡನೆಯೇ ಆಕೆಯು ಅವನ ಪತ್ನಿಯಾಗಲು ಸಮ್ಮತಿಸಿದಳು. ಆಗ ಜೇಮ್ಸ್‌ಗೆ ಇಪ್ಪತ್ತೆರಡು ವಯಸ್ಸು; ಲ್ಯುಕ್ರೇಷಿಯೆಯು ಒಂದು ವರ್ಷ ಚಿಕ್ಕವಳು.

ಈ ಪ್ರಣಯದಿಂದ ಜೇಮ್ಸ್ ವಿಶೇಷ ಪ್ರಯೋಜನವನ್ನು ಹೊಂದಿದನು. ಅವನು ತನ್ನ ಜೀವನೋಪಾಯವನ್ನು ಮನಸ್ಸಿನಲ್ಲಿ ನಿರ್ಧರಿಸಿ ಸಂಕಲ್ಪ ಸಾಧನೆಗಾಗಿ ತನ್ನ ಸರ್ವ ಶಕ್ತಿಯನ್ನೂ ಏಕ ಮುಖವಾಗಿ ತಿರುಗಿಸಬೇಕಾಯಿತು. ಈ ಪ್ರಣಯದ ಪ್ರಭಾವದಿಂದ ಜೇಮ್ಸ್‌ನ ಒರಟುತನವು ಬಿಟ್ಟುಹೋಗಿ ಅವನಲ್ಲಿ ಮಾರ್ದವವು ಹೆಚ್ಚಿತು. ಪ್ರಣಯ ಕಲಾಪವು ಬುದ್ಧಿ ಕಲಾಪಕ್ಕಿಂತ ಮನೋಹಾರಿಯಾದುದು. ಈ ಸಂಗತಿಯು ಜೇಮ್ಸ್‌ನಲ್ಲಿ ಉದಾಹೃತವಾಯಿತು.

ಚೆಸ್ಟರಿಗೆ ಹೋದಾಗ ಸ್ತ್ರೀಯರಿರುವ ಗುಂಪಿನಲ್ಲಿ ಪ್ರವೇಶಿಸಲು ಜೇಮ್ಸ್ ಹಿಂದೆಗೆಯುತ್ತಿದ್ದನು. ಆದರೆ ಹೀರಾಮಿನಲ್ಲಿ ಧಾರಾಳವಾಗಿ ಸ್ತ್ರೀಯರ ಗುಂಪಿನಲ್ಲಿ ಸೇರಿ ವಿನೋದವಾಗಿ ಕಾಲ ಕಳೆಯುತ್ತ ಬಂದನು. ಜೇಮ್ಸ್‌ನ ಸಂಭಾಷಣೆಯಲ್ಲಿ ವಿನೋದವೂ ವಿವೇಕವೂ ಇರುತ್ತಿದ್ದುದರಿಂದ ಎಲ್ಲರಿಗೂ ಅವನ ಸಹವಾಸವು ಪ್ರಯೋಜನಕಾರಿ ಯಾಗಿದ್ದಿತು. ಜೊತೆಗಾರರಿಗೆ ಹಿತವಾಗಲೆಂದು ದುರ್ವಿಷಯಗಳನ್ನು ಕುರಿತು ಮಾತನಾಡುವ ಅಯೋಗ್ಯರನ್ನು ಕಂಡರೆ ಜೇಮ್ಸ್‌ಗೆ ಕೊಂಚವೂ ಒಗ್ಗುತ್ತಿರಲಿಲ್ಲ; ಅಂಥವರು ಮನೋದಾರ್ಢ್ಯವೇ ಆಗಲಿ ಲೋಕ ವ್ಯವಹಾರ ಜ್ಞಾನವೇ ಆಗಲಿ ಇಲ್ಲದ ಕುತ್ಸಿತರೆಂದು ಅವನು ಭಾವಿಸಿದ್ದನು.

ಜೇಮ್ಸ್‌ನಿಗೆ ಚಿತ್ರ ಕಲೆಯಲ್ಲಿಯೂ ಅಭಿರುಚಿಯಿದ್ದಿತು. ಆ ಅಭಿರುಚಿಯನ್ನು ಅಭ್ಯಾಸದಿಂದ ವೃದ್ಧಿಪಡಿಸಿಕೊಂಡು ಅವನು ಚಿತ್ರದ ಪಾಠಕ್ಕೂ ಉಪಾಧ್ಯಾಯನಾದನು. ಅವನ ಬುದ್ಧಿಯು ಸರ್ವತೋಮುಖವಾಗಿ ಪ್ರಸರಿಸುತ್ತಿದ್ದಿತು. ಅವನಲ್ಲಿ ಸ್ಥಿರ ಪ್ರಯತ್ನವೂ ಅಸಾಧಾರಣ ಶ್ರದ್ಧೆಯೂ ಇದ್ದುದರಿಂದ ಅವನು ಕೈಹಾಕಿದ ಕೆಲಸಗಳೆಲ್ಲವೂ ಕೈಗೂಡುತ್ತಿದ್ದುವು. ಅವನಲ್ಲಿ ಕಾರ್ಯ ತತ್ಪರತೆಯು ಇಲ್ಲದಿದ್ದರೆ ಅವನಿಗೆ ಅಷ್ಟು ಕೀರ್ತಿಯು ಲಭಿಸುತ್ತಿರಲಿಲ್ಲ. 'ಹಿಡಿದ ಕೆಲಸವನ್ನು ಜಾಣರೊಪ್ಪುವಂತೆ ಮಾಡಬೇಕು; ಹಾಗಿಲ್ಲವಾದರೆ ಅದನ್ನು ಪ್ರಾರಂಭಿಸಲೇ ಕೂಡದು' ಎಂಬುದು ಜೇಮ್ಸ್‌ನ ನಿಯಮವಾಗಿದ್ದಿತು. ಅವನ ಪಾಂಡಿತ್ಯವನ್ನೂ ಸುಗುಣಗಳನ್ನೂ ನೋಡಿ ಹೀರಾಮಿನ ವಿದ್ಯಾಶಾಲೆಯ ಸಮಿತಿಯವರು, "ಕಾಲೇಜಿನ ವ್ಯಾಸಂಗವು ಸಾಂಗೋಪಾಂಗವಾಗಿ ಮುಗಿದೊಡನೆಯೇ ನೀನು ಈ ಶಾಲೆಯಲ್ಲಿ ವಿದ್ವಾಂಸನಾಗಿದ್ದು ಈ ಶಾಲೆಗೆ ಕೀರ್ತಿಯನ್ನು ತರಬೇಕೆಂದು ನಾವು ಹಾರಯಿಸುತ್ತೇವೆ. ನಿನ್ನಿಷ್ಟವೇನಿರುವುದು?" ಎಂದು ಅವನನ್ನು ಕೇಳಲು ಅವನು, "ನಿಮ್ಮ ಇಷ್ಟದಂತೆ ನಾನು ನಡೆದುಕೊಳ್ಳುತ್ತೇನೆ; ನನಗೆ ನೀವು ಮಹೋಪಕಾರವನ್ನು ಮಾಡಿರುತ್ತೀರಿ" ಎಂದು ಉತ್ತರ ಕೊಟ್ಟನು.

ಸಾಧಾರಣ ಸಾಮರ್ಥ್ಯವುಳ್ಳ ಯುವಕನು ಹೀರಾಮಿನ ಪಾಠಶಾಲೆಯಲ್ಲಿ ಮಾಡಬೇಕಾಗಿದ್ದ ನಾಲ್ಕು ವರ್ಷದ ವ್ಯಾಸಂಗವನ್ನೂ ಕಾಲೇಜಿನಲ್ಲಿ ಮಾಡಬೇಕಾಗಿದ್ದ ಮೊದಲಿನ ಎರಡು ವರ್ಷಗಳ ವ್ಯಾಸಂಗವನ್ನೂ ಜೇಮ್ಸ್ ಸ್ವಸಾಮರ್ಥ್ಯದಿಂದ ಮೂರೇ ವರ್ಷಗಳಲ್ಲಿ ಪೂರಯಿಸಿದನು. ಈ ಮೂರು ವರ್ಷಗಳಲ್ಲಿಯೂ ಅವನು ತನ್ನ ಸಂಪಾದನೆಯಿಂದಲೇ ಜೀವಿಸುತ್ತಿದ್ದುದಲ್ಲದೆ ಮುಂದೆ ಕಾಲೇಜಿನ ವೆಚ್ಚಕ್ಕಾಗಿಯೂ ಸ್ವಲ್ಪ ಹಣವನ್ನು ಕೂಡಿಟ್ಟಿದ್ದನು.

ಮುಂದೆ ತಾನು ಸೇರಬೇಕೆಂದಿದ್ದ ಕಾಲೇಜಿನ ವಿಷಯದಲ್ಲಿ ಜೇಮ್ಸ್ ತನ್ನ ಸ್ನೇಹಿತನೊಬ್ಬನಿಗೆ, "ಬೆಥನಿ ಕಾಲೇಜಿಗೆ ನಾನು ಹೋಗದಿರಲು ಮೂರು ಕಾರಣಗಳಿವೆ—(೧) ಪೂರ್ವ ದಿಕ್ಕಿನ ಸಂಸ್ಥಾನಗಳ ಕಾಲೇಜುಗಳಂತೆ ಅಲ್ಲಿ ವಿಶೇಷ ಪಾಠಗಳನ್ನು ಹೇಳುವುದಿಲ್ಲವಂತೆ; ಅಲ್ಲದೆ,

ಹೇಳುವ ಪಾಠಗಳು ಸಾಂಗೋಪಾಂಗವಾಗಿಲ್ಲವಂತೆ; (೨) ಬೆಥನಿಯವರು ಗುಲಾಮರ ಮಾರಾಟವನ್ನು ಅನುಮೋದಿಸುತ್ತಿರುವರು; (೩) ಕ್ರೈಸ್ತ ಧರ್ಮ ವಿಚಾರದಲ್ಲಿ ಹೀರಾಮು, ಬೆಥನಿ—ಇವೆರಡೂ ಒಂದೇ ಪಂಗಡದವಾಗಿವೆ; ಇತರ ಪಂಗಡಗಳ ಮತಗಳನ್ನೂ ತತ್ತ್ವಗಳನ್ನೂ ತಿಳಿಯಲು ಅಲ್ಲಿ ಅವಕಾಶವಿಲ್ಲ. ಈ ಕಾರಣಗಳಿಗಾಗಿ ನ್ಯೂಇಂಗ್ಲೆಂಡಿನ ಸಂಸ್ಥಾನಗಳಲ್ಲಿಯ ಒಂದು ಕಾಲೇಜಿನಲ್ಲಿ ಓದಬೇಕೆಂದು ನಿಶ್ಚಯಿಸಿ ಅಲ್ಲಿರುವ ಮೂರು ವಿಶ್ವವಿದ್ಯಾನಿಲಯಗಳ ಅಧ್ಯಕ್ಷರಿಗೆ ಕಾಗದಗಳನ್ನು ಬರೆದೆನು. ನಾನು ಬಂದು ಓದಬಹುದೆಂದೂ ಎರಡೇ ವರ್ಷಗಳಲ್ಲಿ ಬಿ.ಎ. ಪರೀಕ್ಷೆಯನ್ನು ಕೊಡಬಹುದೆಂದೂ ಎಲ್ಲರೂ ಕಾರ್ಯೋಚಿತ ಪತ್ರಗಳನ್ನು ಬರೆದಿರುತ್ತಾರೆ. ಆದರೆ, ಮೆಸಾಚುಸೆಟ್ಸಿನಲ್ಲಿರುವ ವಿಲಿಯಮ್ಸ್ ಕಾಲೇಜಿನ ಅಧ್ಯಕ್ಷನಾದ ಡಾಕ್ಟರ್ ಹಾಪ್‌ಕಿನ್ಸನು, "ಇಲ್ಲಿಗೆ ನೀನು ಬಂದರೆ ನಮ್ಮ ಕೈಯಲ್ಲಾಗುವ ಸಹಾಯವನ್ನು ಮಾಡುತ್ತೇವೆ" ಎಂಬ ಇನ್ನೊಂದು ಪಙ್ಕ್ತಿಯನ್ನೂ ಬರೆದಿರುತ್ತಾನೆ. ಮೂರು ಮಂದಿ ಅಧ್ಯಕ್ಷರ ಉತ್ತರಗಳಲ್ಲಿ ಹಾಪ್‌ಕಿನ್ಸನ ಸ್ವಾಗತಪೂರ್ವಕವಾದ ಉತ್ತರವು ನನ್ನ ಮನಸ್ಸನ್ನು ಆಕರ್ಷಿಸಿದುದರಿಂದ ವಿಲಿಯಮ್ಸ್ ಕಾಲೇಜಿನಲ್ಲಿ ಓದಬೇಕೆಂದು ನಾನು ನಿಶ್ಚಯಿಸಿರುತ್ತೇನೆ" ಎಂದು ಕಾಗದವನ್ನು ಬರೆದನು.

ಕಾಲೇಜಿಗೆ ಹೊರಡುವುದಕ್ಕೆ ಒಂದೆರಡು ತಿಂಗಳ ಹಿಂದೆ ಜೇಮ್ಸನ ಅಣ್ಣನಾದ ಥಾಮಸ್ಸು ತಮ್ಮನನ್ನು, "ಹಣದ ವಿಚಾರದಲ್ಲಿ ಯಾವ ಆಲೋಚನೆಯನ್ನು ಮಾಡಿರುತ್ತೀಯೆ? ಕಾಲೇಜಿನ ವ್ಯಾಸಂಗವು ಮುಗಿಯುವ ವರೆಗೂ ಸಾಕಾಗುವಷ್ಟು ಹಣವು ನಿನ್ನಲ್ಲಿದೆಯೆ?" ಎಂದು ಕೇಳಿದನು.

ಜೇಮ್ಸ್.—ಅರ್ಧ ಹಣವು ನನ್ನಲ್ಲಿದೆ. ಚಳಿಗಾಲದಲ್ಲಿ ಉಪಾಧ್ಯಾಯನಾಗಿದ್ದು ಇತರ ಕಾಲದಲ್ಲಿ ಏನಾದರೂ ಕೆಲಸ ಮಾಡಿ ಉಳಿದ ಹಣವನ್ನು ಸಂಪಾದಿಸಿಕೊಳ್ಳಬೇಕು. ಇದುವರೆಗೂ ಭಗವಂತನು ಸಹಾಯ ಮಾಡಿರುತ್ತಾನೆ; ಮುಂದೆಯೂ ಕೈಬಿಡುವುದಿಲ್ಲವೆಂದು ನನಗೆ ನಂಬಿಕೆಯಿದೆ.

ಥಾಮುಸ್ಸ್.—ಕಾಲೇಜಿನ ನಾಲ್ಕು ವರ್ಷಗಳ ವ್ಯಾಸಂಗವನ್ನು ಎರಡು ವರ್ಷಗಳಲ್ಲಿ ಪೂರಯಿಸಬೇಕಾಗಿರುವುದರಿಂದ ನೀನು ಕೂಲಿಯ ಕೆಲಸ ಮಾಡಿಕೊಂಡು ಓದುವುದು ನನಗೆ ಸಮರ್ಪಕವಾಗಿ ತೋರುವುದಿಲ್ಲ.

ಜೇಮ್ಸ್.—ಅಹುದು ; ಕೆಲಸ ಮಾಡಿ ಹಣವನ್ನು ಸಂಪಾದಿಸದಿದ್ದರೆ ನನಗೆ ಹಣವು ಬರುವುದು ಹೇಗೆ?

ಥಾಮುಸ್ಸ್.—ನಾನು ಸಾಲವನ್ನು ಕೊಡುತ್ತೇನೆ.

ಜೇಮ್ಸ್.—ಸಾಲ ತೀರಿಸುವವರೆಗೂ ನೀನು ಸುಮ್ಮನಿರುವೆಯಾ?

ಥಾಮುಸ್ಸ್.—ಸುಮ್ಮನಿರುವೆನು ; ಕಾಲೇಜಿನ ವ್ಯಾಸಂಗವನ್ನು ಪೂರಯಿಸಿದ ಮೇಲೆ ನೀನು ವಿದ್ವಾಂಸನಾದಾಗ ಅಲ್ಪವಾದ ಈ ಸಾಲವನ್ನು ತೀರಿಸುವುದು ಕಷ್ಟವಲ್ಲ ; ಅದರ ಚಿಂತೆ ನನಗಿಲ್ಲ.

ಜೇಮ್ಸ್.—ಒಂದು ವೇಳೆ ನಾನು ಸತ್ತರೆ ನಿನ್ನ ಸಾಲವು ತೀರುವುದು ಹೇಗೆ?

ಥಾಮುಸ್ಸ್.—ಅದು ನನ್ನ ಪಾಡು ; ನಿನಗೇತಕ್ಕೆ ಚಿಂತೆ ?

ಜೇಮ್ಸ್.—ಹಾಗಲ್ಲ ; ನನಗಾಗಿ ನೀನು ಹಣವನ್ನು ಕಳೆದುಕೊಳ್ಳುವುದು ಸರಿಯಲ್ಲ.

ಥಾಮುಸ್ಸ್.—ನಾನು ಸಮ್ಮತಿಸಿದರೆ ಸರಿಯಷ್ಟೆ ?

ಜೇಮ್ಸ್.—ಹಾಗಾದರೆ ಇದಕ್ಕೆ ನಾನೊಂದು ಉಪಾಯವನ್ನು ಮಾಡುತ್ತೇನೆ: ನೀನು ನನಗೆ ಸಾಲವನ್ನು ಕೊಡು. ನಾನು ಐನೂರು ಡಾಲರಿಗೆ ನನ್ನ ಜೀವವನ್ನು ಭೀಮಾ (ಇನ್ಷೂರ್) ಮಾಡುತ್ತೇನೆ. ಒಂದು ವೇಳೆ ನಾನು ಸತ್ತರೆ ನಿನ್ನ ಹಣವು ಹೋಗುವುದಿಲ್ಲ.

ಥಾಮುಸ್ಸ್.—ಈ ಉಪಾಯದಿಂದ ನಿನಗೆ ಹೆಚ್ಚು ಅನುಕೂಲವುಂಟಾಗುವುದಾದರೆ ನನ್ನ ಆಕ್ಷೇಪಣೆಯೇನೂ ಇಲ್ಲ.

ಜೇಮ್ಸ್.—ಇದರಿಂದ ನನ್ನ ಮನಸ್ಸು ನಿರಾತಂಕವಾಗಿರಬಹುದು

ಮೇಲ್ಕಂಡ ಒಪ್ಪಂದದ ಮೇರೆಗೆ ಜೇಮ್ಸ್ ತನ್ನ ಜೀವವನ್ನು ಐನೂರು ಡಾಲರಿಗೆ ಭೀಮಾ ಮಾಡಿ ಆ ಪತ್ರವನ್ನು ತನ್ನ ಅಣ್ಣನ ವಶಕ್ಕೆ ಕೊಡುವಾಗ, "ನಾನು ಬದುಕಿದ್ದರೆ ನಿನ್ನ ಸಾಲವನ್ನು ತೀರಿಸುತ್ತೇನೆ; ಸತ್ತರೂ ನಿನಗೆ ಹಣ ನಷ್ಟವಾಗುವುದಿಲ್ಲ. ನನ್ನಂತೆಯೇ ನೀನೂ ಈ ಸಾಲದ ವಿಷಯದಲ್ಲಿ ನಿಶ್ಚಿಂತನಾಗಿರು" ಎಂದು ಮುಗುಳ್ನಗೆಯೊಡನೆ ಹೇಳಿದನು.

# ಅಧ್ಯಾಯ ೧೯

## ಕಾಲೇಜಿನ ವ್ಯಾಸಂಗ

ಮಸಾಚುಸೆಟ್ಸ್ ಸಂಸ್ಥಾನದಲ್ಲಿರುವ ವಿಲಿಯಮ್ಸ್ ಕಾಲೇಜಿಗೆ ಪ್ರವೇಶ ಪರೀಕ್ಷೆಯ ಕಾಲಕ್ಕೆ ಸರಿಯಾಗಿ ಜೇಮ್ಸ್ ಬಂದು ಸೇರಿದನು. ಕಾಲೇಜಿನ ಅಧ್ಯಕ್ಷನಾದ ಹಾಪ್‌ಕಿನ್ಸನ ಮುಂದೆ ಬಂದು ನಿಂತು ಅವನು, "ಸ್ವಾಮೀ! ನನ್ನ ಹೆಸರು ಜೇಮ್ಸ್ ಏಬ್ರಾಮ್ ಗಾರ್ಫೀಲ್ಡ್; ಓಹಿಯೋ ಸಂಸ್ಥಾನದಿಂದ ವಿದ್ಯಾರ್ಜನೆಗಾಗಿ ಬಂದಿದ್ದೇನೆ. ತಮ್ಮ ಕಾಲೇಜಿಗೆ ಸೇರಬಹುದೆಂದು ತಾವು ಅಪ್ಪಣೆ ಕೊಡಿಸಿದ್ದ ಕಾಗದಕ್ಕೆ ನಾನು ಪ್ರತ್ಯುತ್ತರವನ್ನು ಬರೆದಿದ್ದೆನು; ಅದು ತಮಗೆ ಮುಟ್ಟಿರಬಹುದು" ಎಂದು ಹೇಳಲು, ಅಧ್ಯಕ್ಷನಿಗೆ ಅವನ ಕಾಗದದ ಒಕ್ಕಣೆಯ ಸೊಗಸು ಸ್ಮರಣೆಗೆ ಬಂದು, ಆತನು ಅತ್ಯಾದರದಿಂದ ಜೇಮ್ಸನ ಕೈಹಿಡಿದುಕೊಂಡು, "ಬಹಳ ಸಂತೋಷ; ನಮ್ಮ ಕೈಯಲ್ಲಾಗುವ ಸಹಾಯವನ್ನು ಮಾಡುತ್ತೇವೆ; ಶ್ರದ್ಧೆಯಿಂದ ಓದಿ ವಿದ್ವಾಂಸನಾಗಿ ಕೀರ್ತಿಯನ್ನು ಪಡೆ" ಎಂದು ಹೇಳಿದನು. ವೃದ್ಧನಾಗಿಯೂ ಪರಮ ತೇಜಸ್ವಿಯಾಗಿಯೂ ದಯಾಳುವಾಗಿಯೂ ಇರುವ ಈ ವಿದ್ಯಾಗುರುವಾದ ಡಾಕ್ಟರ್ ಹಾಪ್‌ಕಿನ್ಸನ್ನು ತಂದೆಯಂತೆ ಭಾವಿಸಿ ಜೇಮ್ಸ್ ಹರ್ಷಿತನಾದನು.

ಜೇಮ್ಸ್ ಪ್ರವೇಶ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಮೂರನೆಯ ವರ್ಷದ ವ್ಯಾಸಂಗದ ತರಗತಿಗೆ ಸೇರಿದನು. ಅಧ್ಯಕ್ಷನು ಪರಮ ವಿಶ್ವಾಸದಿಂದ ಅವನಿಗೆ ವ್ಯಾಸಂಗ ಕ್ರಮವನ್ನೂ ಅವನು ಓದಬೇಕಾದ ಗ್ರಂಥಗಳನ್ನೂ ತಿಳಿಸಿ, "ಜೆಮ್ಸ್! ಈ ಬೇಸಗೆಯ ರಜದಲ್ಲಿ ನೀನು ಇಲ್ಲಿಯೇ ಇದ್ದರೆ ನಮ್ಮ ಪುಸ್ತಕ ಭಂಡಾರದಲ್ಲಿ ನಿನಗೆ ಬೇಕಾದ ಗ್ರಂಥಗಳನ್ನು ಓದಬಹುದು; ಹಬ್ಬದ ಊಟದಂತೆ ನಮ್ಮಲ್ಲಿರುವ ಪ್ರೌಢ ಗ್ರಂಥಗಳು ನಿನಗೆ ತೃಪ್ತಿಯನ್ನುಂಟುಮಾಡುವುವು" ಎಂದು ಹೇಳಿದನು. "ರಜದಲ್ಲಿ ನಾನು ಇಲ್ಲಿಯೇ ಇರುತ್ತೇನೆ. ಪುಸ್ತಕಗಳನ್ನು ಉಪಯೋಗಿಸಲು ಅನುಮತಿಯನ್ನಿತ್ತುದಕ್ಕೆ ನಾನು ಕೃತಜ್ಞನಾಗಿದ್ದೇನೆ. ನನ್ನ ಇಷ್ಟಾನುಸಾರವಾಗಿ ಪ್ರೌಢ ಗ್ರಂಥಗಳನ್ನೋದಲು ನನಗೆ ಇದುವರೆಗೂ

ಬಿಡುವಿರಲಿಲ್ಲ. ನಾನೇ ದುಡಿದು ನನ್ನ ವೆಚ್ಚಕ್ಕೆ ಹಣವನ್ನು ಸಂಪಾದಿಸ ಬೇಕಾಗಿದ್ದಿತು. ಈಗ ತಾಪತ್ರಯಗಳಾವುವೂ ಇಲ್ಲದೆ ಈ ರಜದಲ್ಲಿ ನಾನು ಗ್ರಂಥವ್ಯಾಸಂಗದಲ್ಲಿದ್ದರೆ ನನಗೆ ಹಬ್ಬದಂತೆಯೇ ಇರುವುದು'' ಎಂದು ವಿನಯದಿಂದ ಜೇಮ್ಸು ಉತ್ತರವನ್ನು ಕೊಟ್ಟನು.

ಜೇಮ್ಸಿಗಿದ್ದ ಗ್ರಂಥ ಪಠನ ಕ್ಷುತ್ತಿಗೆ ಈ ಪುಸ್ತಕಾಲಯದಲ್ಲಿ ಅಮೃತ ಪ್ರಾಯವಾದ ವಿಷಯಗಳಿರುವ ಗ್ರಂಥಗಳು ಪುಷ್ಕಳವಾಗಿದ್ದುವು. ಮಾನವ ಸ್ವಭಾವ ಜ್ಞಾನ ವಿಶಾರದನಾಗಿಯೂ, ಇಂಗ್ಲಿಷು ಭಾಷಾ ಚಕ್ರವರ್ತಿಯಾಗಿಯೂ, ರೂಪಕ ಕವಿ ತಿಲಕನಾಗಿಯೂ ಇದ್ದ ಷೇಕ್ಸ್‌ಪಿಯರ್ ಎಂಬಾತನ ರೂಪಕ ಕಾವ್ಯಗಳನ್ನು ಸಮಗ್ರವಾಗಿ ಓದಬೇಕೆಂಬ ಆಸೆ ಜೇಮ್ಸಿಗೆ ಬಹು ದಿವಸದಿಂದಲೂ ಇದ್ದಿತು. ಈಗ ಆ ಮಹಾ ಕವಿಯ ನಾಟಕಗಳನ್ನು ವ್ಯಾಸಂಗ ಮಾಡಿ ಸಂತುಷ್ಟನಾದನು. ಪ್ರಸಿದ್ಧರಾದ ಇತರ ಕವಿಗಳ ಕಾವ್ಯಗಳನ್ನೂ, ಒಂದಾಗುತ್ತಲೊಂದನ್ನು ಪಠಿಸಿ, ಅವುಗಳ ಮುಖ್ಯ ಮುಖ್ಯ ಪದ್ಯಗಳನ್ನು ಕಂಠ ಪಾಠ ಮಾಡಿಟ್ಟು ಕೊಂಡನು. ಸಂವಿಧಾನ ಚಾತುರ್ಯದಿಂದ ಶೋಭಿಸುವ ಕಲ್ಪನಾ ಕಥೆಗಳಲ್ಲಿ ಜೇಮ್ಸಿಗೆ ಈಗ ಅಭಿರುಚಿಯಿರಲಿಲ್ಲ. ಅಲ್ಲದೆ, ಅವುಗಳನ್ನು ಓದುವುದು ಸರಿಯಲ್ಲವೆಂದು ಡಿಸೈಪಲ್ಸ್ ಪಂಗಡದವರ ಅಭಿಪ್ರಾಯವೂ ಇದ್ದಿತು. ಆ ಬೇಸಗೆಯ ರಜದಲ್ಲಿ ಮಾಡಿದ ಗ್ರಂಥ ಪಠನದಿಂದ ಜೇಮ್ಸಿಗೆ ವಿಶೇಷ ಪ್ರಯೋಜನವುಂಟಾಯಿತು. ಅಂಗ ಸಾಧನೆಗಾಗಿ ಅವನು ಸುತ್ತಮುತ್ತಲೂ ಇದ್ದ ಕಾಡು ಗುಡ್ಡಗಳಿಗೆ ಹೋಗಿ ಸುತ್ತುತ್ತಿದ್ದುದರಿಂದ ದೈವ ಸೃಷ್ಟಿಯ ಸೌಂದರ್ಯ ಗಾಂಭೀರ್ಯಗಳು ಅವನಿಗೆ ಪರಮಾನಂದವನ್ನುಂಟುಮಾಡುತ್ತಿದ್ದುವು. ಕೆಲವು ಕಾಲದಲ್ಲಿಯೇ ಜೇಮ್ಸಿಗೆ ಆ ಸುತ್ತಿನ ಪ್ರದೇಶವೆಲ್ಲವೂ ಚೆನ್ನಾಗಿ ಬಳಕೆಯಾಯಿತು.

ಜೇಮ್ಸನ ವಿಷಯದಲ್ಲಿ ಅವನ ಜೊತೆಗಾರರಿಗಿದ್ದ ಅಭಿಪ್ರಾಯವು ಇಲ್ಲಿ ಕೊಡುವ ಸ್ನೇಹಿತರಿಬ್ಬರ ಸಂಭಾಷಣೆಯಿಂದ ಹೊರಪಡುವುದು.

ಮೊದಲನೆಯವ.—ಏನಯ್ಯಾ! ಪಶ್ಚಿಮ ಪ್ರಾಂತದಿಂದ ಬಂದಿರುವ ಆ ಜೇಮ್ಸನ್ನು ನೀನು ನೋಡಿದೆಯಾ? ನಿನಗೆ ಅವನ ಪರಿಚಯವುಂಟೊ?

ಎರಡನೆಯವ.—ಸ್ವಲ್ಪ ಮಟ್ಟಿಗುಂಟು. ನಿನಗೂ ?

ಮೊದಲನೆಯವ.—ನನಗೂ ಸ್ವಲ್ಪವುಂಟು.

ಎರಡನೆಯವ.—ಅವನ ಕೋಟು ಷರಾಯಿಗಳನ್ನು ನೋಡಿದರೆ, ಅವನು ನಮ್ಮ ಪ್ರಾಂತದ ವಿಚಿತ್ರ ವಸ್ತ್ರ ಭೂಷಣಗಳಿಗೂ ಲೋಕಾಚಾರಗಳಿಗೂ ಸಿಕ್ಕಿಬಿದ್ದಿಲ್ಲವೆಂದು ಹೇಳಬೇಕಾಗಿದೆ.

ಮೊದಲನೆಯವ.—ಜೇಮ್ಸ್‌ನಿಗೂ ದರ್ಜಿಯವನಿಗೂ ಸ್ನೇಹವಿರುವಂತೆ ತೋರುವುದಿಲ್ಲವಾದರೂ ಜೇಮ್ಸ್‌ನಿಗೆ ಅದರಿಂದ ನ್ಯೂನತೆಯಿಲ್ಲ. ಅವನಿಗೆ ಒಳ್ಳೆಯ ಬಟ್ಟೆಗಳನ್ನು ಮಾತ್ರ ತೊಡಿಸಿದರೆ ಅವನು ದಿವ್ಯ ಪುರುಷನಂತೆ ಶೋಭಿಸುವನು.

ಎರಡನೆಯವ.—ಅವನ ಬಟ್ಟೆಗಳು ಹೇಗಿದ್ದರೇನು ? ಅವುಗಳಿಂದ ಅವನ ಸದ್ಗುಣವೂ ಅಸಾಧಾರಣ ಪಾಂಡಿತ್ಯವೂ ಹೆಚ್ಚಾಗಿ ಶೋಭಿಸುವಂತಿಲ್ಲ. ಬಟ್ಟೆಯ ಸೊಬಗಿನಿಂದ ಬುದ್ಧಿಯ ಸೊಬಗೂ ಹೆಚ್ಚುವುದಾಗಿದ್ದರೆ ನಮ್ಮೆಲ್ಲನೇಕರು ಚಿಪ್ಪಿಗನಿಗೆ ಹೆಚ್ಚು ಕೂಲಿಯನ್ನು ಕೊಡುತ್ತಿದ್ದರು. ಎಂತಹ ಕಷ್ಟವನ್ನಾದರೂ ಅನುಭವಿಸಿ ವ್ಯುತ್ಪತ್ತಿಯನ್ನು ಪಡೆದು ವಿದ್ವಾಂಸನಾಗಬೇಕೆಂದು ಜೇಮ್ಸ್ ಸಂಕಲ್ಪ ಮಾಡಿರುತ್ತಾನೆ. ಅವನಲ್ಲಿ ಅದ್ಭುತ ಶಕ್ತಿಯಿದೆ. ಹಾಗಿಲ್ಲದಿದ್ದರೆ ಕಾಲೇಜಿನಲ್ಲಿ ಎರಡು ವರ್ಷಗಳ ಕಾಲವನ್ನು ಕಡಿಮೆ ಮಾಡಿಕೊಳ್ಳಲು ಸಾಧ್ಯವಾಗುತ್ತಿರಲಿಲ್ಲ. ಅವನ ಬುದ್ಧಿಯು ಬಹು ಸೂಕ್ಷ್ಮವಾಗಿದೆ. ನಿರ್ಣಯ ಜ್ಞಾನವು ಅವನಲ್ಲಿ ಹೆಚ್ಚಾಗಿದೆ. ಅವನು ಎಲ್ಲ ವಿಷಯಗಳನ್ನೂ ಗ್ರಹಿಸಬಲ್ಲನು; ಒಂದು ಪ್ರಶ್ನೆಗಾದರೂ ತಪ್ಪಾದ ಉತ್ತರವನ್ನು ಹೇಳುವುದಿಲ್ಲ. ಇಂಗ್ಲಿಷು, ಲ್ಯಾಟಿನ್ನು, ಗ್ರೀಕು, ಫ್ರೆಂಚು, ಜರ್ಮನ್—ಈ ಐದು ಭಾಷೆಗಳಲ್ಲಿಯೂ ಅವನಿಗೆ ಪರಿಶ್ರಮವುಂಟು. ಅಷ್ಟೇಕೆ? ಅವನನ್ನು ಪಂಚ ಭಾಷಾ ವಿಶಾರದನೆನ್ನಬಹುದು. ಅವನು ಮುಂದೆ ಪ್ರಸಿದ್ಧ ಪುರುಷನಾಗುವುದರಲ್ಲಿ ಸಂದೇಹವುಂಟೆ ?

ವಿಲಿಯಮ್ಸ್ ಕಾಲೇಜಿನ ವಿದ್ವಾಂಸರು ತಮ್ಮ ಕಾಲೇಜಿನ ಯುವಕರ ಜ್ಞಾನಾಭಿವೃದ್ಧಿಗಾಗಿ ತ್ರೈಮಾಸಿಕ ಪತ್ರಿಕೆಯೊಂದನ್ನು ಮುದ್ರಿಸಿ ಪ್ರಚುರಪಡಿಸುತ್ತಿದ್ದರು. ಆ ಪ್ರೌಢ ಪತ್ರಿಕೆಗೆ ಜೇಮ್ಸ್ ಲೇಖನಗಳನ್ನೂ, ಆಗಾಗ ನವ ರಸ ಭರಿತವಾದ ಪದ್ಯಗಳನ್ನೂ ಬರೆದು ಕೊಡುತ್ತಿದ್ದನು.

ಜೇಮ್ಸನ ಸಹಪಾಠಿಯೊಬ್ಬನು ಜೇಮ್ಸನ ಕಾಲೇಜು ವ್ಯಾಸಂಗದ ವಿಷಯದಲ್ಲಿ ಹೀಗೆ ಬರೆದಿರುತ್ತಾನೆ :—''ನಲವತ್ತು ಮಂದಿ ಯುವಕರಲ್ಲಿ, ಪ್ರತಿಯೊಂದು ವಿಚಾರದಲ್ಲಿಯೂ ಜೇಮ್ಸನ ಪ್ರತಿಭಾ ಶಕ್ತಿಯೂ ನಿರ್ದಿಷ್ಟ ಜ್ಞಾನವೂ ಹೊರಪಡುತ್ತಿದ್ದುವು. ಪ್ರಬಂಧ ರಚನೆ, ವಾಗ್ವಾದ, ತರ್ಕ—ಇವುಗಳಲ್ಲಿ ಅವನನ್ನು ಮೀರಿಸಿದವರೇ ಇರಲಿಲ್ಲ. ಪ್ರತಿಯೊಂದು ವಿಷಯವನ್ನೂ ಅವನು ಕೂಲಂಕಷವಾಗಿ ವಿಚಾರ ಮಾಡಿ ತಿಳಿದು ಕೊಳ್ಳುತ್ತಿದ್ದನು. ವ್ಯರ್ಥ ಕಾಲಕ್ಷೇಪವನ್ನು ಮಾಡದೆ ಕಾರ್ಯ ತತ್ಪರನಾಗಿರುತ್ತಿದ್ದರೂ ಅವನು ಸ್ನೇಹಿತರ ಗುಂಪಿಗೆ ಸೇರದೆ ಇರುತ್ತಿರಲಿಲ್ಲ. ಅವನಿದ್ದ ಗುಂಪು ಸಂತೋಷದಿಂದ ನಲಿದಾಡುತ್ತಿದ್ದಿತು. ವಾಗ್ವಾದ ಸಂಘದಲ್ಲಿ ಜೇಮ್ಸ್ ತನ್ನ ಪಕ್ಷದವರಲ್ಲಿ ಒಬ್ಬೊಬ್ಬರಿಗೊಂದೊಂದು ಅಂಶವನ್ನು ಹಂಚಿಕೊಟ್ಟು, ಅವರವರು ಅದರದರ ವಿಚಾರವನ್ನು ಶೋಧನೆ ಮಾಡಿ ವಿಷಯಗಳನ್ನು ಸಂಗ್ರಹಿಸಬೇಕೆಂದು ಗೊತ್ತುಮಾಡು ತ್ತಿದ್ದನು. ಅನಂತರ ಎಲ್ಲರೂ ಸೇರಿಸಿದ್ದ ವಿಷಯಗಳನ್ನು ಜೇಮ್ಸ್ ವಿಭಜಿಸಿ ಅವರವರ ಭಾಗಗಳನ್ನು ಅವರವರಿಗೆ ತಿಳಿಸಿದ ಮೇಲೆ ಎಲ್ಲರೂ ವಾಗ್ವಾದಕ್ಕೆ ಹೊರಟು ಜಯಶಾಲಿಗಳಾಗುತ್ತಿದ್ದರು. ಹಿಡಿದ ಕೆಲಸವನ್ನು ಸಾಂಗೋಪಾಂಗವಾಗಿ ಮಾಡುವುದು ಜೇಮ್ಸನ ಸ್ವಭಾವವೆನ್ನ ಬಹುದು. ಅವನ ಪ್ರತಿಭಾ ವಿಶೇಷದಿಂದ ನಮ್ಮೆಲ್ಲರಿಗೂ ವಿಶೇಷ ಪ್ರಯೋಜನವುಂಟಾಯಿತು.''

ಮೊದಲನೆಯ ವರ್ಷದ ಚಳಿಗಾಲದ ರಜದಲ್ಲಿ ಜೇಮ್ಸ್ ವರ್ಮಾಂಟ್ ಎಂಬ ಸಂಸ್ಥಾನದಲ್ಲಿ ಲೇಖನ ಶಿಕ್ಷಾ ಶಾಲೆಯೊಂದನ್ನಿಟ್ಟನು. ಅವನ ಖ್ಯಾತಿಯು ಆ ಪ್ರಾಂತದಲ್ಲಿಯೂ ಹರಡಿದ್ದುದರಿಂದ ಅವನ ಶಾಲೆಗೆ ಅನೇಕರು ವ್ಯಾಸಂಗಕ್ಕೆ ಬಂದರು. ಜೇಮ್ಸಗೆ ಹೆಚ್ಚಾಗಿ ಧನ ಸಂಪಾದನೆ

ಯಾದುದಲ್ಲದೆ, ಆ ಪ್ರಾಂತದ ಜನರ ಪರಿಚಯವೂ ಲೋಕಾನುಭವವೂ ದೊರೆತುವು. ಎರಡನೆಯ ವರ್ಷದ ಚಳಿಗಾಲದ ರಜದಲ್ಲಿ ಜೇಮ್ಸ್ ನ್ಯೂಯಾರ್ಕ್ ಸಂಸ್ಥಾನಕ್ಕೆ ಹೋಗಿ ಟ್ರಾಯ್ ಎಂಬ ಪಟ್ಟಣದ ಸಮೀಪ ದಲ್ಲಿರುವ ಒಂದು ಹಳ್ಳಿಯಲ್ಲಿ ಲೇಖನ ಶಿಕ್ಷಾ ಶಾಲೆಯೊಂದನ್ನಿಟ್ಟನು. ಅಲ್ಲಿಗೂ ಅನೇಕರು ವ್ಯಾಸಂಗಕ್ಕೆ ಬಂದರು. ಆ ಸ್ಥಳದಲ್ಲಿ ಡಿಸೈಪಲ್ಸ್ ಪಂಗಡದ ಪ್ರಾರ್ಥನಾ ನಿಲಯವೊಂದಿದ್ದಿತು. ಅಲ್ಲಿಯ ಧರ್ಮೋಪ ದೇಶಕನು ಜೇಮ್ಸಿನ ಅಸಾಧಾರಣ ಸಾಮರ್ಥ್ಯವನ್ನು ನೋಡಿ ಮೆಚ್ಚಿ ಪ್ರಾರ್ಥನಾ ಮಂದಿರದಲ್ಲಿ ಧರ್ಮ ಪ್ರವಚನವನ್ನು ಮಾಡಬೇಕೆಂದು ಅವನನ್ನು ಬೇಡಿಕೊಂಡನು. ವಾರ ವಾರಕ್ಕೆ ಜನರ ಗುಂಪು ಹೆಚ್ಚುತ್ತ ಬಂದಿತು. ಟ್ರಾಯಿಯ ಜನರೂ ಅಲ್ಲಿಗೆ ಬರುವುದಕ್ಕೆ ಪ್ರಾರಂಭಿಸಿದರು. ಅವರು ಜೇಮ್ಸಿನ ಸಾಮರ್ಥ್ಯವನ್ನು ಬಗೆ ಬಗೆಯಿಂದ ವರ್ಣಿಸುತ್ತ ಡಿಸೈಪಲ್ಸ್ ಪಂಗಡದ ಧರ್ಮೋಪದೇಶಕ ಮಂಡಲಿಯಲ್ಲಿ ಇವನು ಅಗ್ರಗಣ್ಯನಾಗಿರುವುದರಲ್ಲಿ ಸಂದೇಹವೇ ಇಲ್ಲವೆಂದು ಹೇಳುತ್ತಿದ್ದರು.

ಟ್ರಾಯ್ ಪಟ್ಟಣದಲ್ಲಿ ಪ್ರಖ್ಯಾತವಾಗಿದ್ದ ಮಾಧ್ಯಮಿಕ ವಿದ್ಯಾಶಾಲೆ (High School) ಯೊಂದಿದ್ದಿತು. ಅದರ ಕಾರ್ಯ ನಿರ್ವಾಹ ಮಂಡಲಿಯವರು ಜೇಮ್ಸನ್ನು ಉಪಾಧ್ಯಾಯನನ್ನಾಗಿ ನಿಯಮಿಸ ಬೇಕೆಂದು ನಿಶ್ಚಯಿಸಿ, ಬ್ರುಕ್ಸ್ ಎಂಬ ದೊಡ್ಡಮನುಷ್ಯನನ್ನು ಅವನ ಬಳಿಗೆ ಕಳುಹಿಸಿದರು. "ಅಯ್ಯಾ ಜೇಮ್ಸ್! ನಮ್ಮ ಊರಿನ ಹೈಸ್ಕೂಲಿಗೆ ಸಮರ್ಥನಾದ ಉಪಾಧ್ಯಾಯನೊಬ್ಬನು ಬೇಕು. ವರ್ಷಕ್ಕೆ ೧,೨೦೦ ಡಾಲರು ಸಂಬಳವನ್ನು ಕೊಡುತ್ತೇವೆ. ನೀನು ಒಪ್ಪಿಕೊಂಡು ಬರುವುದಾದರೆ ನಮಗೆಲ್ಲ ಬಹು ಸಂತೋಷವಾಗುವುದು" ಎಂದು ಆತನು ಹೇಳಿದನು.

ಜೇಮ್ಸ್.—ಈಗಲೇ ನಾನು ಕೆಲಸಕ್ಕೆ ಸೇರಬೇಕೊ? ಇನ್ನೂ ಕೆಲವು ಕಾಲವಾದ ಮೇಲೆ ಆಗಬಹುದೊ?

ಬ್ರುಕ್ಸ್.—ಈಗಲೇ ಸೇರಬೇಕು. ಮುಂದಿನ ವಾರದಲ್ಲಿ ಶಾಲೆಯು ಪ್ರಾರಂಭವಾಗುವುದು.

ಜೇಮ್ಸ್.—ಈಗ ನಾನು ಕೆಲಸವನ್ನೊಪ್ಪಿಕೊಂಡರೆ ಕಾಲೇಜಿನ ವ್ಯಾಸಂಗವನ್ನು ಬಿಡಬೇಕಾಗುವುದು.

ಬ್ರುಕ್ಸ್.—ನಿಜ; ಆದರೆ ಇದರಿಂದ ನಿನಗೆ ವಿಶೇಷ ಪ್ರಯೋಜನ ವಾಗುವುದು.

ಜೇಮ್ಸ್.—ಆಗುವುದಿಲ್ಲ; ಹೇಗಾದರೂ ಮಾಡಿ ನಾನು ವಿಲಿಯಮ್ಸ್ ಕಾಲೇಜಿನಲ್ಲಿ ಬಿ.ಎ. ಪರೀಕ್ಷೆಯಲ್ಲಿ ತೇರ್ಗಡೆಯಾಗಬೇಕೆಂದು ಸಂಕಲ್ಪಿಸಿದ್ದೇನೆ. ಎಣ್ಣೆ ಬರುವಾಗ ಕಣ್ಣು ಮುಚ್ಚಿಕೊಳ್ಳು ವುದು ವಿವೇಕವಲ್ಲ.

ಬ್ರುಕ್ಸ್.—ನಿನ್ನ ವಿಚಾರವನ್ನು ನೀನೇ ಬಲ್ಲೆ; ನಮ್ಮ ಕೋರಿಕೆಯಂತೆ ನೀನು ಇಲ್ಲಿ ಉಪಾಧ್ಯಾಯನಾದರೆ ನಮಗೆಲ್ಲ ಬಹು ಸಂತೋಷ ವಾಗುವುದು. ನಿನಗೆ ಉಚಿತವೆಂದು ತೋರುವ ರೀತಿಯಲ್ಲಿ ನಡೆ.

ಜೇಮ್ಸ್.—ಅಷ್ಟೇ ಅಲ್ಲ; ಇನ್ನೊಂದು ಅಡ್ಡಿಯೂ ಇದೆ. ಕಾಲೇಜಿನ ವ್ಯಾಸಂಗಕ್ಕೆ ಯೋಗ್ಯತೆಯನ್ನು ಪಡೆಯುವುದಕ್ಕಾಗಿ ನಾನು ಹೀರಾಮಿನ ವಿದ್ಯಾ ಶಾಲೆಯಲ್ಲಿ ಓದಿದೆನು. ಅಲ್ಲಿಯ ಕಾರ್ಯ ನಿರ್ವಾಹಕ ಸಮಿತಿಯವರು ನನಗೆ ನಾನಾ ವಿಧಗಳಲ್ಲಿ ಸಹಾಯ ಮಾಡಿರುತ್ತಾರೆ. ಕಾಲೇಜಿನ ವ್ಯಾಸಂಗವು ಮುಗಿದ ಮೇಲೆ ನಾನು ಅಲ್ಲಿಯೇ ಉಪಾಧ್ಯಾಯನಾಗಿರಬೇಕೆಂದು ಅವರು ಅಪೇಕ್ಷಿಸಿದರು. ಅದಕ್ಕೆ ನಾನು ಒಪ್ಪಿದ್ದೇನೆ. ಆ ಶಾಲೆಗೆ ನನ್ನ ಕೃತಜ್ಞತೆಯನ್ನು ತೋರಿಸಿ ನನ್ನ ಕೈಯಲ್ಲಾಗುವ ಸಹಾಯ ಮಾಡಿ, ಅದನ್ನು ಇನ್ನೂ ಉನ್ನತ ಸ್ಥಿತಿಗೆ ತರುವುದು ನನ್ನ ಧರ್ಮವಾಗಿದೆ.

ಬ್ರುಕ್ಸ್.—ಈಗಲೇ ಈ ವಿಚಾರವನ್ನು ನೀನು ವ್ಯವಸ್ಥೆ ಮಾಡಬೇಕಾ ಗಿಲ್ಲ; ಇನ್ನೂ ಆಲೋಚನೆ ಮಾಡು.

ಜೇಮ್ಸ್.—ಆವಶ್ಯಕವಿಲ್ಲ; ಈಗಲೇ ಉತ್ತರವನ್ನು ಹೇಳುತ್ತೇನೆ: ನೀವು ಕೊಡುವ ಸಂಬಳವು ನನ್ನ ಮನಸ್ಸನ್ನು ಆಕರ್ಷಿಸು

> ತ್ತಿದೆ. ಅದರಿಂದ ನನಗಿರುವ ಸಾಲವನ್ನು ನಾನು ಬೇಗನೆ ತೀರಿಸ ಬಹುದು. ಹೀರಾಮಿನಲ್ಲಿ ನನಗೆ ಇಷ್ಟು ಸಂಬಳವು ದೊರೆಯು ವುದಿಲ್ಲ. ನನಗೆ ನಾನಾ ವಿಧಗಳಲ್ಲಿ ಉಪಕಾರವನ್ನು ಮಾಡಿರುವ ಹೀರಾಮಿನ ಪಾಠಶಾಲೆಯ ಸೇವೆಯನ್ನು ನಾನು ಬಿ.ಎ. ಪರೀಕ್ಷೆಯನ್ನು ಮಾಡಿದನಂತರ ಕೈಕೊಳ್ಳುವುದೇ ನನ್ನ ಕರ್ತವ್ಯವಾಗಿದೆ. ನನಗೆ ಉಪಕಾರವನ್ನು ಮಾಡಬೇಕೆಂದು ನಿಶ್ಚಯಿಸಿದುದಕ್ಕಾಗಿ ನಾನು ನಿಮಗೆ ಕೃತಜ್ಞನಾಗಿದ್ದೇನೆ. ನೀವು ಹೇಳುವ ಕೆಲಸವನ್ನೊಪ್ಪಿಕೊಳ್ಳುವುದು ನನಗೆ ಹಿತಕರ ವಾಗಿದ್ದರೂ ನಿಮ್ಮ ಕೋರಿಕೆಯಂತೆ ನಡೆಯಲು ನನಗೆ ಸಾಧ್ಯವಿಲ್ಲ.

ತನ್ನ ದೃಢ ಸಂಕಲ್ಪವನ್ನು ಸಾಧಿಸಲು ಅಡ್ಡಿಯಾಗುತ್ತಿದ್ದುದರಿಂದ ಜೇಮ್ಸ್ ಮೇಲ್ಕಂಡ ರೀತಿಯಲ್ಲಿ ಉತ್ತರವನ್ನಿತ್ತನು. ಇದು ಅವನ ಮನೋದಾರ್ಢ್ಯವನ್ನು ಪ್ರಕಾಶಪಡಿಸುವುದು.

ಕಾಲೇಜಿನ ಎರಡನೆಯ ವರ್ಷದಲ್ಲಿ ಜೇಮ್ಸನಿಗೆ ಹಣಕ್ಕಾಗಿ ಬಹಳ ತೊಂದರೆಯಾಯಿತು; ಅಲ್ಲಲ್ಲಿ ಸಾಲವೂ ಹೆಚ್ಚಿತು. ಥಾಮಸ್ಸಿಗೆ ಕೆಲವು ನಷ್ಟಗಳು ಸಂಭವಿಸಿದ್ದುದರಿಂದ, ಅವನಿಂದ ಯಾವ ಹಣವೂ ಬರು ವಂತಿರಲಿಲ್ಲ. ಈ ಸಂದರ್ಭದಲ್ಲಿ ಜೇಮ್ಸ್ ತನ್ನನ್ನು ಆರು ವರ್ಷಗಳ ಹಿಂದೆ ಪರೀಕ್ಷಿಸಿ ವಿದ್ಯೆಯನ್ನು ಶ್ರದ್ಧೆಯಿಂದ ಕಲಿಯೆಂದು ಪ್ರೋತ್ಸಾಹಿ ಸಿದ್ದ ವೈದ್ಯನಿಗೆ ಕಾಗದವನ್ನು ಬರೆದನು. ಆತನು ಆಗ ಧನಿಕನಾಗಿ ಕ್ಲೀವ್ಲಾಂಡಿನ ಸಮೀಪದಲ್ಲಿದ್ದನು. ತನ್ನ ಜೀವವಿಮೆಯ ಆಧಾರದ ಮೇಲೆಯೂ, ಮುಂದೆ ತಾನು ಹೀರಾಮಿನಲ್ಲಿ ಉಪಾಧ್ಯಾಯನಾಗಿ ಸಾಲವನ್ನು ತೀರಿಸುವ ನಿರೀಕ್ಷಣೆಯ ಮೇಲೆಯೂ, ತನಗೆ ಸಾಲವನ್ನು ಕೊಟ್ಟು ಸಹಾಯ ಮಾಡಿ ಕೀರ್ತಿಯನ್ನು ಪಡೆಯಬೇಕೆಂದು ಆತನನ್ನು ಜೇಮ್ಸ್ ಬೇಡಿಕೊಂಡನು. ತನ್ನ ಹೇಳಿಕೆಯೆಲ್ಲವೂ ನಿದರ್ಶನಕ್ಕೆ ಬಂದಿ ತೆಂದು ಆತನು ಸಂತೋಷಪಟ್ಟು ಜೇಮ್ಸನಿಗೆ ಹಣವನ್ನು ಒಡನೆಯೇ ಕಳುಹಿಸಿಕೊಟ್ಟನು.

ಚಾರಲ್ಸ್ ಸಮ್ನರ್ ಎಂಬ ಮಹನೀಯನು, ಗುಲಾಮರ ಮಾರಾಟವು ದೇಶಕ್ಕೆ ಅವಮಾನವನ್ನು ತರುವ ನೀಚ ಕೃತ್ಯವಾಗಿರುವುದೆಂದು, ಸಂಯುಕ್ತ ಸಂಸ್ಥಾನಗಳ ಮಹಾ ಸಭೆಗಳಲ್ಲಿ ವಾದಿಸಿ ಅನೇಕ ಉಪನ್ಯಾಸಗಳನ್ನು ಮಾಡುತ್ತಿದ್ದನು. ಅವನ ಭಾಷಣಗಳನ್ನು ಜೇಮ್ಸ್ ಬಹಳವಾಗಿ ಹೊಗಳುತ್ತಿದ್ದನು. ೧೮೫೫ರಲ್ಲಿ ಗುಡ್ರಿಕ್ ಎಂಬಾತನು ವಿಲಿಯಮ್ಸ್ ಕಾಲೇಜಿರುವ ಊರಿಗೆ ಬಂದು ಗುಲಾಮರ ಮಾರಾಟದ ಚರಿತ್ರೆಯನ್ನು ವಿವರಿಸಿ ದೇಶಕ್ಕೂ ಕ್ರೈಸ್ತ ಧರ್ಮಕ್ಕೂ ಅದರಿಂದುಂಟಾದ ಅಪಕೀರ್ತಿಯನ್ನು, ಪ್ರತಿವಾದಿಗಳ ಬಾಯಿ ಕಟ್ಟಿಹೋಗುವ ತೆರದಲ್ಲಿ ಪ್ರತಿಪಾದಿಸಿದನು. ಆ ಭಾಷಣವು ಜೇಮ್ಸಿನ ಮನಸ್ಸನ್ನು ಆಕರ್ಷಿಸಿದುದರಿಂದ ಅವನು ಗುಲಾಮರ ಮಾರಾಟದ ವಿಷಯವನ್ನು ಕೂಲಂಕಷವಾಗಿ ತಿಳಿಯಬೇಕೆಂದು ನಿಶ್ಚಯಿಸಿದನು. ಈ ಸಂದರ್ಭದಲ್ಲಿ, ಗುಲಾಮರ ಮಾರಾಟದ ವಿರುದ್ಧ ಪಕ್ಷ ವಾದಿಯಾದ ಫ್ರೀಮಾಂಟ್ ಎಂಬವನು ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ (President) ನಾಗುವ ಸಂಭವವಿದ್ದಿತು. ಇವನೇ ಅಧ್ಯಕ್ಷನಾಗಬೇಕೆಂದು ಸಮರ್ಥಿಸುವುದಕ್ಕಾಗಿ ವಿಲಿಯಮ್ಸ್ ಕಾಲೇಜಿನ ಪ್ರೌಢ ವಿದ್ಯಾರ್ಥಿಗಳು ಒಂದು ಸಭೆಯನ್ನು ಮಾಡಿ ಆ ಸಭೆಯ ಮುಂದೆ ಭಾಷಣ ಮಾಡುವುದಕ್ಕೆ ಜೇಮ್ಸನ್ನು ನಿಯಮಿಸಿದರು. ಜೇಮ್ಸಿನ ಭಾಷಣವು ಉತ್ಕೃಷ್ಟವಾಗಿದ್ದಿತು. ಈ ಮಧ್ಯದಲ್ಲಿ ಇನ್ನೊಂದು ಗಲಭೆಯು ಪ್ರಾರಂಭವಾಯಿತು: ಸಮ್ನರನನ್ನು ಕೊಲ್ಲಬೇಕೆಂದು ಪರಮ ನೀಚನೊಬ್ಬನು ಅವನ ಮನೆಗೆ ನುಗ್ಗಿ ಅವನನ್ನು ದೊಣ್ಣೆಯಿಂದ ಹೊಡೆದನು. ಈ ಸಮಾಚಾರವು ತಿಳಿಯುತ್ತಲೇ ಕಾಲೇಜಿನ ಪ್ರೌಢ ವಿದ್ಯಾರ್ಥಿಗಳು ಮತ್ತೊಂದು ಸಭೆಯನ್ನು ಮಾಡಿದರು. ಆ ಸಮಯದಲ್ಲಿ ಜೇಮ್ಸ್ ಕೋಪಾವೇಶದಿಂದ ಮಾಡಿದ ಭಾಷಣವು ವೀರ ರಸದಿಂದ ತುಂಬಿ ತುಳುಕುತ್ತಿದ್ದಿತು. ಆ ಭಾಷಣವನ್ನು ಎಲ್ಲರೂ ಕೊಂಡಾಡಿದರು. ಜೇಮ್ಸಿನಿಂದ ಗುಲಾಮರ ವ್ಯಾಪಾರವು ನಿಂತು ದೇಶೋದ್ಧಾರವಾಗಬೇಕೆಂದು ಊರಿನವರೆಲ್ಲರೂ ಹೇಳುವುದಕ್ಕೆ ಪ್ರಾರಂಭಿಸಿದರು. ಇವನ ಕೀರ್ತಿಯು ಸರ್ವತೋಮುಖವಾಗಿ ಹರಡುತ್ತಿದ್ದಿತು.

ಕಲ್ಪನಾ ಕಥೆಗಳನ್ನು ಓದುವುದು ಅನುಚಿತವೆಂದು ಜೇಮ್ಸ್ ಭಾವಿಸಿದ್ದನಷ್ಟೆ! ಗ್ರಹಿಸುವುದಕ್ಕೆ ಕಷ್ಟವಾದ ಶಾಸ್ತ್ರಪಾಠ ಮುಂತಾದುವುಗಳನ್ನು ಜೇಮ್ಸ್ ಅವಿಚ್ಛಿನ್ನವಾಗಿ ವ್ಯಾಸಂಗ ಮಾಡುತ್ತಿದ್ದುದರಿಂದ ಅವನ ಬುದ್ಧಿಯು ಜಡವಾಗಿ ಮನಸ್ಸಿಗೆ ಹರ್ಷವೆಂಬುದೇ ಇಲ್ಲವಾಯಿತು. ಸಂವಿಧಾನ ಚಾತುರ್ಯವುಳ್ಳ ಕಲ್ಪನಾ ಕಥೆಗಳನ್ನು ಓದುವಂತೆ ಅವನ ಮಿತ್ರರು ಸಲಹೆಯನ್ನು ಕೊಟ್ಟರು. ಕಲ್ಪನಾ ಕಥೆಗಳನ್ನು ಯಥೋಚಿತವಾಗಿ ಓದುವುದರಿಂದ ಬುದ್ಧಿ ಶಕ್ತಿಗೆ ಹೊರೆಯಿಲ್ಲದೆ ಮನಸ್ಸಿಗೆ ಹರ್ಷವುಂಟಾಗಿ ಬುದ್ಧಿ ವಿಕಸನವೂ ಆಗುವುದೆಂದು ಆಗ ಜೇಮ್ಸ್‌ಗೆ ತಿಳಿಯಬಂದಿತು. ತಿಂಗಳಿಗೊಂದೊಂದು ಕಥೆಯ ಪ್ರಕಾರ ಇಂಗ್ಲಿಷು ಭಾಷೆಯಲ್ಲಿರುವ ಮಹಾ ಪ್ರಸಿದ್ಧ ಕಲ್ಪನಾ ಕಥೆಗಳನ್ನು ಜೇಮ್ಸ್ ಓದಿದನು.

೧೮೫೬ರಲ್ಲಿ ಜೇಮ್ಸ್ ಬಿ.ಎ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ಅಗ್ರಗಣ್ಯನೆಂಬ ಖ್ಯಾತಿಯನ್ನು ಪಡೆದುದಲ್ಲದೆ ಡಾಕ್ಟರ್ ಹಾಪ್‌ಕಿನ್ಸನು ಸ್ಥಾಪಿಸಿದ್ದ ತತ್ತ್ವಶಾಸ್ತ್ರ ಪ್ರಸಂಗದ ಬಹುಮಾನವನ್ನೂ ಪಡೆದನು. ಜೇಮ್ಸ್ ಸಂಯುಕ್ತ ಸಂಸ್ಥಾನಗಳಲ್ಲಿ ಪ್ರಸಿದ್ಧ ಪುರುಷನಾಗಿ ಬಾಳುವನೆಂಬ ಮಾತು ಎಲ್ಲರ ಬಾಯಿಂದಲೂ ಬರುತ್ತಿದ್ದಿತು.

ಕಾಲೇಜಿನ ಅಧ್ಯಕ್ಷನಾದ ಡಾಕ್ಟರ್ ಹಾಪ್‌ಕಿನ್ಸನು ಕೆಲವು ವರ್ಷಗಳ ಮೇಲೆ ಜೇಮ್ಸ್‌ನ ವಿಷಯದಲ್ಲಿ ಹೀಗೆ ಬರೆದಿರುತ್ತಾನೆ :—'' ಜೇಮ್ಸ್‌ನ ರೀತಿಯು ಯುವಕರೆಲ್ಲರೂ ಅನುಸರಿಸತಕ್ಕುದಾಗಿರುವುದು. ಸೇನೆಯನ್ನು ನಡೆಯಿಸುವುದರಲ್ಲಿಯೇ ಆಗಲಿ ಇತರ ಕಾರ್ಯಗಳನ್ನು ನಿರ್ವಹಿಸುವುದರಲ್ಲಿಯೇ ಆಗಲಿ ಜೇಮ್ಸ್‌ನಷ್ಟು ಬೇಗನೆ ಖ್ಯಾತಿಯನ್ನು ಪಡೆದವನು ಮತ್ತೊಬ್ಬನಿಲ್ಲವೆನ್ನಬಹುದು. ತನ್ನ ಸಂಪಾದನೆಯಿಂದಲೇ ವಿದ್ಯೆಯನ್ನು ಕಲಿಯುವುದಕ್ಕೆ ಪ್ರಾರಂಭಿಸಿ ಇತರರು ಊಹಿಸಲೂ ಸಾಧ್ಯವಲ್ಲದಷ್ಟು ಶ್ರದ್ಧೆಯಿಂದ ಅವನು ನಮ್ಮ ಕಾಲೇಜಿನಲ್ಲಿ ವ್ಯಾಸಂಗ ಮಾಡಿದನು. ಅವನ ದಯೆಯೂ ದೈವ ಭಕ್ತಿಯೂ ನಿಷ್ಕಾಪಟ್ಯವೂ ಪೌರುಷವೂ ಪಟುತ್ವವೂ ಎಲ್ಲರಿಗೂ ಮೇಲ್ಪಙ್ಕ್ತಿಯಾಗಿರುವುದು. ಅವನು ಕ್ರಮವಾಗಿ ವ್ಯಾಸಂಗ ಮಾಡಿ ನಮ್ಮ ಕಾಲೇಜಿನಲ್ಲಿ ಕಲಿಯ

ಬಹುದಾದುದೆಲ್ಲವನ್ನೂ ಕಲಿತು ಶಕ್ತನೆನಿಸಿಕೊಂಡನು. ಅವನನ್ನು ಪುರುಷ ರತ್ನವೆಂದು ಕರೆಯಬಹುದು. ಅವನಂತೆಯೇ ಪ್ರತಿಯೊಬ್ಬರೂ ಆದರೆ ನಮ್ಮ ದೇಶದ ಭಾಗ್ಯಕ್ಕೆ ಎಣೆಯೇ ಇಲ್ಲದಂತಾಗುವುದು.''

## ಅಧ್ಯಾಯ ೨೦

# ಹೀರಾಮಿನ ವಿದ್ಯಾಶಾಲಾಧ್ಯಕ್ಷ

ಜೇಮ್ಸ್ನು, ತಾನು ಮೊದಲೇ ಒಪ್ಪಿದ್ದಂತೆ, ಹೀರಾಮಿನ ವಿದ್ಯಾಶಾಲೆಯಲ್ಲಿ ಪ್ರಾಚೀನ ಭಾಷಾ ವಿದ್ವಾಂಸನಾಗಿ ಕೆಲಸಕ್ಕೆ ಸೇರಿದುದರಿಂದ ಅಲ್ಲಿಯ ಕಾರ್ಯನಿರ್ವಾಹಕ ಸಮಿತಿಯವರು ಬಹಳ ಸಂತುಷ್ಟರಾಗಿ ಅವನ ಕರ್ತವ್ಯ ದಕ್ಷತೆಗೆ ಮೆಚ್ಚಿದರು. ಕಾಲುವೆಯ ದೋಣಿಯ ಕೆಲಸದ ಕಾಲಕ್ಕೂ ಈ ವಿದ್ವಾಂಸ ಪದವಿಯ ಕಾಲಕ್ಕೂ ಒಂಬತ್ತೇ ವರ್ಷದ ಅಂತರವಿದ್ದಿತು. ಈ ಅಂತರದಲ್ಲಿ ನಡೆದ ಜೇಮ್ಸನ ಸಂಕಲ್ಪ ಸಾಧನೆಗೆ ತಕ್ಕ ಸಾಮ್ಯವು ಇತರ ಸಾಹಸಿಗಳ ಚರಿತ್ರೆಯಲ್ಲಿ ದೊರೆಯುವುದು ದುರ್ಲಭ.

“ನನ್ನ ಅಭಿಲಾಷೆಯೆಲ್ಲವೂ ದೈವ ಕೃಪೆಯಿಂದ ಕೈಗೂಡಿತು. ನಾನು ನ್ಯೂಇಂಗ್ಲೆಂಡಿನ ಕಾಲೇಜಿನಲ್ಲಿ ವ್ಯಾಸಂಗ ಮಾಡಿ ಹೀರಾಮಿನ ವಿದ್ಯಾಶಾಲೆಯಲ್ಲಿ ವಿದ್ವಾಂಸ ಪದವಿಯನ್ನೈದಿದೆನು. ಈ ವಿದ್ಯಾಶಾಲೆಯ ಅಭಿವೃದ್ಧಿಗಾಗಿ ನಾನು ಮುಂದೆ ಸರ್ವ ಪ್ರಯತ್ನವನ್ನೂ ಮಾಡುತ್ತೇನೆ” ಎಂದು ಜೇಮ್ಸ್ನು ತನ್ನ ಸ್ನೇಹಿತನೊಬ್ಬನಿಗೆ ಬರೆದನು.

ಧರ್ಮೋಪದೇಶಕನಾಗಬೇಕೆಂದಾಗಲಿ ಮಂತ್ರಾಲೋಚನಾ ಸಭೆಯ ಸದಸ್ಯನಾಗಬೇಕೆಂದಾಗಲಿ ಜೇಮ್ಸನಿಗೆ ಆಗ ಆಸೆಯಿರಲಿಲ್ಲ. ಹೀರಾಮಿನ ವಿದ್ಯಾಶಾಲೆಯಲ್ಲಿ ವಿದ್ವಾಂಸನಾಗಿರುವುದು ಅವನ ಮನಸ್ಸಿಗೆ ಹಿತಕಾರಿಯಾಗಿದ್ದಿತು. ಅವನು ಇಷ್ಟಪಟ್ಟಿದ್ದರೆ ಇಲ್ಲಿದ್ದ ಸಂಬಳಕ್ಕೆರಡರಷ್ಟು ಸಂಬಳವು ಬೇರೆ ಕಡೆಯಲ್ಲಿ ಅವನಿಗೆ ದೊರೆಯುತ್ತಿದ್ದಿತು. ಆದರೂ ಅವನು ವರ್ಷಕ್ಕೆ ೮೦೦ ಡಾಲರು ಸಂಬಳಕ್ಕೆ ಹೀರಾಮಿನಲ್ಲಿರುವುದಕ್ಕೆ ಸಮ್ಮತಿಸಿದನು. ಇತರರು ಎಷ್ಟು ಪ್ರಯತ್ನ ಮಾಡಿದರೂ, ಎಷ್ಟು ಹೆಚ್ಚಾಗಿ ಸಂಬಳವನ್ನು ಕೊಡುತ್ತೇವೆಂದರೂ ಜೇಮ್ಸನಿಗೆ ಹೀರಾಮನ್ನು ಬಿಡುವ ಆಲೋಚನೆಯಿರಲಿಲ್ಲ.

ಕಾಲೇಜಿನ ವ್ಯಾಸಂಗಕ್ಕೆ ಹೋಗುವುದಕ್ಕೆ ಮೊದಲೇ ಜೇಮ್ಸ್ನು ಪ್ರಸಿದ್ಧನಾದ ಉಪಾಧ್ಯಾಯನಾಗಿದ್ದನೆಂದ ಮೇಲೆ ಕಾಲೇಜಿನ

ವ್ಯಾಸಂಗವಾದನಂತರ ಅವನಿಗಿದ್ದ ಬೋಧನಾ ಶಕ್ತಿಯನ್ನು ವರ್ಣಿಸು ವುದು ಅನಾವಶ್ಯಕ. ಸಹಜವಾಗಿಯೇ ಹೊಳೆಯುವ ರತ್ನಕ್ಕೆ ಸಾಣೆ ಹಿಡಿದಂತಾಯಿತು. ಜೇಮ್ಸ್ ಎಲ್ಲ ವಿಷಯಗಳಲ್ಲಿಯೂ ಡಾಕ್ಟರ್ ಹಾಪ್‌ಕಿನ್ಸನ್ನು ಮೇಲ್ಪಂಕ್ತಿಯಾಗಿಟ್ಟುಕೊಂಡಿದ್ದು ಒಂದು ವರ್ಷದ ಮೇಲೆ ಅಲ್ಲಿಯ ಉಪಾಧ್ಯಾಯ ಮಂಡಲಿಗೆ ಅಗ್ರಾಸನಾಧಿಪತಿ ಯಾದನು ; ಮತ್ತೊಂದು ವರ್ಷಕ್ಕೆ ಆ ವಿದ್ಯಾಶಾಲೆಗೆ ಅಧ್ಯಕ್ಷನಾದನು. ಸುಮಾರು ಇಪ್ಪತ್ತೇಳು ವರ್ಷ ವಯಸ್ಸಿನಲ್ಲಿ ಅಂತಹ ವಿದ್ಯಾಶಾಲೆಗೆ ಅಧ್ಯಕ್ಷನಾಗುವುದು ಅಪೂರ್ವವಲ್ಲವೆ !

ಜೇಮ್ಸ್ ವಿಶೇಷ ಬುದ್ಧಿಯುಳ್ಳ ಬಡ ಹುಡುಗರನ್ನು ಆರಿಸಿ ಪ್ರೌಢ ವಿದ್ಯಾ ವ್ಯಾಸಂಗ ಮಾಡುವಂತೆ ಅವರಿಗೆ ಪ್ರೋತ್ಸಾಹವನ್ನುಂಟು ಮಾಡುತ್ತಿದ್ದನು. ಈ ವಿಷಯದಲ್ಲಿ ಜೇಮ್ಸ್ ಹೇಳಿರುವುದೇನೆಂದರೆ :- "ಯುವಕರನ್ನು ವಶಮಾಡಿಕೊಂಡು ಹಿಡಿತರಲು ನಾನು ಮಾಡುತ್ತಿದ್ದ ಉಪಾಯಗಳನ್ನು ನೆನೆಸಿಕೊಂಡರೆ ಈಗಲೂ ನನ್ನ ಮನಸ್ಸಿಗೆ ಹರ್ಷ ವುಂಟಾಗುವುದು. ಹೊರ ಸಳಯದ ಕೋಟೆಯ ಗೋಡೆಯನ್ನೇರುವುದು ಹೇಗೆ? ಒಳಗಿರುವ ಅಂತರ್ಯವನ್ನು ತಿಳಿಯುವುದು ಹೇಗೆ? ಮುತ್ತ ಲ್ಪಟ್ಟವರ ಬುದ್ಧಿಗೆ ಅವರವರ ಸಹಜವಾದ ಸಾಮರ್ಥ್ಯವು ಗೋಚರ ವಾಗುವಂತೆ ಮಾಡುವುದು ಹೇಗೆ? ಪ್ರಪಂಚದಲ್ಲಿ ಅವರವರ ಅವಶ್ಯ ಕರ್ತವ್ಯವನ್ನು ಅವರವರಿಗೆ ತಿಳಿಯಪಡಿಸುವುದು ಹೇಗೆ?—ಇತ್ಯಾದಿ ವಿಷಯಗಳನ್ನು ಸಂದರ್ಭಾನುಸಾರವಾಗಿ ಆಲೋಚಿಸಿಟ್ಟುಕೊಳ್ಳ ಬೇಕಾಗುತ್ತಿದ್ದಿತು. ಈ ವಿಜಯ ಯಾತ್ರೆಗಳಲ್ಲಿ ತಂದೆ ತಾಯಿಗಳೆಂಬ ಕಾವಲುಗಾರರನ್ನು ಗೆಲ್ಲುವುದು ಕಷ್ಟವಾಗಿದ್ದಿತು. ಈ ರೀತಿಯಲ್ಲಿ ತಂದೆ ತಾಯಿಗಳನ್ನು ಗೆದ್ದು ಹಿಡಿತಂದ ಯುವಕರಿಬ್ಬರ ವಿಚಾರವು ನನಗೆ ಚೆನ್ನಾಗಿ ನೆನಪಿನಲ್ಲಿದೆ. ಅವರಿಬ್ಬರೂ ಈಗ ಸುಪ್ರಸಿದ್ಧರಾದ ಪಂಡಿತ ರಾಗಿದ್ದಾರೆ. ಒಬ್ಬನು ಕಾಲೇಜಿನ ಅಧ್ಯಕ್ಷನಾಗಿದ್ದಾನೆ; ಮತ್ತೊಬ್ಬನು ಒಂದು ವಿದ್ಯಾಶಾಲೆಯಲ್ಲಿ ಪ್ರಮುಖೋಪಾಧ್ಯಾಯನಾಗಿದ್ದಾನೆ. ನಾನೇ ಆಗಲಿ ಇತರರೇ ಆಗಲಿ ಪ್ರಯತ್ನ ಮಾಡದಿದ್ದರೆ ಅವರಿಬ್ಬರೂ ಅನಾಮಧೇಯರಾಗಿರುತ್ತಿದ್ದರು. ಪ್ರತಿಯೊಬ್ಬ ಯುವಕನ ಜೀವ

ಮಾನದಲ್ಲಿಯೂ ಅತ್ಯಲ್ಪ ವಿಷಯಗಳು ಒಂದೊಂದು ಸಮಯದಲ್ಲಿ ಅವನ ಜೀವನ ಪಥವನ್ನೇ ಪೂರ್ತಿಯಾಗಿ ಬದಲಾಯಿಸುವುವು. ಅಂತಹ ಯುವಕನಿಗೆ ಸ್ವಸಾಮರ್ಥ್ಯದಲ್ಲಿ ತಕ್ಕಷ್ಟು ನಂಬುಗೆಯಿರುವುದಿಲ್ಲ; ಮುಂದೆ ಏನು ಮಾಡಬೇಕೆಂಬುದು ಅವನಿಗೆ ತೋರುವುದಿಲ್ಲ. ಪ್ರಾಯಶಃ ತಂದೆ ತಾಯಿಗಳು ಬಡವರಾಗಿದ್ದು ತಮಗಿಂತಲೂ ಹೆಚ್ಚಾಗಿ ತಮ್ಮ ಮಕ್ಕಳಿಗೆ ವಿದ್ಯೆಯು ದೊರೆತಿದೆಯೆಂದೂ, ಕಲಿತ ವಿದ್ಯೆಯೇ ಸಾಕೆಂದೂ ಹೇಳಬಹುದು. ಅಂಥವರೊಡನೆ ಉಪಾಯದಿಂದ ನಡೆಯಬೇಕು. ವಿದ್ಯೆಯಿಂದಾಗುವ ಪ್ರಯೋಜನವನ್ನೂ ಬಡವರು ಹೇಗೆ ಸ್ವಸಂಪಾದನೆಯಿಂದ ವಿದ್ಯಾ ವ್ಯಾಸಂಗವನ್ನು ಮಾಡಬಹುದೆಂಬುದನ್ನೂ ಅವರಿಗೆ ತಿಳಿಯಪಡಿಸಿ ಬಹಳ ಮಟ್ಟಿಗೆ ಅಂಥವರ ಮನಸ್ಸನ್ನು ತಿರುಗಿಸಬಹುದು. ದೇವರ ಕೃಪೆಯಿದ್ದುದರಿಂದ ನನ್ನ ಪ್ರಯತ್ನಗಳು ನಿಷ್ಫಲವಾಗುತ್ತಿರಲಿಲ್ಲ.''

ಪ್ರತಿಯೊಂದು ಕೆಲಸವನ್ನೂ ಅದರದರ ಕ್ಲೃಪ್ತ ಕಾಲದಲ್ಲಿ ಮಾಡಬೇಕೆಂಬುದು ಜೇಮ್ಸನ ನಿಯಮವಾಗಿದ್ದಿತು. ದೇವತಾ ಪ್ರಾರ್ಥನೆ, ಪಾಠ, ಉಪನ್ಯಾಸ, ಅಥವಾ ಮತ್ತೊಂದು ಗೊತ್ತಾದ ಕೆಲಸ—ಇವುಗಳೊಂದೊಂದಕ್ಕೂ ನಿಯಮಿತ ಕಾಲವಿರುವುದು ಆವಶ್ಯಕವೆಂದು ಎಲ್ಲರಿಗೂ ಅವನು ಬೋಧಿಸುತ್ತಿದ್ದನು. ಒಂದು ನಿಮಿಷವೂ ಹಿಂದು ಮುಂದಾಗದೆ ತಾನು ಎಲ್ಲ ಕೆಲಸವನ್ನೂ ಗೊತ್ತಾದ ಹೊತ್ತಿಗೆ ಮಾಡುತ್ತಿದ್ದನು. ಪಾಠಶಾಲೆಗೆ ಒಂದು ನಿಮಿಷವೂ ತಡವಾಗಿ ಬರುತ್ತಿರಲಿಲ್ಲ. ಗಡಿಯಾರವು ಗಂಟೆಯನ್ನು ಹೊಡೆಯುವ ಹೊತ್ತಿಗೆ ಸರಿಯಾಗಿ ಜೇಮ್ಸ್ ಶಾಲೆಯೊಳಕ್ಕೆ ಪ್ರವೇಶಿಸಿ ತನ್ನ ಸ್ಥಾನಕ್ಕೆ ಹೋಗುತ್ತಿದ್ದನು.

ಜೇಮ್ಸ್ ತನ್ನ ಹುಡುಗರ ಮತ್ತು ಇತರರ ಪ್ರಯೋಜನಕ್ಕಾಗಿ ಸೌಶೀಲ್ಯ, ಕ್ರಮಾಚರಣ, ವಿಜ್ಞಾನ, ಪಠನ ವಿಧಾನ, ರಾಜ್ಯಭಾರ ಕ್ರಮ—ಇವೇ ಮುಂತಾದ ವಿಷಯಗಳನ್ನು ಕುರಿತು ಉಪನ್ಯಾಸಗಳನ್ನು ಮಾಡುತ್ತಿದ್ದನು. ಒಂದು ದಿವಸ ಜೀವನದ ಗತಿಯನ್ನೇ ತಿರುಗಿಸುವ ಅತ್ಯಲ್ಪ ಸಂಭವಗಳನ್ನು ಕುರಿತು ಪ್ರಸಂಗ ಮಾಡುತ್ತಿರುವಾಗ ಜೇಮ್ಸ್, ``ಅಗೋ ಅಲ್ಲಿ ನೋಡಿರಿ! ಆ ಗುಡ್ಡದ ನೆತ್ತಿಯಲ್ಲಿ ಬೀಳುವ ಮಳೆಯ

ಹನಿಗಳಲ್ಲಿ ಕೆಲವು ದಕ್ಷಿಣ ಭಾಗಕ್ಕೆ ಹರಿದುಹೋಗಿ ಮೆಕ್ಸಿಕೋ ಖಾರಿಯನ್ನು ಸೇರುವುವು; ಮತ್ತೆ ಕೆಲವು ಉತ್ತರಕ್ಕೆ ಹರಿದುಹೋಗಿ ಸೆಂಟ್ ಲಾರೆನ್ಸ್ ಖಾರಿಯನ್ನು ಸೇರುವುವು. ಸ್ವಲ್ಪ ವೇಗವಾಗಿ ಗಾಳಿ ಬೀಸಿದರೂ, ಒಂದು ಹಕ್ಕಿಯು ತನ್ನ ರೆಕ್ಕೆಗಳನ್ನು ಪಟ ಪಟನೆ ಬಡಿದರೂ ಅಷ್ಟು ಮಾತ್ರಕ್ಕೇ ಮಳೆಯ ಹನಿಗಳು ಬೀಳುವ ಪ್ರದೇಶವೂ ಅವುಗಳ ಪರಿಣಾಮವೂ ಬೇರೆ ಬೇರೆಯಾಗುವುವು. ನಿಮ್ಮ ಆಲೋಚನೆಗಳಲ್ಲಿ ಅಲ್ಪವಾದ ಒಂದು ಆಲೋಚನೆ, ಒಂದು ವಾಕ್ಯದ ಪಠನ, ಒಂದು ವಾಕ್ಯದ ನೆನೆಪು, ಒಬ್ಬನ ಮಾತು, ಒಂದು ನಿಮಿಷದ ಸಂಕಲ್ಪ, ಒಂದು ದೊಡ್ಡ ಆಲೋಚನೆ—ಇವುಗಳಲ್ಲೊಂದೊಂದರಿಂದಲೇ ನಿಮ್ಮ ಜೀವನದ ಗತಿಯೇ ಬದಲಾಗಬಹುದು. ಹೀಗಿರುವುದರಿಂದ ಪರ್ಯಾಲೋಚಿಸದೆ ಸಂಕಲ್ಪವನ್ನು ಮಾಡಕೂಡದು; ಸಂಕಲ್ಪಿಸಿದ ಮೇಲೆ ಚಿತ್ತ ಚಾಂಚಲ್ಯ ವಿರಕೂಡದು'' ಎಂದು ಸ್ವಾನುಭವದಿಂದ ಹೇಳಿದನು.

ಜೇಮ್ಸ್ ವಿದ್ಯಾ ಪ್ರಚಾರಕ ಸಂಘಗಳಲ್ಲಿ ಆಗಾಗ ಭಾಷಣಗಳನ್ನು ಮಾಡುತ್ತಿದ್ದನು. ಅವನು ವಿಚಾರ ಮಾಡದ ವಿಷಯವೇ ಇರಲಿಲ್ಲ. ಚರಿತ್ರೆ, ಭೂಗರ್ಭ ಶಾಸ್ತ್ರ, ವಿಜ್ಞಾನ, ಚಿತ್ರದ ಕೆಲಸ, ಯುದ್ಧದ ವಿಚಾರ, ಕೋಟೆಯ ಮುತ್ತಿಗೆ—ಇವೇ ಮುಂತಾದ ಹೊಸ ವಿಷಯಗಳನ್ನು ತಾನು ಓದಿ ಅವುಗಳನ್ನು ಜನರಿಗೆ ಸುಲಭ ಶೈಲಿಯಲ್ಲಿ ತಿಳಿಸುತ್ತಿದ್ದನು; ವಿದ್ಯಾ ದಾನಕ್ಕಿಂತಲೂ ಶ್ರೇಷ್ಠವಾದ ದಾನವು ಪೃಥ್ವಿಯಲ್ಲಿಲ್ಲವೆಂಬುದನ್ನು ಆಚರಣೆಗೆ ತಂದು ತೋರುತ್ತಿದ್ದನು.

ಹೀರಾಮಿನ ವಿದ್ಯಾಶಾಲೆಯ ಅಧ್ಯಕ್ಷನಾಗಿರುವಾಗಲೇ ಜೇಮ್ಸ್, ಹಗಲು ಬಿಡುವಾದಾಗಲೂ ರಾತ್ರಿಯಲ್ಲಿಯೂ, ರಾಜ ನೀತಿ ವಿಷಯಗಳನ್ನೂ ವ್ಯವಹಾರ ಶಾಸ್ತ್ರ ಗ್ರಂಥಗಳನ್ನೂ ವ್ಯಾಸಂಗ ಮಾಡಿ ಅವುಗಳಲ್ಲಿಯೂ ನಿಪುಣನಾದನು. ವಕೀಲನಾಗಬೇಕೆಂಬ ಆಸೆ ಅವನಿಗಿರಲಿಲ್ಲ; ಬುದ್ಧಿ ಶಕ್ತಿಯೂ, ವಾಗ್ವಾದ ಚಾತುರ್ಯವೂ ಲೋಕ ವ್ಯವಹಾರ ಜ್ಞಾನವೂ ತನಗೆ ಹೆಚ್ಚಬೇಕೆಂಬುದೇ ಅವನ ಉದ್ದೇಶವಾಗಿದ್ದಿತು. ಪಾಠಶಾಲೆಯನ್ನು ಬಿಟ್ಟುಹೋಗಬೇಕೆಂಬ ಆಲೋಚನೆಯು ಅವನಿಗೆ ಸ್ವಲ್ಪವೂ ಇರಲಿಲ್ಲ.

ಭಾನುವಾರಗಳಲ್ಲಿ ಜೇಮ್ಸ್ ಪ್ರಾರ್ಥನಾಲಯದಲ್ಲಿ ಕ್ರೈಸ್ತ ಧರ್ಮ ಪ್ರಸಂಗವನ್ನು ಮಾಡುತ್ತಿದ್ದನು. ಮಗನ ಏಳಿಗೆಯನ್ನೂ ಯಶಸ್ಸನ್ನೂ ನೋಡಿ ತಾಯಿಯು ಆನಂದ ಭರಿತಳಾದಳು. ಆಕೆಯ ಪ್ರಾರ್ಥನೆಯು ಫಲಿಸಿತು. ಆಕೆಯ ದಾರಿದ್ರ್ಯವೂ ಕಷ್ಟವೂ ದೂರವಾದುವು. ಜೇಮ್ಸನ ಒಡಹುಟ್ಟಿದವರ ಸಂತೋಷಕ್ಕೆ ಮಿತಿಯಿಲ್ಲದಂತಾಯಿತು. ದೈವ ಕೃಪೆಯನ್ನೆಲ್ಲರೂ ಕೊಂಡಾಡುತ್ತಿದ್ದರು.

ಜೇಮ್ಸ್ ತನ್ನ ಪ್ರಿಯಳಾದ ಲ್ಯುಕ್ರೀಷಿಯಾ ರುಡಾಲ್ಫ್ ಎಂಬ ಕನ್ಯಕೆಗೆ ಮಾಡಿದ್ದ ವಾಗ್ದಾನದಂತೆ ಆಕೆಯನ್ನು ೧೮೫೮ನೆಯ ಇಸವಿ ನವೆಂಬರು ೧೧ರಲ್ಲಿ ಮದುವೆ ಮಾಡಿಕೊಂಡನು. ದಂಪತಿಗಳ ಪರಸ್ಪರಾನುರಾಗವು ಅತಿಶಯವಾಗಿದ್ದಿತು.

ಲ್ಯುಕ್ರೀಷಿಯಳ ಸಹಾಯದಿಂದ ಜೇಮ್ಸ್ ಬಹು ಕೆಲಸಗಳನ್ನು ಸಾಧಿಸಿದನು. ಹಿಂದೆಯೇ ಹೇಳಿದ, ಲೋಕ ಹಿತೈಷಿಣಿಯಾದ ಬೂತ್ ಎಂಬಾಕೆಯೂ ಲ್ಯುಕ್ರೀಷಿಯೆಯೂ ಸೇರಿ ಜೇಮ್ಸನ ಭಾಷಣಗಳಿಗೆ ಸಮರ್ಥಕಗಳಾದ ವಿಷಯಗಳನ್ನು ಪುಸ್ತಕಗಳಿಂದ ಆರಿಸಿ ತೆಗೆದುಕೊಡುತ್ತಿದ್ದರು. ಬೂತಳು ಮರಣಾವಧಿ ಜೇಮ್ಸನ ಸ್ನೇಹಿತಳಾಗಿಯೂ ಹಿತಚಿಂತಕಳಾಗಿಯೂ ಸಹಾಯಕಳಾಗಿಯೂ ಇದ್ದಳು. ಪ್ರತಿ ವರ್ಷವೂ ಜೇಮ್ಸ್ ಹೊಸ ಹೊಸ ಪುಸ್ತಕಗಳನ್ನೋದುತ್ತಿದ್ದನು. ಕೆಲವು ಪುಸ್ತಕಗಳಲ್ಲಿ ಜೇಮ್ಸಿಗೆ ವಿಶೇಷವಾದ ಪ್ರೀತಿಯಿದ್ದಿತು. ಅವುಗಳನ್ನು ಅವನು ಪದೇ ಪದೇ ಓದುತ್ತಿದ್ದನು.

ಚಿಕ್ಕವರಾಗಲಿ, ದೊಡ್ಡವರಾಗಲಿ, ಎಲ್ಲರೊಡನೆಯೂ ಜೇಮ್ಸ್ ಸರಸದಿಂದ ಇರುತ್ತಿದ್ದನು. ಹುಡುಗರ ಜೊತೆಯಲ್ಲಿ ಆಟಕ್ಕೆ ಸೇರಿ ಇತರರಂತೆ ತಾನೂ ಆಡುತ್ತ ಸಂತೋಷಪಡುತ್ತಿದ್ದನು; ಆಗ ಅವನು ಶಾಲಾಧ್ಯಕ್ಷನೆಂಬುದನ್ನು ಮರೆಯುತ್ತಿದ್ದನು. ಆದರೂ ನ್ಯಾಯ ಮಾರ್ಗವನ್ನು ಬಿಟ್ಟುಹೋಗಲು ಯಾವ ಹುಡುಗನಿಗೂ ಧೈರ್ಯವಿರುತ್ತಿರಲಿಲ್ಲ. ಜೇಮ್ಸನನ್ನು ಕಂಡ ಕೂಡಲೆ ತಪ್ಪು ಮಾಡಿದವರು ನಡುಗುತ್ತಿದ್ದರು.

ಜೇಮ್ಸ್ ಹೀರಾಮಿನ ವಿದ್ಯಾಶಾಲೆಯಲ್ಲಿ ಶಾಶ್ವತವಾದ ಕೀರ್ತಿಯನ್ನು ಪಡೆದನು. ಅವನನ್ನು ಲೋಕೋಪಕಾರಿಯೆಂದೂ ಬಡವರ ಆಧಾರವೆಂದೂ ಎಲ್ಲರೂ ಕೊಂಡಾಡುತ್ತಿದ್ದರು.

## ಅಧ್ಯಾಯ ೨೧

# ಸಾಂಸ್ಥಾನಿಕ ರಾಜ್ಯಕಾರ್ಯನಿರ್ವಾಹ ಸಭಾ ಸದಸ್ಯ

ಜೇಮ್ಸ್ ಹೀರಾಮಿನ ವಿದ್ಯಾಶಾಲೆಗೆ ವಿದ್ವಾಂಸನಾಗಿ ಬಂದೊಡನೆಯೇ ಆ ತಾಲ್ಲೂಕಿನ ಪ್ರಮುಖರು ಅವನನ್ನು ರಾಜಕೀಯ ವಿಷಯಗಳನ್ನು ಕುರಿತು ಭಾಷಣ ಮಾಡಲು ಕರೆದರು. ಜೇಮ್ಸ್ ಮೊದಲು ಒಪ್ಪದೆಹೋದರೂ ಪ್ರಮುಖರು ಅವನನ್ನು ಸುಮ್ಮನೆ ಬಿಡಲಿಲ್ಲ. ಹೀರಾಮಿನ ಸುತ್ತಲೂ ೮–೧೦ ಮೈಲಿಗಳ ದೂರದಲ್ಲಿ ಎಲ್ಲೆಲ್ಲಿ ಸಭೆಗಳು ನಡೆದರೂ ಜೇಮ್ಸ್ ಹೋಗಿ ಭಾಷಣ ಮಾಡಬೇಕಾಗಿ ಬಂದಿತು. ಪ್ರಮುಖರ ಮನಸ್ಸನ್ನು ನೋಯಿಸುವುದಕ್ಕೆ ಇಷ್ಟವಿಲ್ಲದೆ ಜೇಮ್ಸ್ ಈ ಸಭೆಗಳೆಲ್ಲಕ್ಕೂ ಹೋಗಿ ಮಾತನಾಡುತ್ತಿದ್ದನು.

ಹೀಗಿರುವಲ್ಲಿ, ಹಾರ್ಟ್ ಎಂಬವನೊಬ್ಬನು ಹೀರಾಮಿಗೆ ಬಂದು, ಗುಲಾಮರ ಮಾರಾಟವು ದೇಶದ ಸಂಪದಭಿವೃದ್ಧಿಗೆ ಆವಶ್ಯಕವಾಗಿರುವುದೆಂತಲೂ, ಅದು ಕ್ರೈಸ್ತ ಧರ್ಮಕ್ಕೆ ವಿರುದ್ಧವಲ್ಲವೆಂತಲೂ, ಎಲ್ಲ ಮನುಷ್ಯರೂ ಸ್ಥಿತಿಯಲ್ಲಿ ಒಂದೇ ಸಮವಲ್ಲವೆಂತಲೂ ವಿತಂಡಾ ವಾದವನ್ನು ಮಾಡಿದನು. ಜೇಮ್ಸೂ ಅಲ್ಲಿಯ ಇತರ ಪ್ರಮುಖರೂ ಈ ಭಾಷಣವನ್ನು ಕೇಳಿ ಸಿಟ್ಟುಗೊಂಡರು. "ಅಯ್ಯಾ ಗಾರ್‌ಫೀಲ್ಡ್! ಈ ವಿತಂಡಾ ವಾದವನ್ನು ನೀನು ಖಂಡಿಸಬೇಕು; ಅಖಾಡಕ್ಕಿಳಿದು ಈ ಕುತರ್ಕಿಯನ್ನುರುಳಿಸಿ ಮರ್ದನ ಮಾಡು" ಎಂದು ಒಬ್ಬ ಪ್ರಮುಖನು ಹೇಳಿದನು. "ಇವನನ್ನುರುಳಿಸಿ ಮರ್ದನವನ್ನೇನೊ ಮಾಡಬಹುದು; ಆದರೆ ಇವನೊಡನೆ ಹೋರಾಟಕ್ಕೆ ಹೋಗುವುದು ಸರಿಯೊ?" ಎಂದು ಗಾರ್‌ಫೀಲ್ಡನು ಕೇಳಿದನು. "ಕುತರ್ಕವನ್ನೂ ಅಧರ್ಮ ಪ್ರವರ್ತನೆಯನ್ನೂ ತಿದ್ದುವುದು ಯಾವಾಗಲೂ ಸರಿಯೆ" ಎಂದು ಆ ಪ್ರಮುಖನು ಹೇಳಲು, "ಕೈಗೆ ಗವಸಣಿಗೆ ಇಲ್ಲದ ಮುಷ್ಟೀ ಮುಷ್ಟಿಯ ಕಾಳಗವೇನೊ ನನಗೆ ಹಿತವೆ" ಎಂದು ಜೇಮ್ಸ್ ಉತ್ತರ ಕೊಟ್ಟನು. "ಹಾಗಾದರೆ ಕಾಳಗಕ್ಕೆ ಹೊರಡು; ನಮ್ಮ ಪಂಗಡಕ್ಕೆ ಇದರಿಂದ ಎಷ್ಟೋ ಒಳ್ಳೆಯದಾಗುವುದು. ಧರ್ಮಸಂಸ್ಥಾಪನೆಯು ಪ್ರತಿಯೊಬ್ಬನ

ಕರ್ತವ್ಯವಾಗಿದೆ'' ಎಂದು ಆ ಪ್ರಮುಖನು ಪ್ರೋತ್ಸಾಹಿಸಿದನು. ''ಈ ಮುಷ್ಟಿೀ ಮುಷ್ಟಿಗೆ ನೀನೇ ಜಟ್ಟಿ'' ಎಂದು ಒಬ್ಬ ಗೃಹಸ್ಥನೂ, ''ನೀನು ಅವನ ಕುತರ್ಕವನ್ನು ಖಂಡಿಸಬೇಕೆಂದು ಎಲ್ಲರೂ ಹಾರೈಸು ತ್ತಿದ್ದಾರೆ'' ಎಂದು ಮತ್ತೊಬ್ಬ ಗೃಹಸ್ಥನೂ, ''ನಮ್ಮ ಕಡೆಯುವ ನಾದ ಫ್ರೀಮಾಂಟೆಂಬ ಧೀರನಿಗೆ ವೋಟುಗಳು ಹೆಚ್ಚುವುವು'' ಎಂದು ಇನ್ನೊಬ್ಬ ಗೃಹಸ್ಥನೂ, ''ಮಹಾ ಜನದ ಆಸೆಯನ್ನು ತೀರಿಸಯ್ಯಾ ಏಳು'' ಎಂದು ಮಗುದೊಬ್ಬ ಗೃಹಸ್ಥನೂ ನುಡಿಯಲು, ಜೇಮ್ಸ್ ಸಮ್ಮತಿಸಿದನು. ಹೀರಾಮಿನ ಪ್ರಾರ್ಥನಾ ನಿಲಯದಲ್ಲಿ ಜೇಮ್ಸ್ ಭಾಷಣವನ್ನು ಮಾಡಿ ಗುಲಾಮರ ಮಾರಾಟದ ಹೊಲಸನ್ನೆಲ್ಲ ಹೊರಗೆ ಹಾಕಿದನು. ಜೇಮ್ಸಿನ ಯಶಸ್ಸು ಏರಿತು. ಸುತ್ತಮುತ್ತಣ ಪಾಳೆಯ ದವರು ಜೇಮ್ಸನ್ನು ಭಾಷಣ ಮಾಡುವುದಕ್ಕೆ ತಂತಮ್ಮ ಪಾಳೆಯಗಳಿಗೆ ಕರೆದರು. ಜನರ ಉತ್ಸಾಹವು ಹೆಚ್ಚಿತು. ಕೊನೆಗೆ ಗ್ಯಾರೆಟ್ಸ್‌ವಿಲ್ ಎಂಬ ಊರಲ್ಲಿ ಹಾರ್ಟಿಗೂ ಜೇಮ್ಸಿಗೂ ವಾಗ್ವಾದವು ನಡೆಯಬೇಕೆಂದು ಗೊತ್ತಾಯಿತು. ಈ ವಾಗ್ವಾದದಲ್ಲಿ ಹಾರ್ಟು ಸೋತನು. ಆ ಭಾಗದ ಜನರಿಗೆಲ್ಲ ಜೇಮ್ಸಿನ ಪಾಂಡಿತ್ಯವು ವಿಶದವಾಗಿ ತಿಳಿಯಿತು. ಒಂದು ವರ್ಷದೊಳಗೆ ಓಹಿಯೋ ಸಂಸ್ಥಾನದ ಮಹಾ ಜನರು ಜೇಮ್ಸನ್ನು ತಮ್ಮ ರಾಜ್ಯ ಕಾರ್ಯ ನಿರ್ವಾಹ ಸಭೆಯ (Ohio Senate) ಸದಸ್ಯ ನಾಗಬೇಕೆಂದು ಪ್ರಾರ್ಥಿಸಿದರು. ''ನನ್ನ ಮುಖ್ಯವಾದ ಕೆಲಸವು ಈ ವಿದ್ಯಾಶಾಲೆಯಲ್ಲಿದೆ, ನನ್ನ ಮನಸ್ಸೆಲ್ಲವೂ ಈ ಕೆಲಸದಲ್ಲಿ ಮಗ್ನ ವಾಗಿದೆ; ನನ್ನ ಕರ್ತವ್ಯಕ್ಕೆ ಬಾಧಕವಾಗುವುದನ್ನು ನಾನು ಮಾಡುವು ದಿಲ್ಲ'' ಎಂದು ಜೇಮ್ಸ್ ದೃಢವಾದ ಉತ್ತರವನ್ನು ಕೊಟ್ಟನು.

೧೮೫೯ರಲ್ಲಿ ಜೇಮ್ಸಿನ ಕೀರ್ತಿಯು ಮತ್ತಷ್ಟು ಹಬ್ಬಿತು. ಅವನು ವಿದ್ಯಾ ವ್ಯಾಸಂಗವನ್ನು ಮಾಡಿದ ವಿಲಿಯಮ್ಸ್ ಕಾಲೇಜಿನ ಕಾರ್ಯ ನಿರ್ವಾಹಕ ಮಂಡಲಿಯವರು ಆ ಪ್ರೌಢ ವಿದ್ಯಾಶಾಲೆಯ ವಾರ್ಷಿಕ ಮಹೋತ್ಸವ ಕಾಲದಲ್ಲಿ ವಿದ್ವಾಂಸರ ಪರವಾಗಿ ಭಾಷಣವನ್ನು ಮಾಡ ಬೇಕೆಂದು ಜೇಮ್ಸನ್ನು ಕೇಳಿಕೊಂಡರು. ವಯೋವೃದ್ಧರಾದ ವಿದ್ವಾಂ ಸರು ಎಷ್ಟೋ ಮಂದಿ ಇದ್ದರೂ ಮೂರೇ ವರ್ಷದ ಹಿಂದೆ ವಿದ್ವಾಂಸ

ನೆನಿಸಿಕೊಂಡ ಆ ಪ್ರಾಯದವನಾದ ಜೇಮ್ಸ್ಸನ್ನು ಈ ಕೆಲಸಕ್ಕೆ ಕರೆದುದು ಅವನ ಯಶಸ್ಸಿನ ಪ್ರಸರಣಕ್ಕೆ ದೊಡ್ಡ ಕಾರಣವಾಯಿತು. ಸಂಸಾರ ಸಮೇತವಾಗಿ ಜೇಮ್ಸ್ಸ ಅಲ್ಲಿಗೆ ಹೋಗಿ ಎಲ್ಲರೂ ಬೆರಗಾಗುವಂತೆ ಭಾಷಣವನ್ನು ಮಾಡಿ ಯಶೋವಂತನಾಗಿ ಮರಳಿ ತನ್ನ ಊರಿಗೆ ಬಂದನು.

ಹೀರಾಮಿನ ಪ್ರಮುಖರು ಒಟ್ಟಿಗೆ ಸೇರಿ ಜೇಮ್ಸ್ಸನ ಬಳಿಗೆ ಬಂದು, "ಸ್ವಾಮಿಾ! ನಮ್ಮ ತಾಲ್ಲೂಕಿನ ಪರವಾಗಿ ನೀವು ನಮ್ಮ ಸಂಸ್ಥಾನದ ರಾಜ್ಯಕಾರ್ಯ ನಿರ್ವಾಹ ಸಭೆಯಲ್ಲಿ ಸದಸ್ಯರಾಗಿರುವುದಕ್ಕೆ ಒಪ್ಪಬೇಕು" ಎಂದು ಕೇಳಿಕೊಂಡರು.

ಜೇಮ್ಸ್ಸ.—ಇದೇನಾಶ್ಚರ್ಯ! ಪ್ರೆಂಟಿಸ್ ಎಂಬ ಮಹನೀಯನು ಈ ಮರ್ಯಾದೆಗೆ ಅರ್ಹನು, ನಾನಲ್ಲ.

ಮೊದಲನೆಯ ಪ್ರಮುಖ.—ಇರಬಹುದು; ಪ್ರೆಂಟಿಸ್ಸನು ಪರಲೋಕಗತನಾದನು. ಪ್ರಕೃತದಲ್ಲಿ ನೀವು ಈ ತಾಲ್ಲೂಕಿನ ಪರವಾಗಿ ಆ ಸಭೆಯಲ್ಲಿ ಸದಸ್ಯರಾಗಿರಬೇಕೆಂದು ಸರ್ವರೂ ಪ್ರಾರ್ಥಿಸುತ್ತೇವೆ. ವರ್ಷಕ್ಕೆ ಒಂದಾವೃತ್ತಿ ಆ ಸಭೆಯಲ್ಲಿ ಕೆಲವು ವಾರಗಳವರೆಗೆ ಮಾತ್ರ ಕೆಲಸವಿರುವುದು. ನಿಮ್ಮ ವಿದ್ಯಾಶಾಲೆಯ ವಿದ್ವನ್ಮಂಡಲಿಯಲ್ಲಿ ಈ ವಿಷಯವನ್ನು ವಿಚಾರ ಮಾಡುವುದಕ್ಕೆ ಮೊದಲೇ ನಮ್ಮ ಪ್ರಾರ್ಥನೆಯನ್ನು ನಿರಾಕರಿಸಬೇಡಿರಿ. ಒಂದು ವಾರದ ಮೇಲೆ ನಿಮ್ಮ ಉತ್ತರವನ್ನು ಲಿಖಿತ ಮೂಲಕವಾಗಿ ತಿಳಿಸಬಹುದು" ಎಂದು ಹೇಳಿದನು.

ಒಡನೆಯೇ ಉತ್ತರವನ್ನು ಕೊಡಲು ಜೇಮ್ಸ್ಸಗೆ ಅವಕಾಶವಿಲ್ಲದಂತಾಯಿತು. ಪಾಠಶಾಲೆಯ ಕಾರ್ಯ ನಿರ್ವಾಹಕ ಮಂಡಲಿಯಲ್ಲಿಯೂ ವಿದ್ವನ್ಮಂಡಲಿಯಲ್ಲಿಯೂ ಈ ವಿಚಾರವು ನಡೆಯಿತು; ತಮ್ಮ ಅಧ್ಯಕ್ಷನು ಸಂಸ್ಥಾನದ ರಾಜ್ಯಕಾರ್ಯ ನಿರ್ವಾಹ ಸಭೆಗೆ ಸೇರುವುದರಿಂದ ವಿದ್ಯಾಶಾಲೆಗೆ ಗೌರವ ಬರುವುದೆಂದೂ ಸಂಸ್ಥಾನಕ್ಕೆ ಕ್ಷೇಮವುಂಟಾಗುವುದೆಂದೂ ತೀರ್ಮಾನಿಸಿದರು. ಜೇಮ್ಸ್ಸ ಇಲ್ಲದಾಗ ಪಾಠ

ಶಾಲೆಯಲ್ಲಿ ಆತನ ಕೆಲಸವನ್ನು ಮಾಡುವುದಕ್ಕೆ ಇತರ ವಿದ್ವಾಂಸರು ಒಪ್ಪಿಕೊಂಡರು. ಇದರಿಂದ, ಜೇಮ್ಸ್ ಈ ಸಭೆಗೆ ಸೇರಬೇಕಾಗಿ ಬಂದಿತು. ಚುನಾವಣೆಯ ಸಭೆಯು ಸೇರಿತು; ಅದರಲ್ಲಿ ಜೇಮ್ಸ್ ಇದ್ದನು. ಆ ಸಭೆಯಲ್ಲಿದ್ದ ಸದಸ್ಯನೊಬ್ಬನು ಮತ್ತೊಬ್ಬ ಸದಸ್ಯನನ್ನು ಕುರಿತು, "ಏನಯ್ಯಾ! ಈತನು ಈ ಸಭೆಯಲ್ಲಿರುವುದಕ್ಕೆ ಚಿಕ್ಕವನಾಗಿ ಕಾಣುತ್ತಾನಲ್ಲವೆ?" ಎಂದು ಕೇಳಿದನು.

ದ್ವಿತೀಯ ಸದಸ್ಯ.—ವಯಸ್ಸಿನಲ್ಲಿ ಚಿಕ್ಕವನಾಗಿರಬಹುದು, ಸಾಮರ್ಥ್ಯದಲ್ಲೇನೂ ದೊಡ್ಡವನು.

ಪ್ರಥಮ ಸದಸ್ಯ.—ಹಾಗೆನ್ನುವುದಕ್ಕಾದೀತೆ? ರಾಜಕೀಯ ನಿರ್ವಾಹಕ್ಕೆ ಅನುಭವವೂ ಜ್ಞಾನವೂ ವಿವೇಕವೂ ಆವಶ್ಯಕವಲ್ಲವೆ?

ದ್ವಿತೀಯ ಸದಸ್ಯ.—ಆವಶ್ಯಕವೇ ಸರಿ. ಚುನಾವಣೆಯಾದ ಮೇಲೆ ಅವನು ಭಾಷಣವನ್ನು ಮಾಡುವನು. ಅದನ್ನು ಕೇಳಿ ನಿನ್ನ ಅಭಿಪ್ರಾಯವನ್ನು ಕೊಡು. ವಯಸ್ಸಿನಲ್ಲಿ ಕಡಿಮೆಯಾಗಿದ್ದರೂ ವಯೋವೃದ್ಧನ ಸದ್ಗುಣಗಳೆಲ್ಲವೂ ಈತನಲ್ಲಿ ಕಾಣಬರುವುವು.

ಜೇಮ್ಸ್ ಸ್ವಲ್ಪ ಹೆಚ್ಚು ಕಡಿಮೆ ಸರ್ವಸಮ್ಮತದಿಂದ ಸಭಾಸದಸ್ಯನಾಗಿ ಚುನಾಯಿಸಲ್ಪಟ್ಟನು; ಸಂಯುಕ್ತ ಸಂಸ್ಥಾನಗಳ ತಾತ್ಕಾಲಿಕ ಸ್ಥಿತಿಯನ್ನು ವಿಶೇಷ ಪ್ರೌಢಿಮೆಯಿಂದ ವರ್ಣಿಸಿ, ಓಹಿಯೋ ಸಂಸ್ಥಾನದ ಕರ್ತವ್ಯವನ್ನು ಕುರಿತು ಅಸಾಧಾರಣವಾದ ಸಾಮರ್ಥ್ಯದಿಂದಲೂ ವಿವೇಕದಿಂದಲೂ ಭಾಷಣ ಮಾಡಿದನು. ಅದನ್ನು ಕೇಳಿ, ಮೇಲೆ ಹೇಳಿದ ಪ್ರಥಮ ಸದಸ್ಯನು ಬೆರಗಾಗಿ, "ಈತನು ಅಸಾಧಾರಣ ಪುರುಷನು; ಈತನ ಚುನಾವಣೆಯಿಂದ ನಮ್ಮ ಸಂಸ್ಥಾನವು ಏಳಿಗೆಗೆ ಬರುವುದರಲ್ಲಿ ಸಂದೇಹವೇ ಇಲ್ಲ" ಎಂದನು.

೧೮೫೯ನೆಯ ಇಸವಿ ಜನವರಿಯಲ್ಲಿ ಜೇಮ್ಸ್ ಓಹಿಯೋ ಸಂಸ್ಥಾನದ ರಾಜ್ಯಕಾರ್ಯ ನಿರ್ವಾಹ ಸಭೆಯಲ್ಲಿ ಸದಸ್ಯನಾಗಿ ಕುಳಿತನು. ಆಗ ಆವನಿಗೆ ಇಪ್ಪತ್ತೊಂಬತ್ತು ವರ್ಷವಿನ್ನೂ ತುಂಬಿರಲಿಲ್ಲ. ಇಪ್ಪತ್ತೆಂಟು ವರ್ಷದ ತರುಣನನ್ನು ಜ್ಞಾನವೃದ್ಧನಾಗೆಣಿಸಿ ಈ ಸಭೆಗೆ ಚುನಾಯಿಸಿ

ದುದು ಅಪೂರ್ವವಲ್ಲವೆ? ಸಂಯುಕ್ತ ಸಂಸ್ಥಾನಗಳ ಶೋಚನೀಯ ಸ್ಥಿತಿಗೆ ಆಗ ಜೇಮ್ಸನಂಥವರು ಬೇಕಾಗಿದ್ದರು. ಅಲ್ಲಿಯ ಜನರು ದಾಸ್ಯ ಪಕ್ಷ ವಾದಿಗಳು, ದಾಸ್ಯ ವಿರುದ್ಧ ವಾದಿಗಳು ಎಂದು ಎರಡು ಪಂಗಡದವರಾಗಿದ್ದರು. ಗುಲಾಮರೂ ಗುಲಾಮರ ವ್ಯಾಪಾರವೂ ಇರಲೇ ಬೇಕೆಂದು ದಾಸ್ಯ ಪಕ್ಷ ವಾದಿಗಳು ಹೋರಾಡುತ್ತಿದ್ದರು ; ದಾಸ್ಯ ವಿರುದ್ಧ ವಾದಿಗಳು ಗುಲಾಮರೂ, ಗುಲಾಮರ ವ್ಯಾಪಾರವೂ ಇರುವುದು ಅಪಮಾನಕರವೆಂದೂ ಅಧರ್ಮವೆಂದೂ ಹೋರಾಡುತ್ತಿದ್ದರು. ದಕ್ಷಿಣ ಸಂಸ್ಥಾನಗಳು ದಾಸ್ಯ ಪಕ್ಷ ವಾದಿಗಳಾಗಿದ್ದುವು ; ಉತ್ತರ ಸಂಸ್ಥಾನಗಳು ದಾಸ್ಯ ವಿರುದ್ಧ ವಾದಿಗಳಾಗಿದ್ದುವು. ಆಗ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷ(President) ನಾಗಿದ್ದ ಜೇಮ್ಸ್ ಬುಕಾನನ್ ಎಂಬಾತನು ದಾಸ್ಯ ಪಕ್ಷ ವಾದಿಯಾಗಿದ್ದನು. ದಾಸ್ಯ ವಿರುದ್ಧ ವಾದಿಗಳ ಗುಂಪು ವರ್ಷ ವರ್ಷಕ್ಕೆ ಬೆಳೆಯುತ್ತಿದ್ದಿತು. ೧೮೬೦ನೆಯ ಕೊನೆಯ ಭಾಗದಲ್ಲಿ ಹೊಸ ಅಧ್ಯಕ್ಷನನ್ನು ಪ್ರಜೆಗಳು ನಿಯಮಾನುಸಾರವಾಗಿ ಚುನಾಯಿಸಬೇಕಾಗಿದ್ದಿತು. ಎರಡು ಗುಂಪಿನವರೂ ಎಲ್ಲೆಲ್ಲಿಯೂ ಭಾಷಣಗಳನ್ನು ಮಾಡುತ್ತ ಒಬ್ಬರನ್ನೊಬ್ಬರು ಬೈಯುತ್ತಿದ್ದರು. ಇಂತಹ ಕಾಲದಲ್ಲಿ ಜೇಮ್ಸ್ ರಾಜ್ಯ ಕಾರ್ಯ ನಿರ್ವಾಹ ಸಭೆಯಲ್ಲಿ ಸದಸ್ಯನಾದುದು ದಾಸ್ಯ ವಿರುದ್ಧ ವಾದಿಗಳಿಗೆ ಪರಮ ಹರ್ಷವನ್ನುಂಟು ಮಾಡಿತು. ಓಹಿಯೋವಿನ ಸಭೆಯಲ್ಲಿ ದಾಸ್ಯ ವಿರೋಧಿಗಳಾದ ಜೇಕಬ್ ಕಾಕ್ಸ್ ಮತ್ತು ಪ್ರೊಫೆಸರ್ ಮನ್ರೊ ಎಂಬ ಇಬ್ಬರು ಧೀರರಿದ್ದರು. ಇವರ ಜೊತೆಗೆ ಜೇಮ್ಸ್ ಸೇರಿದನು. ಈ ಮೂವರನ್ನೂ ದಾಸ್ಯ ವಿರುದ್ಧ ವಾದಿ ತ್ರಯವೆಂದು ಕರೆಯುತ್ತಿದ್ದರು. ಈ ಮೂವರಲ್ಲಿ ಜೇಮ್ಸ್ ಬಹು ಬೇಗನೆ ಪ್ರಮುಖನಾದನು.

ಸುಮಾರು ಹತ್ತು ವರ್ಷಗಳ ಹಿಂದೆ ಜೇಮ್ಸ್ ತನ್ನ ತಾಯಿಯೊಡನೆ ಪ್ರಯಾಣ ಮಾಡುತ್ತ ಓಹಿಯೋ ಸಂಸ್ಥಾನದ ರಾಜಧಾನಿಯಾದ ಕೊಲಂಬಸ್ ನಗರದಲ್ಲಿ ಇದೇ ಸಭೆಯನ್ನು ನೋಡಿ ಹಳ್ಳಿಯ ಹುಡುಗನಂತೆ ಆನಂದಪಟ್ಟನೆಂದು ಹಿಂದೆ ಹೇಳಿದೆವಷ್ಟೆ. ಅದೇ ಸಭೆಯಲ್ಲಿ ಹತ್ತು ವರ್ಷಗಳೊಳಗಾಗಿ ತಾನು ಪ್ರಮುಖನಾಗುವೆನೆಂದಾಗಲಿ ತನ್ನ

ವಾಕ್ ಪ್ರೌಢಿಮೆಯಿಂದ ಲೋಕೋದ್ಧಾರಕ ಕಾರ್ಯಗಳು ನಡೆಯುವು ವೆಂದಾಗಲಿ ಅವನು ಕನಸಿನಲ್ಲಿಯೂ ಕಂಡಿರಲಿಲ್ಲ. ಅತ್ಯಾಶ್ಚರ್ಯ ಕರವಾದ ಕಾರ್ಯ ಸಿದ್ಧಿಯನ್ನು ಪಡೆದವರಲ್ಲಿ ಜೇಮ್ಸ್ ಒಬ್ಬನಾಗಿರುವ ನೆಂದರೆ ಅತಿಶಯೋಕ್ತಿಯಾಗಲಾರದು.

## ಅಧ್ಯಾಯ ೨೨



## ದಳವಾಯಿ

೧೮೬೧ರಲ್ಲಿ ಏಬ್ರಹಾಮ್ ಲಿಂಕನ್ ಎಂಬಾತನನ್ನು ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾಗಿ ಚುನಾಯಿಸಿದರು. ಈತನು ದಾಸ್ಯ ವಿರುದ್ಧ ವಾದಿಗಳ ಪಂಗಡದವನಾಗಿದ್ದುದರಿಂದ ಒಳಯುದ್ಧವು ಪ್ರಾರಂಭ ವಾಗುವಂತಿದ್ದಿತು. ೧೮೬೦ರಲ್ಲಿ ಸಂಯುಕ್ತ ಸಂಸ್ಥಾನಗಳ ಸಂಖ್ಯೆಯು ೩೩. ಈ ೩೩ರಲ್ಲಿ ೧೫ ಸಂಸ್ಥಾನಗಳು ದಾಸ್ಯ ಪಕ್ಷ ವಾದಿಗಳಾಗಿದ್ದುವು. ಈ ೧೫ರಲ್ಲಿ ೧೧ ಸಂಸ್ಥಾನಗಳು ತಾವು ಬೇರೆಯಾಗಿ ತಮ್ಮ ಮನಸ್ಸು ಬಂದಂತೆ ಇರಬೇಕೆಂದು ೧೮೬೧ರ ಆದಿಯಲ್ಲಿ ನಿಶ್ಚಯಿಸಿದುವು.

ಏಬ್ರಹಾಮ್ ಲಿಂಕನ್ನಿಗೆ ಹಿಂದೆ ಇದ್ದ ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನು ದಾಸ್ಯ ಪಕ್ಷ ವಾದಿಗಳ ಗುಂಪಿನವನಾದುದರಿಂದ ದಾಸ್ಯ ವಿರುದ್ಧ ವಾದಿಗಳಾದ ಉತ್ತರ ಭಾಗದ ಸಂಸ್ಥಾನಗಳಲ್ಲಿದ್ದ ಧನವನ್ನೂ ಯುದ್ಧ ಸಾಮಗ್ರಿಗಳನ್ನೂ ಜಹಜುಗಳನ್ನೂ ದಾಸ್ಯ ಪಕ್ಷ ವಾದಿಗಳಾದ ದಕ್ಷಿಣ ಸಂಸ್ಥಾನಗಳಿಗೆ ಸಾಧ್ಯವಾದ ಮಟ್ಟಿಗೆ ಕಳುಹಿಸಿದ್ದನು. ಹೀಗೆ ಇದ್ದುದರಿಂದ ೧೮೬೧ನೆಯ ಇಸವಿಯು ವಿಷಮ ಕಾಲವಾಗಿದ್ದಿತು.

ಓಹಿಯೋ ಸಂಸ್ಥಾನದ ಸಭೆಯಲ್ಲಿ ಜಿಜ್ಞಾಸವನ್ನು ನಡೆಯಿಸಿ ನಿರ್ಧರಿಸಬೇಕಾದ ಮುಖ್ಯ ವಿಷಯಗಳು ನಾಲ್ಕಿದ್ದುವು:–(೧) ಸಂಯುಕ್ತತೆಯನ್ನು ನಿರಾಕರಿಸಿ ಯಾವ ಸಂಸ್ಥಾನವಾದರೂ ಮನಸ್ಸು ಬಂದಾಗ ಬೇರೆಯಾಗುವುದಕ್ಕೆ ಅದಕ್ಕೆ ಅಧಿಕಾರವಿದೆಯೆ ಇಲ್ಲವೆ? (೨) ಹಾಗಿಲ್ಲದ ಪಕ್ಷಕ್ಕೆ ಸಂಯುಕ್ತ ಸಂಸ್ಥಾನಗಳ ಸರ್ಕಾರವು ಅವುಗಳನ್ನು ಸನ್ಮಾರ್ಗಕ್ಕೆ ತರುವುದಕ್ಕಾಗಿ ದಂಡೋಪಾಯವನ್ನು ಅವಲಂಬಿಸಬೇಕೆ ಇಲ್ಲವೆ? (೩) ಬಹು ಮಂದಿಯ ಮತಕ್ಕೆ ವಿರುದ್ಧವಾಗಿ ನಡೆದ ಸಂಸ್ಥಾನಗಳು ಸಂಯುಕ್ತ ಸರ್ಕಾರದ ದ್ರೋಹಿಗಳಲ್ಲವೆ? ಅವುಗಳನ್ನು ಶಿಕ್ಷಿಸುವುದು ಸರ್ಕಾರದ ಕರ್ತವ್ಯವಲ್ಲವೆ? (೪) ಓಹಿಯೋ ಸಂಸ್ಥಾನವು ದಾಸ್ಯ ಪಕ್ಷ ಸಂಸ್ಥಾನಗಳ ಮೇಲೆ ಯುದ್ಧ ಮಾಡುವುದಕ್ಕೆ ಸನ್ನಾಹ ಮಾಡಬೇಡವೆ?—ಈ ವಿಷಯಗಳೆಲ್ಲವನ್ನೂ ಹಗಲೂ ಇರುಳೂ ಕುಳಿತು

ವಿಚಾರ ಮಾಡಿ ಸಂಸ್ಥಾನಗಳು ಬಹು ಮತಕ್ಕೆ ವಿರುದ್ಧವಾಗಿ ಬೇರೆಯಾಗುವುದು ದ್ರೋಹವೆನಿಸಿಕೊಳ್ಳುವುದೆಂತಲೂ, ಅಂತಹ ಸಂಸ್ಥಾನಗಳನ್ನು ಸರಿಯಾದ ದಾರಿಗೆ ತರುವುದಕ್ಕಾಗಿ ದಂಡೋಪಾಯವನ್ನು ಅವಲಂಬಿಸುವುದು ಧರ್ಮವಿರುದ್ಧವಲ್ಲವೆಂತಲೂ ಸಭೆಯಲ್ಲಿ ಪ್ರಮುಖನಾಗಿ ನಿಂತು ವಾದಿಸಿ ಜೇಮ್ಸ್ ಹಿಂದೆ ಸಂಯುಕ್ತ ಸಂಸ್ಥಾನಾಧ್ಯಕ್ಷನಾಗಿದ್ದ ಬುಕಾನನ್ನಿನ ಮೇಲೆಯೂ ಅವನ ಸ್ನೇಹಿತರ ಮೇಲೆಯೂ ರಾಜ್ಯ ದ್ರೋಹಾಪರಾಧವನ್ನು ಹೊರಿಸಿದನು. ಸಭೆಯು ಜೇಮ್ಸ್‌ನ ಅನುವಾದಗಳನ್ನು ಅನುಮೋದಿಸಿ ಸ್ವೀಕರಿಸಿತು. ಈ ಸಂದರ್ಭದಲ್ಲಿ ಮತ್ತೊಂದು ಗಲಭೆಯು ತಲೆದೋರಿತು. ದಾಸ್ಯ ಪಕ್ಷ ವಾದಿಯಾದ ಬುಕಾನನ್ನಿನ ಆಳಿಕೆಯಲ್ಲಿ, 'ದಾಸ್ಯದ ವಿಷಯದಲ್ಲಿ ಯಾವ ಸಂಸ್ಥಾನವೂ ಯಾವ ಕಾನೂನನ್ನೂ ಮಾಡತೊಡಗಕೂಡದು' ಎಂಬ ನವೀನ ನಿಯಮವೊಂದನ್ನು ಮಾಡಬೇಕೆಂಬ ಪ್ರಯತ್ನವು ನಡೆದಿದ್ದಿತು. ಓಹಿಯೋವಿನ ಸಭೆಯಲ್ಲಿ ಜೇಮ್ಸ್ ಈ ವಿಷಯವನ್ನು ಕುರಿತು ಭಾಷಣ ಮಾಡುವಾಗ, "ಈ ಪ್ರಯತ್ನವು ದೇಶೋನ್ನತಿಗೆ ಹಾನಿಯನ್ನು ತರುವುದಾಗಿದೆ; ಇದನ್ನು ಅನುಮೋದಿಸುವವರು ದೇಶ ಬಾಂಧವರಲ್ಲ, ದೇಶದ ಶತ್ರುಗಳು. ಇದನ್ನೊಪ್ಪುವುದಾದರೆ ಅನರ್ಥ ಪರಂಪರೆಗೆ ಮಾರ್ಗವನ್ನು ಮಾಡಿಕೊಟ್ಟಂತಾಗುತ್ತದೆ. ಈ ನವೀನ ನಿಯಮಕ್ಕೊಪ್ಪಿ ನಾವು ಗುಲಾಮರ ವ್ಯಾಪಾರವನ್ನು ನಮ್ಮ ದೇಶದಲ್ಲ ಸ್ಥಿರವಾಗಿ ನಿಲ್ಲಿಸಬೇಕೊ? ಇದಕ್ಕೆ ನಾನೆಂದಿಗೂ ಒಪ್ಪುವುದಿಲ್ಲ. ನನ್ನ ಕೈ ಇದ್ದಲ್ಲಿಯೇ ಬಿದ್ದು ಹೋದರೂ ಸರಿಯೆ; ಈ ನವೀನ ನಿಯಮವನ್ನು ಅನುಮೋದಿಸುವುದಕ್ಕಾಗಿ ನಾನು ಅದನ್ನು ಎಂದಿಗೂ ಎತ್ತುವುದಿಲ್ಲ" ಎಂದು ಜೇಮ್ಸ್ ರೋಷಾವೇಶದಿಂದ ಆರ್ಭಟಿಸಿ ಹೇಳಿದನು. ಸದಸ್ಯರುಗಳು ಆ ನವೀನ ನಿಯಮವನ್ನೊಪ್ಪದೆ ತಳ್ಳಿಬಿಟ್ಟರು.

ಉತ್ತರ ಸಂಸ್ಥಾನಗಳಿಗೂ ದಕ್ಷಿಣ ಸಂಸ್ಥಾನಗಳಿಗೂ ಗುಲಾಮರ ವ್ಯಾಪಾರದ ವಿಷಯದಲ್ಲಿ ಪರಸ್ಪರ ಯುದ್ಧವು ತಪ್ಪುವುದಿಲ್ಲವೆಂದು ಗೊತ್ತಾಯಿತು. ಒಂದು ದಿವಸ ಮಧ್ಯರಾತ್ರಿಯ ಸಮಯದಲ್ಲಿ ಜೇಮ್ಸ್ ತನ್ನ ಮಿತ್ರನಾದ ಕಾಕ್ಸಿನೊಡನೆ, ಯುದ್ಧವು ತಪ್ಪುವುದಿಲ್ಲ

ವೆಂದು ಹೇಳಿದನು. "ತಪ್ಪುವುದೇ ಇಲ್ಲ; ನೀನೂ ನಾನೂ ಈಗ ಜೀವಂತರಾಗಿರುವುದು ಎಷ್ಟು ನಿಜವೋ ಅದೂ ಅಷ್ಟು ನಿಜ!" ಎಂದು ಕಾಕ್ಸ್ ಉತ್ತರಕೊಟ್ಟನು. "ನೀನೂ ನಾನೂ ಮಾತೃಭೂಮಿಯ ಕ್ಷೇಮಕ್ಕಾಗಿ ಯುದ್ಧಮಾಡಲೇ ಬೇಕು; ಮಾಡದಿದ್ದರೆ ನರ ಪಶು ಗಳಾಗುವುದಕ್ಕೆ ಒಪ್ಪಲೇ ಬೇಕು. ಇಗೊ! ಈ ಆಪದ್ದಶೆಯಲ್ಲಿ ನಮ್ಮ ಮಾತೃಭೂಮಿಗೆ ಗುಲಾಮತನವು ಬಾರದಿರುವುದಕ್ಕಾಗಿ ನಾವು ನಮ್ಮ ಪ್ರಾಣಗಳನ್ನೂ ತೆರುವೆವೆಂದು ಕೈಯೆತ್ತಿ ಪ್ರಮಾಣ ಮಾಡೋಣ!" ಎಂದು ಮಿತ್ರರಿಬ್ಬರೂ ಪ್ರಮಾಣ ಮಾಡಿ ಆನಂದ ಭರಿತರಾದರು.

೧೮೬೧ನೆಯ ಇಸವಿ ಏಪ್ರಿಲ್ ೧೨ರಲ್ಲಿ ದಾಸ್ಯಪಕ್ಷದ ಸಂಸ್ಥಾನ ಗಳು ಯುದ್ಧವನ್ನಾರಂಭಿಸಿ ಸುಮ್ಟರ್ ಕೋಟೆಯನ್ನು ಮುತ್ತಿದುವು. ಸಂಯುಕ್ತ ಸಂಸ್ಥಾನಗಳ ಅಧ್ಯಕ್ಷನಾದ ಲಿಂಕನ್ನನು ಯುದ್ಧಾರಂಭಕ್ಕೆ ಎಪ್ಪತ್ತೈದು ಸಾವಿರ ಸೈನ್ಯವು ಆವಶ್ಯಕವೆಂದು ತಿಳಿಯಪಡಿಸಿದನು. ಈ ಆಜ್ಞೆಯು ಓಹಿಯೋ ಸಂಸ್ಥಾನದ ಸಭೆಯಲ್ಲಿ ಚರ್ಚೆಯಾಯಿತು. ಜೇಮ್ಸ್ ಗಂಭೀರ ವಚನದಲ್ಲಿ ದೇಶದ ಸ್ಥಿತಿಯನ್ನು ವಿವರಿಸಿ, ಓಹಿಯೋ ಸಂಸ್ಥಾನವು ಯುದ್ಧಾರಂಭಕ್ಕೆ ಇಪ್ಪತ್ತು ಸಾವಿರ ಕಾಲಾಳನ್ನೂ ಮೂವತ್ತು ಲಕ್ಷ ಡಾಲರು ಧನವನ್ನೂ ಒದಗಿಸಿಕೊಡತಕ್ಕುದೆಂದು ಭಾಷಣ ಮಾಡಿದನು. ಸದಸ್ಯರು ಪರಮೋತ್ಸಾಹದಿಂದ ಅದನ್ನು ಅನುಮೋದಿಸಿದರು. ಯುದ್ಧ ಸನ್ನಾಹಗಳು ನಡೆದುವು. ಐದು ಸಾವಿರ ಬಂದೂಕುಗಳನ್ನು ತರುವುದಕ್ಕಾಗಿ ಓಹಿಯೋ ಸಂಸ್ಥಾನಾಧಿಪತಿಯು ಜೇಮ್ಸನ್ನು ಮಿಸ್ಸೌರಿ ಸಂಸ್ಥಾನಕ್ಕೆ ಕಳುಹಿಸಿದನು. ಅವುಗಳನ್ನು ಜೇಮ್ಸ್ ತಂದು ರಾಜಧಾನಿಯಲ್ಲಿಡಲು, ಅವನನ್ನು ಕ್ಲೀವ್ಲೆಂಡ್ ನಗರಕ್ಕೆ ಏಳನೆಯ ಮತ್ತು ಎಂಟನೆಯ ರೆಜಿಮೆಂಟುಗಳನ್ನು ಸಿದ್ಧಪಡಿಸುವುದ ಕ್ಕಾಗಿ ಕಳುಹಿಸಿದರು. ಓಹಿಯೋ ದೇಶಾಧಿಪತಿಯು ಜೇಮ್ಸನ್ನು ಕರ್ನಲ್ ಆಗಬೇಕೆಂದು ಕೇಳಿಕೊಂಡನು. ಯುದ್ಧದ ಅನುಭವವು ತನಗಿಲ್ಲದಿದ್ದುದರಿಂದ ಜೇಮ್ಸ್ ಅದಕ್ಕೆ ಒಪ್ಪಲಿಲ್ಲ. ತನ್ನ ದೇಶೀಯ ನಾಗಿಯೂ ವಿದ್ಯಾಪ್ರೌಢಿಮೆಯನ್ನು ಪಡೆದವನಾಗಿಯೂ ಇರುವ ನೊಬ್ಬನನ್ನು ಕರ್ನಲ್ ಆಗಿ ಮಾಡಿದರೆ ಆತನ ಕೈಕೆಳಗೆ ತಾನು ಅಧಿಕಾರಿ

ಯಾಗಿರಲು ಜೇಮ್ಸ್ ಒಪ್ಪಿದನು. ದೇಶಾಧಿಪತಿಯು ಜೇಮ್ಸನ್ನು ಆಗ ಲೆಫ್ಟಿನೆಂಟ್ ಕರ್ನಲ್ ಆಗಿ ನಿಯಮಿಸಿ ಆವನ ಪ್ರಾಂತದವರ ರೆಜಿಮೆಂಟೊಂದನ್ನು ಸಿದ್ಧಪಡಿಸುವುದಕ್ಕೆ ಕಳುಹಿಸಿದನು. ಜೇಮ್ಸ್ ತನ್ನ ತಾಲ್ಲೂಕಿನವರನ್ನೂ ಹೀರಾಮಿನ ಯುವಕರನ್ನೂ ಸೇರಿಸಿ ಓಹಿಯೋ ಸಂಸ್ಥಾನದ ೪೨ನೆಯ ರೆಜಿಮೆಂಟನ್ನು ನಿರ್ಮಿಸಿದನು. ಈ ರೆಜಿಮೆಂಟಿಗೆ ತಕ್ಕ ಕರ್ನಲ್ ದೊರೆಯಲಿಲ್ಲ. ಆಗ ತನ್ನ ಪ್ರಾಂತದವರ ಪ್ರಾರ್ಥನೆಯಿಂದ ತಾನೇ ಕರ್ನಲ್ಲಾಗಲು ಜೇಮ್ಸ್ ಒಪ್ಪಿದನು. "ನೀನು ಚೆನ್ನಾಗಿ ಓದಿದರೆ ಒಂದಾನೊಂದು ಕಾಲದಲ್ಲಿ ದಳವಾಯಿ ಯಾಗುವೆ" ಎಂದು ಜೇಮ್ಸ್‌ಗೆ ಬಾಲ್ಯದಲ್ಲಿ ಉಪಾಧ್ಯಾಯನು ಹೇಳಿದುದು ಈಗ ನಿಜವಾಯಿತು.

ಜೇಮ್ಸ್‌ಗೆ ಯುದ್ಧದ ವಿಚಾರಗಳು ಚೆನ್ನಾಗಿ ತಿಳಿದಿರಲಿಲ್ಲ. ಅವನು ಬಾಲ್ಯದಿಂದಲೂ ಎಲ್ಲ ಕೆಲಸಗಳನ್ನೂ ಮನಸ್ಸಿಟ್ಟು ಹುಳುಕಿಲ್ಲದಂತೆ ಮಾಡುತ್ತಿದ್ದುದರಿಂದ ಈಗ ಯುದ್ಧದ ವಿಷಯಗಳನ್ನು ತಂತ್ರ ಪೂರ್ವಕವಾಗಿ ವ್ಯಾಸಂಗ ಮಾಡಿ ತಿಳಿದುಕೊಂಡನು; ಮರದ ತುಂಡುಗಳಿಂದ ಕಾಲಾಳುಗಳ ಸೈನ್ಯವನ್ನು ಮಾಡಿಟ್ಟುಕೊಂಡು, ವ್ಯೂಹ ರಚನೆ ಮುಂತಾದ ವಿಷಯಗಳನ್ನು ಸ್ಪಷ್ಟವಾಗಿ ಗ್ರಹಿಸಿದನು; ಅನಂತರ ತನ್ನ ಸೈನ್ಯದ ಸಣ್ಣ ನೌಕರರಿಗೆ ಒಂದು ಶಿಕ್ಷಾಶಾಲೆಯನ್ನು ಮಾಡಿ ತಾನು ಶ್ರಮಪಟ್ಟು ಕಲಿತಿದ್ದ ವಿಷಯಗಳನ್ನು ಮರದ ತುಂಡುಗಳ ಸೈನ್ಯದಿಂದ ಉದಾಹರಿಸಿ ವಿವರಿಸಿದನು. ಸೈನಿಕರಿಗೆ ಪ್ರತಿ ದಿನವೂ ಎಂಟು ಗಂಟೆಗಳ ಕಾಲದ ವರೆಗೆ ಹಲವು ಬಗೆಯ ಕವಾಯಿತುಗಳನ್ನು ಮಾಡಿಸಿ, ಓಹಿಯೋ ಸಂಸ್ಥಾನದಲ್ಲಿ ತನ್ನ ರೆಜಿಮೆಂಟನ್ನು ಅತ್ಯುತ್ತಮ ಸ್ಥಿತಿಗೆ ತಂದನು.

ಜೇಮ್ಸ್‌ನ ಪ್ರಯಾಸವು ಶೀಘ್ರದಲ್ಲಿಯೇ ಫಲಿಸಿತು. ೧೮೬೨ ನೆಯ ಜನವರಿ ೧೦ರಲ್ಲಿ ಮಿಡಲ್‌ಕ್ರೀಕ್ ಯುದ್ಧದಲ್ಲಿ ಅವನು ಜಯವನ್ನು ಪಡೆದನು. ಅನಂತರ ಒಂದಾಗುತ್ತಲೊಂದು ಜಯವು ಕೈಸೇರುತ್ತ ಬಂದಿತು. ಇತರ ದಳವಾಯಿಗಳು ಎರಡು ತಿಂಗಳಲ್ಲಿ ಸಾಧಿಸಲಾರದ

ಕೆಲಸಗಳನ್ನು ಜೇಮ್ಸ್ಸ ಎರಡೇ ವಾರಗಳಲ್ಲಿ ಸಾಧಿಸಿ ಪ್ರಸಿದ್ಧಿಪಡೆದನು. ಜೇಮ್ಸ್ಸನ ಕಾರ್ಯ ತತ್ಪರತೆ, ಕಷ್ಟ ಸಹಿಷ್ಣುತೆ, ಧೈರ್ಯ, ಭೂತ ದಯೆ, ದೃಢ ಸಂಕಲ್ಪ ಮುಂತಾದ ಸುಗುಣಗಳು ಮತ್ತಷ್ಟು ಪ್ರಕಾಶಕ್ಕೆ ಬಂದುವು. ಇವನ ಅಸಾಧಾರಣವಾದ ಧೈರ್ಯ, ಯುಕ್ತಿ, ನಿರ್ವಾಹ ಶಕ್ತಿ ಮುಂತಾದುವುಗಳನ್ನು ಮೆಚ್ಚಿ ಸರ್ಕಾರದ ಅಧಿಕಾರಿಗಳು ಇವನಿಗೆ ಬ್ರಿಗೆಡಿಯರ್ ಜನರಲ್ ಹುದ್ದೆಯನ್ನು ಕೊಟ್ಟರು. ಮತ್ತೊಂದು ಯುದ್ಧದಲ್ಲಿ ಜೇಮ್ಸ್ಸ ಅದ್ಭುತ ಸಾಹಸವನ್ನೂ ಯುಕ್ತಿಯನ್ನೂ ಪ್ರದರ್ಶಿಸಿದುದರಿಂದ ಅವನಿಗೆ ಮೇಜರ್ ಜನರಲ್ ಪದವಿಯು ಬಂದಿತು. ರಾಜ್ಯ ಕಾರ್ಯ ನಿರ್ವಾಹ ಸಭೆಯಲ್ಲಿಯೇ ಆಗಲಿ, ಸೈನ್ಯದಲ್ಲಿದ್ದ ಮೇಜರ್ ಜನರಲ್‍ಗಳಲ್ಲಿಯೇ ಆಗಲಿ ಜೇಮ್ಸ್ಸನಷ್ಟು ಚಿಕ್ಕ ವಯಸ್ಸಿನವರು ಮತ್ತಾರೂ ಇರಲಿಲ್ಲ. ಸೈನ್ಯಕ್ಕೆ ಸೇರಿದ ಒಂದೂವರೆ ವರ್ಷಗಳೊಳಗೆ ಜೇಮ್ಸ್ಸ ಈ ಉತ್ತಮ ಪದವಿಗೆ ಏರಿದುದು ಪರಮಾಶ್ಚರ್ಯವಲ್ಲವೆ?

ತಾನು ದಳವಾಯಿಯಾಗಿದ್ದಾಗ ಜೇಮ್ಸ್ಸ ನಿರ್ವಹಿಸಿದ ಪರಮ ಸಾಹಸ ಕೃತ್ಯವೊಂದನ್ನು ಇಲ್ಲಿ ವಿವರಿಸುವುದು ಉಚಿತವಾಗಿದೆ. ಜೇಮ್ಸ್ಸ ದೋಣಿಯ ಹುಡುಗನಾಗಿದ್ದಾಗ ಅವನ ಜೊತೆಯಲ್ಲಿ ಹ್ಯಾರಿಯೆಂಬವನೊಬ್ಬನು ಇದ್ದನೆಂದು ಹೇಳಿರುವೆವಲ್ಲವೆ? ಆ ಹ್ಯಾರಿಯು ದುರ್ಮಾರ್ಗನಾಗಿ ಅಲ್ಲಲ್ಲಿ ಅಲೆಯುತ್ತಿದ್ದು ಕೊನೆಗೆ ಒಂದು ಸೈನ್ಯದಲ್ಲಿ ಗೂಢ ಚಾರನಾಗಿ ನಿಂತನು. ಜೇಮ್ಸ್ಸ ದಳವಾಯಿಯಾಗಿರುವ ವರ್ತಮಾನವನ್ನು ಕೇಳಿ ಅವನು ಜೇಮ್ಸ್ಸನ ಬಳಿಗೆ ಬಂದು ಅವನ ಕೈಯನ್ನು ಹಿಡಿದು ಕೊಂಡು, ''ಜಿಮ್ಮಿ'' ಎಂದು ಮಾತನಾಡಿಸಿದನು.

ಜೇಮ್ಸ್ಸ.—ನೀನು ಯಾರು?

ಹ್ಯಾರಿ.—ನಿನ್ನ ಹಳೆಯ ಜೊತೆಗಾರನಲ್ಲವೆ ನಾನು?

ಜೇಮ್ಸ್ಸ.—(ಆಶ್ಚರ್ಯದೊಡನೆ) ಏನು! ನನ್ನ ಜೊತೆಗಾರ!

ಹ್ಯಾರಿ.—ಅಹುದು, ನಿನ್ನ ಜೊತೆಗಾರ; ನಾನು ಹ್ಯಾರಿ. ನಾವಿಬ್ಬರೂ ಕಾಲುವೆಯ ದೋಣಿಯ ಕೆಲಸದಲ್ಲಿರಲಿಲ್ಲವೆ? ನೀನು ಕರ್ಸಲ್ಲಾ

ಗಿರುವುದನ್ನು ಕೇಳಿ ನಿನ್ನ ಬಳಿ ಚಾಕರಿಗೆ ಸೇರಬೇಕೆಂದು ಇಲ್ಲಿಗೆ ಬಂದಿದ್ದೇನೆ.

ಅವನ ವಿಷಯವು ಜೇಮ್ಸ್‌ನ ನೆನಪಿಗೆ ಬಂದು ಅವನನ್ನು ತನ್ನ ಬಳಿಯಲ್ಲಿ ಗೂಢ ಚಾರನಾಗಿರುವಂತೆ ಬಹು ಸಂತೋಷದಿಂದ ನಿಯಮಿಸಿದನು. ಹ್ಯಾರಿಯು ಮರ್ಯಾದೆಯಿಂದ ಜೇಮ್ಸ್‌ನನ್ನು ವಂದಿಸಿ, "ಜನರಲ್ ಜೆಮಿಸ್ಸ್! ನಾನು ನಿನ್ನ ಆಜ್ಞಾಧಾರಕನಾಗಿರುವೆನು; ನನ್ನನ್ನು ನಂಬಿ ನೀನು ಯಾವ ಕೆಲಸಕ್ಕೆ ಬೇಕಾದರೂ ನಿಯಮಿಸಬಹುದು" ಎಂದು ಹೇಳಿದನು.

ಈ ಗೂಢ ಚಾರನಿಂದ ಜೇಮ್ಸ್ ವಿಶೇಷ ಪ್ರಯೋಜನವನ್ನು ಹೊಂದಿದನು. ಅವನ ಅಸಾಧಾರಣವಾದ ಸಹಾಯದಿಂದ ಜೇಮ್ಸ್ ಅದ್ಭುತ ಸಾಹಸ ಕಾರ್ಯವೊಂದನ್ನು ನಿರ್ವಹಿಸಿ ತನ್ನ ಸೈನಿಕರ ಪರಿಪೂರ್ಣ ಕೃತಜ್ಞತೆಗೆ ಪಾತ್ರನಾದನು. ಮಿಡಲ್ ಕ್ರೀಕ್ ಯುದ್ಧದಿಂದ ಸೈನಿಕರು ಬಹಳವಾಗಿ ಬಳಲಿದ್ದರು. ಆಹಾರ ಸಾಮಗ್ರಿಗಳು ಪೂರಯಿಸುತ್ತ ಬಂದುವು. ಮಳೆಯಿಂದ ಎಲ್ಲ ಮಾರ್ಗಗಳೂ ಕೆಸರಾಗಿ ಗಾಡಿಗಳು ಸಂಚಾರ ಮಾಡುವುದು ಅಸಾಧ್ಯವಾಯಿತು. ಸೈನಿಕರ ಬೀಡಾರದ ಪಕ್ಕದಲ್ಲಿದ್ದ ಹೊಳೆಯು ಪೂರ್ಣ ಪ್ರವಾಹದಿಂದ ಹರಿಯುತ್ತಿದ್ದಿತು. ಅದರಲ್ಲಿ ಸೆಳವು ಬಹಳ ಹೆಚ್ಚಾಗಿದ್ದುದರಿಂದ ಯಾವ ದೋಣಿಯೂ ಸಂಚರಿಸುವಂತಿರಲಿಲ್ಲ. ಹೊರಗಿನಿಂದ ಆಹಾರವು ಬರಲು ಅವಕಾಶವೇ ಇಲ್ಲದೆ ಸೈನಿಕರು ಹೊಟ್ಟೆಗಿಲ್ಲದೆ ಸಾಯುವ ಸಂಭವವು ತಲೆದೋರಿತು. ಹೇಗಾದರೂ ಹೊಳೆಯಲ್ಲಿ ಪ್ರಯಾಣ ಮಾಡಿ ಆಹಾರ ಸಾಮಗ್ರಿಗಳು ಬರುವಂತೆ ಏರ್ಪಾಡು ಮಾಡಬೇಕೆಂದು ಜೇಮ್ಸ್ ಬಗೆಬಗೆಯಾಗಿ ಆಲೋಚಿಸುತ್ತಿದ್ದನು. ಆ ಹುಚ್ಚು ಹೊಳೆಯಲ್ಲಿ ದೋಣಿಯನ್ನು ನಡೆಯಿಸುವುದು ಸಾಧ್ಯವೇ ಅಲ್ಲವೆಂದು ಎಲ್ಲ ದೋಣಿಯವರೂ ಹೇಳಿಬಿಟ್ಟರು. ಆಗ ಜೇಮ್ಸ್ ಹ್ಯಾರಿಯನ್ನು ನೋಡಿ, "ಈಗ ನೀನು ಏನು ಹೇಳುತ್ತೀಯೆ? ಹೊಳೆಯ ಪ್ರಯಾಣವು ಸಾಧ್ಯವಲ್ಲವಂತೆ; ಹೊರಟರೆ ಸಾವು ತಪ್ಪದಂತೆ; ನಿನ್ನ ಅಭಿಪ್ರಾಯವೇನು? ದೋಣಿಯನ್ನು ನಡೆಯಿಸುವುದು ನಮ್ಮಿಬ್ಬರಿಗೂ ಸ್ವಲ್ಪ ಗೊತ್ತಿದೆಯಲ್ಲವೆ?" ಎಂದನು. ಅದಕ್ಕೆ ಹ್ಯಾರಿಯು,

"ಜನರಲ್ ಜೆವ್ಸಾ! ವಿಷಯವಿರುವುದಿಷ್ಟೇ ಅಲ್ಲವೆ? ಇಲ್ಲಿಯೇ ಇದ್ದರೆ ಹೊಟ್ಟೆಗಿಲ್ಲದೆ ಸಾಯಬೇಕಾಗುವುದು; ನದಿಯಲ್ಲಿ ಹೊರಟರೆ ನೀರಿನಲ್ಲಿ ಮುಳುಗಿ ಸಾಯಬೇಕಾಗುವುದು. ಹೊಟ್ಟೆಗಿಲ್ಲದೆ ಸರಳಿ ಸಾಯುವುದಕ್ಕಿಂತ ನೀರಿನಲ್ಲಿ ಮುಳುಗಿ ಸಾಯುವುದೇ ಮೇಲು ಎಂದು ನನಗೆ ತೋರುತ್ತದೆ. ಈಗ ನೀನು ಆಜ್ಞೆಯನ್ನಿತ್ತರೆ ಬದುಕಿದರೂ ಸರಿ, ಸತ್ತರೂ ಸರಿ, ನಿನ್ನಾಜ್ಞೆಯನ್ನು ನಡೆಯಿಸುತ್ತೇನೆ" ಎಂದು ಧೈರ್ಯದಿಂದ ಹೇಳಿದನು. ಜೇಮ್ಸ್ ಒಂದು ಕ್ಷಣದವರೆಗೆ ಆಲೋಚಿಸಿ, "ಭಲಾ! ನೀನೇ ಧೀರ! ನನಗೆ ಬಹಳ ಸಂತೋಷ! ನಾವಿಬ್ಬರೂ ಹೊರಡೋಣ. ಒಂದು ಸೈನ್ಯದ ಜೀವವನ್ನು ಉಳಿಸುವುದು ಘನವಾದ ಕಾರ್ಯ. ದೈವ ಕೃಪೆಯಿದ್ದರೆ ನಮ್ಮ ಪ್ರಯತ್ನವು ಸಫಲವಾಗದಿರದು" ಎನ್ನುತ್ತ ತನ್ನ ಪ್ರಾಣವನ್ನು ತೃಣೀಕರಿಸಿ ಹ್ಯಾರಿಯೊಡನೆ ಒಂದು ದೋಣಿಯಲ್ಲಿ ಹೊರಟನು. ಹೊಳೆಯು ರಭಸದೊಡನೆ ಹರಿಯುತ್ತಿದ್ದಿತು. ಜೇಮ್ಸನಿಗಿದ್ದ ದೋಣಿಯ ಕೆಲಸದ ಪೂರ್ವಾನುಭವವು ಈಗ ವಿಶೇಷ ಪ್ರಯೋಜನಕಾರಿಯಾಯಿತು. ಅವರಿಬ್ಬರೂ ಬಹು ಜಾಗರೂಕತೆಯಿಂದ ದೋಣಿಯ ಗತಿಯನ್ನು ಸರಿಪಡಿಸುತ್ತ ಹೋಗಿ ನದೀ ಮುಖವನ್ನು ಸುರಕ್ಷಿತವಾಗಿ ಸೇರಿದರು. ಅಲ್ಲಿ ಹಳೆಯದಾದ ಸಣ್ಣ ಜಹಜೊಂದಿದ್ದಿತು. ಆ ಕ್ಷಣವೇ ಜೇಮ್ಸ್ ಆ ಜಹಜಿನೊಳಗೆ ಹೋಗಿ, ಅದರ ಮುಖ್ಯಾಧಿಕಾರಿಯನ್ನು ನೋಡಿ, "ಸಂಯುಕ್ತ ಸಂಸ್ಥಾನಗಳ ಸೈನ್ಯಕ್ಕೆ ಆಹಾರ ಸಾಮಗ್ರಿಗಳನ್ನು ಸಾಗಿಸಲು ನನಗೆ ಈ ಜಹಜು ಬೇಕಾಗಿದೆ; ಇದನ್ನು ನಾನು ತೆಗೆದುಕೊಂಡು ಹೋಗುತ್ತೇನೆ" ಎಂದು ಹೇಳಿದನು. ಆ ಜಹಜು ಶತ್ರು ಪಕ್ಷದವರಿಗೆ ಸೇರಿದ್ದಿತು. ಜೇಮ್ಸನ ಸೈನ್ಯವು ಹೊಟ್ಟೆಗಿಲ್ಲದೆ ಸತ್ತಿದ್ದರೆ, ಆ ಜಹಜಿನ ಅಧಿಕಾರಿಗೆ ಪರಮ ಹರ್ಷವಾಗುತ್ತಿದ್ದಿತು. ಅವನು ಜೇಮ್ಸನನ್ನು ನೋಡಿ ಹೆದರಿ, ಸರಿಯಾದ ಪ್ರತ್ಯುತ್ತರವನ್ನು ಹೇಳುವುದಕ್ಕೆ ತೋರದೆ, "ಈಗ ಈ ಪ್ರವಾಹದ ನೀರು ೬೦ ಅಡಿಯಷ್ಟು ಆಳವಾಗಿದೆ; ದಡದ ಮರಗಳೆಲ್ಲವೂ ಅದರಲ್ಲಿ ಮುಳುಗಿ ನಿಂತಿವೆ; ಇಂತಹ ಪ್ರವಾಹದಲ್ಲಿ ಈ ಹಳೆಯ ಜಹಜು ಪ್ರಯಾಣ ಮಾಡುವುದು ಸಾಧ್ಯವೇ ಅಲ್ಲ; ಹೊರಟರೆ ನಾವು ಬದುಕುವುದೇ ಇಲ್ಲ" ಎಂದು ಹೇಳಿದನು. "ಇದುದಾಗಲಿ! ನನಗೆ ಈ

ಜಹಜು ಬೇಕು. ನಿನ್ನ ಕೈಯಲ್ಲಿ ಸಾಗದಿದ್ದರೆ ನಾನೇ ಈ ಜಹಜನ್ನು ನಡೆಯಿಸುತ್ತೇನೆ. ಹ್ಯಾರೀ! ಈತನ ಮೇಲೆ ಕಾವಲಿದ್ದು ತೇಲಿ ಬರುತ್ತಿರುವ ಮರಗಳಿಂದ ಜಹಜಿಗೆ ಅಪಾಯವಾಗದಂತೆ ನೋಡಿಕೊ!'' ಎಂದು ಆಜ್ಞೆಯನ್ನಿತ್ತು ಜಹಜಿಗೆ ಆಹಾರ ಸಾಮಗ್ರಿಗಳನ್ನು ತುಂಬಿಸಿ, ತಾನೇ ಅದನ್ನು ನಡೆಯಿಸಲಾರಂಭಿಸಿದನು. ಎಂತೂ, ಒಂದು ರೀತಿಯಲ್ಲಿ ಜೇಮ್ಸ್ ನೌಕಾಧಿಪತಿಯಾದನು. ಅವನ ಮನದಾಸೆಯು ಕೈಗೂಡಿದಂತಾಯಿತು. ಹೀಗೆ ಬಹು ಜಾಗರೂಕತೆಯಿಂದ ಜಹಜನ್ನು ನಡೆಯಿಸುತ್ತ ಬರುವಾಗ ಆ ನದಿಯ ತಿರುವುವೊಂದರಲ್ಲಿ ಮರಳ ದಿಣ್ಣೆಯೊಂದರ ಮೇಲೆ ಸಾಗಿ ಕುಳಿತುಕೊಂಡಿತು. ಜೇಮ್ಸ್ ಧೈರ್ಯಗೆಡದೆ ಉಪಾಯವೊಂದನ್ನು ಆಲೋಚಿಸಿದನು: ದಪ್ಪವಾಗಿದ್ದ ಹಗ್ಗದ ಒಂದು ಕೊನೆಯನ್ನು ಜಹಜಿನ ಮುಖಕ್ಕೆ ಕಟ್ಟಿ, ತಾನು ಒಂದು ಸಣ್ಣ ದೋಣಿಯಲ್ಲಿ ಕುಳಿತು ಹಗ್ಗದ ಸುರುಳಿಯನ್ನು ಬಿಚ್ಚಿಕೊಳ್ಳುತ್ತ ಆಚೆಯ ದಡಕ್ಕೆ ಹೊರಟನು. ಜೊತೆಯಲ್ಲಿ ಹ್ಯಾರಿಯೊಬ್ಬನೇ ಸಹಾಯಕ್ಕಿದ್ದವನು. ಇಬ್ಬರೂ ಪ್ರವಾಹದ ಸೆಳವಿನಿಂದ ಕೊಚ್ಚಿಹೋಗುವ ಸಂಭವವಿದ್ದಿತು. ಆದರೂ ಅದೊಂದು ಆವೇಶದ ಪ್ರಭಾವದಿಂದ ಅವರು ದಡವನ್ನು ಸೇರಿದರು. ಆಗ ಜೇಮ್ಸ್ ದಡದಲ್ಲಿ ಒಂದು ರಾಟೆಯನ್ನು ಹಾಕಿ ಅದಕ್ಕೆ ಹಗ್ಗದ ಇನ್ನೊಂದು ಕೊನೆಯನ್ನು ಕಟ್ಟಿ ಅಲ್ಲಿದ್ದ ಕೆಲವರ ಸಹಾಯದಿಂದ ರಾಟೆಯನ್ನು ತಿರುಗಿಸಲಾರಂಭಿಸಿದನು. ಕೊಂಚ ಹೊತ್ತಿನಲ್ಲಿಯೇ ಜಹಜು ಚಲಿಸಿ ಪ್ರವಾಹವನ್ನು ಸೇರಿತು. ಜೇಮ್ಸ್ ಈ ಜಹಜನ್ನು ಶನಿವಾರದ ಸಾಯಂಕಾಲದಿಂದ ಸೋಮವಾರದ ಪ್ರಾತಃಕಾಲದ ವರೆಗೂ ನಡೆಯಿಸುತ್ತ ಕೊನೆಗೆ ಸೈನ್ಯವಿದ್ದೆಡೆಗೆ ಬಂದನು. ಸೈನ್ಯವು ಎರಡು ದಿನ ಆಹಾರವಾವುದೂ ಇಲ್ಲದೆ ಬಳಲಿ ಬೇಸತ್ತಿದ್ದಿತು. ಸೈನಿಕರು ಆ ಜಹಜನ್ನೂ ಜೇಮ್ಸನನ್ನೂ ಕಂಡ ಕೂಡಲೆ ಹರ್ಷೋನ್ಮತ್ತರಾಗಿ ಕೋಲಾಹಲ ಧ್ವನಿ ಮಾಡಿದರು. ಕಾರ್ಯನಿರ್ವಾಹ ಧುರಂಧರ! ಪರೋಪಕಾರ ಧೀರ!! ಲೋಕ ಹಿತೋತ್ಸುಕ!!! ಎಂದು ಕೂಗುತ್ತ ಸೈನಿಕರು ಜೇಮ್ಸನನ್ನು ತಮ್ಮ ತೋಳ ಮೇಲೆ ಕುಳ್ಳಿರಿಸಿಕೊಂಡು ಮೆರೆಯಿಸಿದರು.

ತನ್ನ ಪ್ರಾಣವನ್ನೂ ನೀಗುವುದಕ್ಕೆ ಹಿಂದೆಗೆಯದಿದ್ದ ಆ ದಳವಾಯಿಯಲ್ಲಿ ಸೈನಿಕರು ಪ್ರೀತಿಯನ್ನಿಟ್ಟು ಆತನ ಆಜ್ಞೆಯನ್ನು ನೆರವೇರಿಸಲು ಸಿದ್ಧರಾಗಿದ್ದುದು ಆಶ್ಚರ್ಯವೆ? ಆ ಸೈನ್ಯಕ್ಕೆ ಎಲ್ಲೆಲ್ಲಿಯೂ ಜಯವು ಕೈಸೇರುತ್ತ ಬಂದುದು ಅತಿಶಯವಲ್ಲ.

## ಅಧ್ಯಾಯ ೨೩

# ಸಂಯುಕ್ತ ಪ್ರಜಾ ಪ್ರತಿನಿಧಿ ಸಭಾ ಸದಸ್ಯ

ಹದಿನೇಳನೆಯ ಅಧ್ಯಾಯದಲ್ಲಿ ಓಹಿಯೋ ಸಂಸ್ಥಾನದ ರಾಜಕೀಯ ಕಾರ್ಯ ನಿರ್ವಾಹ ಕ್ರಮವನ್ನು ಸಂಕ್ಷೇಪವಾಗಿ ತಿಳಿಸಿರುತ್ತೇವೆ. ಅದರಂತೆಯೇ ಸಂಯುಕ್ತ ಸಂಸ್ಥಾನಗಳ ರಾಜಕೀಯ ಕಾರ್ಯ ನಿರ್ವಾಹದ ಕ್ರಮವೂ ಇರುತ್ತದೆ. ಓಹಿಯೋವಿನ ಸಾಂಸ್ಥಾನಿಕ ಪ್ರಜಾ ಪ್ರತಿನಿಧಿ ಸಭೆಗೆ ಪ್ರತಿಯಾಗಿ ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆ ಇರುವುದು. ಇದರಲ್ಲಿಯೂ ಪ್ರಜಾ ಪ್ರತಿನಿಧಿಗಳನ್ನು ಎರಡು ವರ್ಷಕ್ಕೊಂದಾವೃತ್ತಿ ನಿಯಮಾನುಸಾರವಾಗಿ ಚುನಾಯಿಸುವರು. ಸುಮಾರು ಒಂದೂವರೆ ಲಕ್ಷ ಪ್ರಜೆಗೆ ಒಬ್ಬ ಪ್ರತಿನಿಧಿಯಿರುವಂತೆ ಬೇರೆ ಬೇರೆ ಸಂಸ್ಥಾನಗಳಿಂದ ಸದಸ್ಯರುಗಳನ್ನು ಚುನಾಯಿಸಿ ಕಳುಹಿಸುತ್ತಾರೆ. ಈ ಸದಸ್ಯರುಗಳು ಬೇರೆ ಬೇರೆ ಸಂಸ್ಥಾನಗಳ ಒಳವಳಯದ ವಿಚಾರಗಳಿಗೆ ಹೋಗದೆ ಸಂಯುಕ್ತ ಸಂಸ್ಥಾನಗಳ ಸಮಷ್ಟಿ ವಿಷಯ ವಿಚಾರಗಳಲ್ಲಿ ಮಾತ್ರ ಪ್ರವರ್ತಿಸುವರು. ಓಹಿಯೋವಿನ ರಾಜ್ಯ ಕಾರ್ಯ ನಿರ್ವಾಹ ಸಭೆಗೆ ಪ್ರತಿಯಾಗಿ ಸಂಯುಕ್ತ ರಾಜ್ಯ ಕಾರ್ಯ ನಿರ್ವಾಹ ಸಭೆ ಇರುತ್ತದೆ. ಈ ಸಭೆಗೆ ಪ್ರತಿ ಸಂಸ್ಥಾನದವರೂ ಇಬ್ಬರಿಬ್ಬರು ಸದಸ್ಯರನ್ನು ಆರು ವರ್ಷಕ್ಕೊಂದಾವೃತ್ತಿ ಚುನಾಯಿಸಿ ಕಳುಹಿಸುವರು. ಸಂಯುಕ್ತ ರಾಜ್ಯಕಾರ್ಯ ನಿರ್ವಾಹ ಸಭೆಯವರೂ ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆಯವರಂತೆ ಸಮಷ್ಟಿ ವಿಷಯ ವಿಚಾರಪರರಾಗಿರುವರು. ಬೇರೆ ಬೇರೆ ಸಂಸ್ಥಾನಗಳ ಅಧಿಪತಿಗೆ ಪ್ರತಿಯಾಗಿ ಸಂಯುಕ್ತ ಸಂಸ್ಥಾನಾಧ್ಯಕ್ಷನೊಬ್ಬನಿರುವನು. ಈತನನ್ನೂ ಸಾಂಸ್ಥಾನಿಕ ಪತಿಗಳಂತೆಯೇ ನಿಯಮಾನುಸಾರವಾಗಿ ಚುನಾಯಿಸುವರು. ಬೇರೆ ಬೇರೆ ಸಂಸ್ಥಾನಗಳ ಮಹಾ ನ್ಯಾಯಸ್ಥಾನಗಳಿಗೆ ಪ್ರತಿಯಾಗಿ ಸಂಯುಕ್ತ ಸಂಸ್ಥಾನಗಳ ಮಹಾ ನ್ಯಾಯಸ್ಥಾನವಿರುವುದು. ಕೊಲಂಬಿಯಾ ಡಿಸ್ಟ್ರಿಕ್ಟಿನಲ್ಲಿ ಇರುವ ವಾಷಿಂಗ್ಟನ್ ನಗರವು ಸಂಯುಕ್ತ ಸಂಸ್ಥಾನಗಳ ರಾಜಧಾನಿಯಾಗಿದೆ.

೧೮೬೨ನೆಯ ವರ್ಷದ ಬೇಸಗೆಯಲ್ಲಿ ಓಹಿಯೋವಿನ ಮಹಾ ಜನರು ಜೇಮ್ಸನ ಸಾಮರ್ಥ್ಯವನ್ನೂ ಯಶಸ್ಸನ್ನೂ ನೋಡಿ ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆಗೆ ಆತನನ್ನು ಸದಸ್ಯನನ್ನಾಗಿ ಚುನಾಯಿಸುವ ಆಲೋಚನೆಯನ್ನು ಮಾಡಿ, ಆತನ ಸಮ್ಮತಿಯನ್ನು ಪಡೆಯುವುದಕ್ಕೆ ಆತನಿದ್ದೆಡೆಗೆ ಹೋದರು. ಆಗ ಜೇಮ್ಸು ಕೆಂಟಕಿಯೆಂಬ ಸ್ಥಳದಲ್ಲಿ ತನ್ನ ಸೇನೆಯೊಡನೆ ಇದ್ದನು. ದಾಸ್ಯ ನಿವಾರಣೆಯ ಯುದ್ಧವು ಪೂರಯಿಸುವ ವರೆಗೂ ತಾನು ದಳವಾಯಿಯಾಗಿಯೇ ಇರಬೇಕೆಂಬ ಆಲೋಚನೆಯು ಜೇಮ್ಸನಿಗೆ ಇದ್ದಿತು. ಸಂಯುಕ್ತ ಪ್ರಜಾ ಪ್ರತಿನಿಧಿ ಗಳಿಗೆ ಬರುವ ಸಂಬಳಕ್ಕೆರಡರಷ್ಟು ಸಂಬಳವು ದಳವಾಯಿಗಳಿಗೆ ಬರು ತ್ತಿದ್ದಿತು. ಜೇಮ್ಸು ಬಡವನಾಗಿದ್ದುದರಿಂದ ಹೆಚ್ಚು ಸಂಬಳದ ಕೆಲಸವನ್ನು ಬಿಟ್ಟು ಕಡಿಮೆಯ ಸಂಬಳದ ಕೆಲಸಕ್ಕೆ ಹೋಗಲು ಸಂದೇಹ ಪಡುತ್ತಿದ್ದನು. ಯುದ್ಧ ಕಾಲವಾದುದರಿಂದ ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆಯಲ್ಲಿ ಯುದ್ಧಾನುಭವವುಳ್ಳ ಸಮರ್ಥನೊಬ್ಬನು ಇರು ವುದು ಆವಶ್ಯಕವೆಂದೂ, ಅಂತಹ ಅನುಭವಶಾಲಿಯಾದ ಬೇರೊಬ್ಬ ಸಮರ್ಥನು ದೊರೆಯುವುದು ದುರ್ಲಭವೆಂದೂ, ಸಂಯುಕ್ತ ಸಂಸ್ಥಾ ನಾಧ್ಯಕ್ಷನಾದ ಲಿಂಕನ್ನನು ಅಭಿಪ್ರಾಯಪಟ್ಟಿರುವಂತೆ ಜೇಮ್ಸನಿಗೆ ತಿಳಿಯಬಂದಿತು. ಸಂಯುಕ್ತ ಸಂಸ್ಥಾನಗಳ ಕ್ಷೇಮಕ್ಕಾಗಿ ಹಗಲೂ ಇರುಳೂ ದುಡಿಯುತ್ತಿರುವ ಲಿಂಕನ್ನಿನ ಇಚ್ಛಾನುಸಾರವಾಗಿ ನಡೆಯು ವುದು ತನ್ನ ಕರ್ತವ್ಯವೆಂದು ಜೇಮ್ಸು ಭಾವಿಸಿ, ಕಡಿಮೆಯ ಸಂಬಳದ ಸದಸ್ಯ ಪದವಿಯನ್ನು ಸ್ವೀಕರಿಸಲು ಒಪ್ಪಿದನು. ಈ ವರ್ತನೆಯು ಜೇಮ್ಸನ ಸ್ವಾರ್ಥ ತ್ಯಾಗ ಬುದ್ಧಿಯನ್ನು ಸ್ಪಷ್ಟವಾಗಿ ಪ್ರದರ್ಶಿಸುವು ದಲ್ಲವೆ? ಈ ಸ್ವಾರ್ಥ ತ್ಯಾಗವನ್ನು ನೋಡಿ ಓಹಿಯೋ ಸಂಸ್ಥಾನವೆಲ್ಲವೂ ಜೇಮ್ಸನ್ನು ಕೊಂಡಾಡಿತು. ೧೮೬೩ನೆಯ ಇಸವಿಯ ಡಿಸೆಂಬರು ತಿಂಗಳಲ್ಲಿ ಜೇಮ್ಸು ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆಯಲ್ಲಿ ಸದಸ್ಯ ನಾಗಿ ಕುಳಿತನು.

ಓಹಿಯೋ ಸಂಸ್ಥಾನದ ರಾಜ್ಯಕಾರ್ಯ ನಿರ್ವಾಹಕ ಸಭೆಯ ಲ್ಲಿದ್ದಾಗ ಜೇಮ್ಸು ಹೀರಾಮಿನ ಕಾಲೇಜಿನಲ್ಲಿ ಆಗಾಗ ಕೆಲಸ ಮಾಡು

ತ್ತಿದ್ದನು. ಯುದ್ಧಾರಂಭವಾದ ಮೇಲೆ ಕಾಲೇಜಿನಲ್ಲಿ ಕೆಲಸ ಮಾಡು
ವುದಕ್ಕಾಗಲಿಲ್ಲ. ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆಗೆ ಸೇರಿದ ಮೇಲೆ
ಎರಡು ವರ್ಷಗಳ ವರೆಗೂ ಅವನ ಹೆಸರನ್ನು ಕಾಲೇಜಿನ ವಿದ್ವಾಂಸರ
ಪಟ್ಟಿಯಲ್ಲಿ ಮಾರ್ಗದರ್ಶನಾಧ್ಯಕ್ಷ (Advisory Principal) ನೆಂಬ
ಹೆಸರಿನಿಂದ ಇಟ್ಟುಕೊಂಡಿದ್ದರು; ಆ ಮೇಲೆ ಆ ಕಾಲೇಜಿನ ಕಾರ್ಯ
ನಿರ್ವಾಹಕ ಸಮಿತಿಯಲ್ಲಿ ಸದಸ್ಯನನ್ನಾಗಿ ಮಾಡಿದರು.

೧೮೬೪ರಲ್ಲಿ ದಾಸ್ಯ ಪಕ್ಷದ ಸಂಸ್ಥಾನಗಳಾಗಿದ್ದ ಆರ್ಕನ್ಸಾಸ್,
ಲೂಸಿಯಾನ ಎಂಬವುಗಳಲ್ಲಿ 'ಸಿವಿಲ್' ರಾಜ್ಯಭಾರವಿರಬೇಕೆಂಬ ಕಾನೂ
ನೊಂದನ್ನು ಲಿಂಕನ್ನಿನ ಒಪ್ಪಿತಕ್ಕೆ ಕಳುಹಿಸಿಕೊಟ್ಟರು. ಅದನ್ನೊಪ್ಪದೆ
ಲಿಂಕನ್ನನು ಅಲ್ಲಿ ಹಂಗಾಮಿಯಾಗಿ 'ಮಿಲಿಟರಿ' ರಾಜ್ಯಭಾರವಿರ
ಬೇಕೆಂದು ವಿಧಿಸಿದನು. ಈ ವಿಧಿಯನ್ನೊಪ್ಪದೆ ಅನೇಕರು ಲಿಂಕನ್ನಿನ
ಮೇಲೆ ದೋಷಾರೋಪಣೆಯನ್ನು ಮಾಡಿದರು. ಜೇಮ್ಸ್ ಅವರ
ಜೊತೆಗೆ ಸೇರಿದನು. ಲಿಂಕನ್ನಿನಲ್ಲಿ ಪ್ರಜೆಗಳಿಗೆ ಬಹು ವಿಶ್ವಾಸವಿದ್ದಿತು.
ಜೇಮ್ಸನನ್ನು ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆಗೆ ಚುನಾಯಿಸಿದ
ಓಹಿಯೋ ಸಂಸ್ಥಾನದ ಮಹಾ ಜನರು ಅವನ ಈ ನಡತೆಯನ್ನೊಪ್ಪದೆ
ಆ ಬಗೆಯಲ್ಲಿ ನಡೆದುದಕ್ಕೆ ಕಾರಣವನ್ನು ಕೇಳಿದರು. ಜೇಮ್ಸ್ ಅವರ
ಸಭೆಗೆ ಬಂದು ಕಾರಣಗಳನ್ನು ತಿಳಿಸಬೇಕಾಯಿತು. ಜೇಮ್ಸ್ ಕ್ಷಮಾ
ಪಣೆಯನ್ನು ಕೇಳಿಕೊಳ್ಳುವನೆಂದು ಸಭೆಯವರು ಭಾವಿಸಿದ್ದರು. ಅದಕ್ಕೆ
ಬದಲಾಗಿ ಅವನು ಸಭೆಯ ಮುಂದೆ ಬಂದು ನಿಂತು ಕಾರಣಗಳನ್ನು
ವಿಶದವಾಗಿ ವಿವರಿಸಿ, "ಮಿತ್ರರೇ! ನಾನು ನಡೆವ ನಡತೆಗಾಗಿ ಅನುತಾಪ
ಪಡಬೇಕಾಗಿಲ್ಲ. ಈ ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆಯಲ್ಲಿ ಸದಸ್ಯ
ನಾಗಿರುವುದಕ್ಕಾಗಿ ಆತ್ಮಸಾಕ್ಷಿಗೆ ವಿರುದ್ಧವಾಗಿ ನಾನೆಂದೂ ನಡೆಯ
ಲಾರೆನು. ನಿಮ್ಮ ಅಭಿಪ್ರಾಯಗಳಿಗೆ ನಾನು ವಿಶೇಷವಾದ ಗೌರವ
ವನ್ನು ಕೊಡುತ್ತ ಬಂದಿರುತ್ತೇನೆ. ಆದರೂ ನನ್ನಲ್ಲಿ ಸಾಕ್ಷಿಭೂತ
ನಾಗಿರುವ ಆತ್ಮನನ್ನು ಹೆಚ್ಚು ಗೌರವದಿಂದ ಕಾಣದೆ ಇರಲಾರೆನು.
ನನಗೆ ಸರಿಯೆಂದು ಕಾಣಬರುವ ತೆರದಲ್ಲಿ ನಾನು ನಡೆಯಬಹುದೆಂದು
ನೀವುಗಳೊಪ್ಪುವುದಾದರೆ ಸಂತೋಷದಿಂದ ನಿಮ್ಮ ಪ್ರತಿನಿಧಿಯಾಗಿ

ನಾನು ಕೆಲಸ ಮಾಡುತ್ತೇನೆ. ಹಾಗಿಲ್ಲದ ಪಕ್ಷಕ್ಕೆ ನಿಮ್ಮ ಚುನಾವಣೆ ಯನ್ನು ನಾನು ಬಯಸುವುದಿಲ್ಲ. ನನ್ನ ಸ್ವಾತಂತ್ರ್ಯವನ್ನು ರಕ್ಷಿಸಿ ಕೊಂಡು ಅಧಿಕಾರಕ್ಕಾಸೆಪಡದೆ ಜೀವಿಸಿಕೊಂಡಿರುವೆನು'' ಎಂದು ನುಡಿದು ಸಭೆಯಿಂದ ಹೊರಟುಹೋದನು. ಸಭೆಯವರು ವಿಸ್ಮಿತರಾಗಿ ಕುಳಿತರು. ಕೂಡಲೆ ಸದಸ್ಯನೊಬ್ಬನೆದ್ದುನಿಂತು, ''ಮಹನೀಯರೇ! ಈ ಮಹಾ ಸಭೆಯಲ್ಲಿ ನಿಂತು ಲೇಶವಾದರೂ ಭಯವಿಲ್ಲದೆ ಈ ರೀತಿ ಯಲ್ಲಿ ಧೈರ್ಯವಾಗಿ ಮಾತನಾಡಿದ ಗಾರ್ಫೀಲ್ಡನು ಮಹಾ ಧೀರನು. ಆತ್ಮಸಾಕ್ಷಿಯಿಂದ ನಡೆಯುವುದೂ ಒಂದು ದೊಡ್ಡ ಪ್ರಮಾಣವೇ ಸರಿ. ಪಾಪಭೀತನಾಗಿ ನಡೆಯುವ ಗಾರ್ಫೀಲ್ಡ್ನೇ ಮರಳಿ ನಮ್ಮ ಪ್ರತಿನಿಧಿಯಾ ಗಿರಬೇಕೆಂದು ನನಗೆ ತೋರುವುದು'' ಎಂದು ಹೇಳಿದನು. ಸಭೆಯವ ರೆಲ್ಲರೂ ಇದನ್ನು ಅನುಮೋದಿಸಿ ಮರಳಿ ಜೇಮ್ಸ್ನನ್ನೇ ತಮ್ಮ ಪ್ರತಿನಿಧಿ ಯಾಗಿರುವಂತೆ ನಿಯಮಿಸಿದರು.

ಜೇಮ್ಸ್ನು ಧೀರ ಪುರುಷರ ಗೋಷ್ಠಿಯಲ್ಲಿ ಸೇರುವುದಕ್ಕೆ ಅರ್ಹ ನೆಂಬುದನ್ನು ತೋರಿಸುವ ಮತ್ತೊಂದು ಸಂಗತಿಯನ್ನು ಇಲ್ಲಿ ಹೇಳ ಬೇಕಾಗಿದೆ: ೧೮೬೫ರಲ್ಲಿ ಲಿಂಕನ್ನನನ್ನು ಮತ್ತೊಮ್ಮೆ ಸಂಯುಕ್ತ ಸಂಸ್ಥಾನಾಧ್ಯಕ್ಷನಾಗಿ ಚುನಾಯಿಸಿದರು. ದಾಸ್ಯ ನಿವಾರಣ ಯುದ್ಧವು ಇನ್ನೂ ಮುಗಿದಿರಲಿಲ್ಲ. ಯುದ್ಧದಿಂದ ಪ್ರಜೆಗಳು ಬಹು ಕಷ್ಟನಷ್ಟ ಗಳನ್ನು ಅನುಭವಿಸಿದ್ದರು. ಕೆಲವು ವರ್ತಮಾನ ಪತ್ರಿಕೆಗಳು ಲಿಂಕನ್ನಿಗೆ ವಿರುದ್ಧವಾಗಿ ಅನೇಕ ಲೇಖನಗಳನ್ನು ಪ್ರಕಟಿಸಿದ್ದುವು. ಅವನ ಶತ್ರು ಗಳು ಬಹು ಮಂದಿ ಇದ್ದರು. ಘಾತುಕನೊಬ್ಬನು ೧೮೬೫ನೆಯ ಏಪ್ರಿಲ್ ೧೪ರಲ್ಲಿ ಲಿಂಕನ್ನನನ್ನು ಕೊಂದುಬಿಟ್ಟನು. ನ್ಯೂಯಾರ್ಕು ಮುಂತಾದ ನಗರಗಳಲ್ಲಿರುವ ಪ್ರಜೆಗಳಿಗೆ ಮಹಾ ರೋಷವುಂಟಾಯಿತು. ಲಿಂಕನ್ನಿನ ಶತ್ರುಗಳನ್ನೂ ಆ ಮಹನೀಯನಿಗೆ ವಿರುದ್ಧವಾಗಿ ಬರೆದ ವೃತ್ತಾಂತ ಪತ್ರಿಕಾಲಯಗಳನ್ನೂ ಧ್ವಂಸ ಮಾಡಿಬಿಡಬೇಕೆಂದು ಬಂದೂಕು, ಕತ್ತಿ ಮುಂತಾದ ಆಯುಧಗಳನ್ನು ಹಿಡಿದುಕೊಂಡು, ಐವತ್ತು ಸಾವಿರ ಜನದ ಗುಂಪು ನ್ಯೂಯಾರ್ಕಿನಲ್ಲಿ ಸೇರಿತು. ಆಗ ಪೂರ್ವಾಹ್ಣ ಹನ್ನೊಂದು ಗಂಟೆಯಾಗಿದ್ದಿತು. ಘೋರ ಕೃತ್ಯಗಳು ನಡೆ

ಯುವಂತೆ ಕಾಣಬಂದಿತು. ಕರ್ತವ್ಯವಾವುದೂ ತೋರದೆ ಗೃಹಸ್ಥರು ಬೆರಗಾಗಿದ್ದರು. ಆಗ ಆಜಾನುಬಾಹುವಾದ ಧೀರನೊಬ್ಬನು ಸಣ್ಣ ಪತಾಕೆಯೊಂದನ್ನು ಕೈಯಲ್ಲಿ ಹಿಡಿದು, ರೋಷಾವೇಶದಿಂದ ಕೀರಿಡುತ್ತಿದ್ದ ಜನದ ಗೊಂದಣದ ಮುಂದೆ ನಿಂತು ಸನ್ನೆಮಾಡಿದನು: "ವಾಷಿಂಗ್ಟನ್ನಿನಿಂದ ತಂತಿಯ ವರ್ತಮಾನವು ಬಂದಿರಬೇಕು, ಕೇಳೋಣ!" ಎಂದು ನೂರಾರು ಮಂದಿ ಕೂಗಿದರು. ನಿಶ್ಶಬ್ದವಾಯಿತು! ಆ ಧೀರನು ತನ್ನ ಬಲದೋಳನ್ನು ಮೇಲಕ್ಕೆತ್ತಿ ಗಂಭೀರ ಧ್ವನಿಯಿಂದ, "ಪ್ರಜಾ ಬಂಧುಗಳಿರಾ! ಪ್ರಳಯ ಕಾಲದ ಕಾರ್ಮುಗಿಲೂ ಕಗ್ಗತ್ತಲೆಯೂ ಜಗದ್ರಕ್ಷಕನನ್ನಾವರಿಸಿದ ಮಾತ್ರಕ್ಕೇ ಏನಾಗುವುದು? ಕಲಿಪುರುಷನ ಹಾವಳಿಯ ಮಧ್ಯದಲ್ಲಿಯೇ ಧರ್ಮ ಸಂಸ್ಥಾಪನಕ್ಕಾಗಿ ಭಗವಂತನಿಲ್ಲವೆ? ಸತ್ಯಸಂಧರೂ ದೀನರೂ ಅವನ ಸನ್ನಿಧಿಯಲ್ಲಿ ಮೊರೆಯಿಡುತ್ತಿಲ್ಲವೆ? ಬಾಂಧವರೇ! ಭಗವಂತನ ಆಳಿಕೆ ಇದ್ದೇ ಇದೆ. ವಾಷಿಂಗ್ಟನ್ ನಗರದಲ್ಲಿ ಸರ್ಕಾರವು ಸತ್ತಿಲ್ಲ, ಬದುಕಿಯೇ ಇದೆ!" ಎಂದು ಉದ್ಘೋಷಿಸಿದನು. ಗದ್ದಲವೆಲ್ಲವೂ ನಿಂತುಹೋಯಿತು. ಸತ್ಯ! ಸತ್ಯ! ಎಂದುಕೊಂಡು ಜನರು ತೆರಳಿದರು. ಮೇಲಣ ಘೋಷಣವನ್ನು ಮಾಡಿದ ಧೀರನು ಗಾರ್ಫೀಲ್ಡ್ ದಳವಾಯಿ.

ದಾಸ್ಯ ನಿವಾರಣ ಯುದ್ಧವು ೧೮೬೫ರಲ್ಲಿ ಮುಗಿಯಿತು. ಗುಲಾಮತನವು ಸಂಯುಕ್ತ ಸಂಸ್ಥಾನದಲ್ಲೆಲ್ಲಿಯೂ ಇರಕೂಡದೆಂದು ಕಾನೂನಾಯಿತು. ಇತರ ಪ್ರಜೆಗಳಿಗಿರುವ ಹಕ್ಕುಗಳೆಲ್ಲವೂ ಗುಲಾಮರಾಗಿದ್ದವರಿಗೂ ಇರಬೇಕೆಂದು ೧೮೬೮ರಲ್ಲಿ ವಿಧಾಯಕವಾಯಿತು. ಸಂಯುಕ್ತ ಸಂಸ್ಥಾನಗಳಲ್ಲಿ ನೆಲೆಗೊಂಡವರಿಗೆಲ್ಲ ಜಾತಿ ಮತ ಭೇದಗಳಾವುವೂ ಇಲ್ಲದೆ ಎಲ್ಲ ಹಕ್ಕುಗಳೂ ಇರತಕ್ಕುದೆಂಬ ಕಾನೂನು ೧೮೭೦ರಲ್ಲಿ ಆಚರಣೆಗೆ ಬಂದಿತು. ಈ ಸತ್ಕಾರ್ಯಗಳ ಸಾಧನೆಯಲ್ಲಿ ಜೇಮ್ಸ್ ಪ್ರಮುಖನಾಗಿದ್ದನು.

## ಅಧ್ಯಾಯ ೨೪

## ಸಂಯುಕ್ತ ಸಂಸ್ಥಾನಾಧ್ಯಕ್ಷ

ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆಯಲ್ಲಿ ಜೇಮ್ಸ್ ಹದಿನೇಳು ವರ್ಷಗಳ ಕಾಲ ಸದಸ್ಯನಾಗಿದ್ದನು. ಅವನ ಸಾಮರ್ಥ್ಯವನ್ನೂ ಋಜು ಮಾರ್ಗವನ್ನೂ ಧೈರ್ಯ ಸ್ಥೈರ್ಯ ಗಾಂಭೀರ್ಯಾದಿ ಸದ್ಗುಣ ಗಳನ್ನೂ ಮೆಚ್ಚಿ ಓಹಿಯೋ ಸಂಸ್ಥಾನದ ಮಹಾ ಜನರು ಅವನನ್ನು ಸಂಯುಕ್ತ ರಾಜ್ಯಕಾರ್ಯ ನಿರ್ವಾಹ ಸಭೆಯಲ್ಲಿ ಸದಸ್ಯನಾಗಿರುವಂತೆ ಚುನಾಯಿಸಬೇಕೆಂದು ೧೮೮೦ನೆಯ ಜನವರಿಯಲ್ಲಿ ಆಲೋಚಿಸಿ, ಅವನ ಅನುಮತಿಯನ್ನು ಪಡೆಯುವುದಕ್ಕೆ ಈ ವಿಷಯವನ್ನು ಅವನಲ್ಲಿ ಪ್ರಸ್ತಾ ಪಿಸಿದರು.

ಜೇಮ್ಸ್.—ನಿಮ್ಮ ಇಷ್ಟವಿದ್ದಂತೆ ನಡೆಯಿಸಬಹುದು. ನನ್ನ ಮಿತ್ರ ರಿಗೆ ನಾನು ಅಲ್ಲಿರುವುದು ಉತ್ತಮವೆಂದು ತೋರಿದರೆ ನನ್ನ ಆಕ್ಷೇಪಣೆಯಾವುದೂ ಇರುವುದಿಲ್ಲ.

ಪ್ರಮುಖ.—ಚುನಾವಣೆಯ ಕಾಲದಲ್ಲಿ ನೀವು ರಾಜಧಾನಿಯಾದ ಕೊಲಂಬಸ್ ನಗರದಲ್ಲಿ ಮಹಾ ಜನರೆದುರಿಗಿರಬೇಕೆಂದು ಹಾರ ಯಿಸುತ್ತೇವೆ.

ಜೇಮ್ಸ್.—ಅದು ನನ್ನಿಂದಾಗುವುದಿಲ್ಲ; ಆ ಪದವಿಗಾಗಿ ನನ್ನ ಕಿರು ಬೆಟ್ಟನ್ನು ಕೂಡ ನಾನಲುಗಿಸುವುದಿಲ್ಲ. ಹೀರಾಮಿನ ಪಾಠಶಾಲೆ ಯಲ್ಲಿ ಗಂಟೆಯನ್ನು ಹೊಡೆದು ಕಸವನ್ನು ಗುಡಿಸುವ ಪದವಿ ಯನ್ನು ಪಡೆಯುವುದಕ್ಕೆ ಹೊರತು ಮತ್ತಾವ ಪದವಿಗೂ ನಾನು ಈ ವರೆಗೂ ಪ್ರಯತ್ನಪಟ್ಟಿಲ್ಲ. ಮಹಾ ಜನರಿಗೆ ಇಷ್ಟವಿದ್ದರೆ ಅವರೇ ನನ್ನನ್ನು ಚುನಾಯಿಸಲಿ.

ಪ್ರಮುಖ.—ನಿಜ! ಕೊಲಂಬಸ್ಸಿಗೆ ಬಂದು ನೀವು ನಿಮ್ಮ ಪ್ರಶಂಸೆ ಯನ್ನು ಹೇಳಿಕೊಳ್ಳಬೇಕಾದುದಿಲ್ಲ. ನಿಮ್ಮನ್ನು ನಿಮ್ಮ ಮಿತ್ರರು ಕಂಡು ಮಾತನಾಡುವಂತಿದ್ದರೆ ಸಾಕು.

ಜೇಮ್ಸ್.—ಅಷ್ಟಕ್ಕೇ, ಪದವಿಗಾಗಿ ಪ್ರಯಾಸಪಟ್ಟಂತೆ ನಾಮಕರಣ ವನ್ನು ಮಾಡುವರು. ಆ ನಾಮಕರಣಕ್ಕೆ ಅವಕಾಶವನ್ನು ಕೊಡುವುದು ನನ್ನ ಮನಸ್ಸಿಗೆ ಸರಿಯಾಗಿ ತೋರುವುದಿಲ್ಲ. ಕೊಲಂಬಸ್ಸಿಗೆ ಆ ಕಾಲದಲ್ಲಿ ನಾನು ಕಾಲಿಡುವುದೇ ಇಲ್ಲ; ಇದು ನಿಶ್ಚಯ.

ಈ ಉತ್ತರವು ಜೇಮ್ಸಿನ ಪ್ರಕೃತಿಗನುಸಾರವಾಗಿದ್ದಿತು. ಚುನಾವಣೆಯ ಸಭೆಯಲ್ಲಿ ಎಲ್ಲರ ಬಾಯಿಂದಲೂ ಜೇಮ್ಸಿನ ಹೆಸರೇ ಬರುತ್ತಿರುವುದನ್ನು ನೋಡಿ ಇತರ ಉಮೇದುವಾರರೆಲ್ಲರೂ ಹಿಮ್ಮೆಟ್ಟಿದರು. ಸರ್ವರ ಸಮ್ಮತಿಯಿಂದ ಜೇಮ್ಸ್ ಸಂಯುಕ್ತ ರಾಜ್ಯಕಾರ್ಯ ನಿರ್ವಾಹ ಸಭೆಗೆ ಸದಸ್ಯನಾಗಿ ಚುನಾಯಿಸಲಾದನು.

ಈ ಚುನಾವಣೆಯಾದನಂತರ ಜೇಮ್ಸ್ ಕೊಲಂಬಸ್ ನಗರಕ್ಕೆ ಹೋಗಿ, ಎರಡೂ ಸಭೆಗಳನ್ನೊಟ್ಟುಗೂಡಿಸಿ ಸಮಯೋಚಿತವಾಗಿ ಭಾಷಣವನ್ನು ಮಾಡಿ ಕೊನೆಗೆ, "ಮಹನೀಯರೇ! ನಿಮ್ಮ ಅನುಗ್ರಹ ದಿಂದ ನಾನು ಇಪ್ಪತ್ತು ವರ್ಷಗಳಿಂದಲೂ ರಾಜ್ಯಕಾರ್ಯ ನಿರ್ವಾಹದ ಲ್ಲಿದ್ದೇನೆ. ಸುಮಾರು ಹದಿನೆಂಟು ವರ್ಷಗಳನ್ನು ಸಂಯುಕ್ತ ಪ್ರಜಾ ಪ್ರತಿನಿಧಿ ಸಭೆಯಲ್ಲಿ ಕಳೆದುದಾಯಿತು. ಈ ಉದ್ದಕ್ಕೂ ಒಂದು ಕೆಲಸವನ್ನು ನೆರವೇರಿಸಲು ಯತ್ನಿಸಿರುವೆನು; ಮೋಸ ಹೋಗಿರುವೆನೊ ಏನೊ ನಾನರಿಯೆನು. ಕಷ್ಟ ನಿಷ್ಠುರಗಳಾವುದನ್ನೂ ಲೆಕ್ಕಿಸದೆ ನನ್ನ ಬುದ್ಧಿಗೆ ಸರಿಯೆಂದು ತೋರಿದುದನ್ನೇ ನಾನು ಮಾಡಿರುವೆನು. ಓಹಿ ಯೋವಿನ ಪ್ರಾಂತದವರ ಪ್ರತಿನಿಧಿಯಾಗಿ ಇದುವರೆಗೂ ಅವರ ಮೆಚ್ಚಿಗೆ ಯನ್ನು ಬಯಸುತ್ತ ಬಂದಿರುವೆನು. ಆದರೂ ಮತ್ತೊಬ್ಬನ ಮೆಚ್ಚಿಗೆ ಯನ್ನು ನಾನು ಇನ್ನೂ ಹೆಚ್ಚಾಗಿ ಬಯಸುತ್ತಿರುವೆನು. ಲೋಕವು ಆತನನ್ನು ಗಾರ್‌ಫೀಲ್ಡ್ ಎಂದು ಕರೆಯುತ್ತದೆ. ನೀವು ಇದನ್ನು ಆತ್ಮ ಸ್ತುತಿಯೆಂದು ಭಾವಿಸಿದರೂ ಸರಿಯೆ. ಆ ವ್ಯಕ್ತಿಯ ಸಹವಾಸ ದಲ್ಲಿಯೇ ನಿಮ್ಮ ಪ್ರತಿನಿಧಿಯಾದ ನಾನು ಮಲಗಬೇಕಾಗಿದೆ, ಉಣ್ಣ ಬೇಕಾಗಿದೆ, ಬಾಳಬೇಕಾಗಿದೆ, ಸಾಯಲೂ ಬೇಕಾಗಿದೆ. ಅವನ ಮೆಚ್ಚಿಗೆ

ಯನ್ನು ಸಂಪಾದಿಸದಿದ್ದ ಪಕ್ಷಕ್ಕೆ ನಿಮ್ಮ ಪ್ರತಿನಿಧಿಯು ದುಸ್ಸಹವಾಸಿಯಾಗಬೇಕಾಗುತ್ತಿದ್ದಿತು'' ಎಂದು ಭಾಷಣ ಮಾಡಿದನು.

ಈ ಕೊನೆಯ ವಿಜಯವನ್ನೇ ಮನಸ್ಸಿನಲ್ಲಿಟ್ಟುಕೊಂಡು ಹಿನ್ಸ್‌ಡೇಲಾ ಎಂಬಾತನು, ''ಅವನು ಜಯ ವಧುವನ್ನು ಬೇಡಿ ಒಲಿಸಿಕೊಳ್ಳಲಿಲ್ಲ; ಜಯ ವಧುವೇ ಅವನನ್ನು ಮೋಹಿಸಿ ವರಿಸಿದಳು. ಅವನ ಸಾಮರ್ಥ್ಯ, ತಿಳಿವಳಿಕೆ, ವಿಷಯ ವಿಜ್ಞಾನ, ಔದಾರ್ಯ, ಲೋಕ ಹಿತೋತ್ಸುಕತೆ, ಭಕ್ತಿ—ಇವೇ ಅವನು ಹಿಡಿದ ಕಾರ್ಯಗಳನ್ನು ನೆರವೇರಿಸುತ್ತ ಬಂದುವು. ಅಲ್ಪ ಕಾರ್ಯಗಳಿಗಾಗಿ ಕಷ್ಟಪಟ್ಟು ಕಾಲವನ್ನೆಂದೂ ಅವನು ಕಳೆಯುತ್ತಿರಲಿಲ್ಲ. ಸಂಯುಕ್ತ ರಾಜ್ಯ ಕಾರ್ಯ ನಿರ್ವಾಹ ಸಭೆಗೆ ಅವನನ್ನು ಚುನಾಯಿಸಿದ ರೀತಿಯು ಅವನ ವಿಜಯವನ್ನು ಪ್ರಕಟಗೊಳಿಸುತ್ತಿರುವುದು. ಕುಹಕ, ಕುಯುಕ್ತಿ, ಕುತ್ಸಿತ ಕಾರ್ಯ—ಇವಾವುವೂ ಅವನಲ್ಲಿರಲಿಲ್ಲ. ತನ್ನ ಬುದ್ಧಿಗೆ ಸರಿಯಾಗಿ ತೋರಿಬಂದುದನ್ನು ಅವನು ಬಾಯಿಂದ ಆಡಿಬಿಡುತ್ತಿದ್ದನು. ಆದರೂ ಅವನನ್ನು ಅಸೂಯೆಯಿಂದ ಕಾಣುತ್ತಿದ್ದವರು ಯಾರೂ ಇರಲಿಲ್ಲ. ಅವನ ಶತ್ರುಗಳೂ ಅವನಲ್ಲಿ ಭಕ್ತಿ ವಿಶ್ವಾಸಗಳನ್ನಿಟ್ಟಿದ್ದರು; ಅವನು ಸಂಯುಕ್ತ ರಾಜ್ಯಕಾರ್ಯ ನಿರ್ವಾಹ ಸಭೆಗೆ ಸದಸ್ಯನಾದುದಕ್ಕೆ ಸಂತುಷ್ಟರೂ ಆದರು. ಅವನನ್ನು ಅಜಾತ ಶತ್ರುವೆಂದು ಕೆಲವರು ಕರೆಯುತ್ತಿದ್ದರು. ಅವನ ನಡೆವಳಿಕೆಗಳು ಸರ್ವರೂ ಅವನಿಗೆ ಗೌರವವನ್ನು ತೋರಿಸುವಂತೆ ಮಾಡುತ್ತಿದ್ದುವು'' ಎಂದು ಬರೆದಿರುತ್ತಾನೆ.

ಸಂಯುಕ್ತ ಸಂಸ್ಥಾನಗಳಲ್ಲಿದ್ದ ಮಹಾ ಪದವಿಗಳ ಸೋಪಾನವನ್ನು ಜೇಮ್ಸ್ ಕ್ರಮೇಣ ಏರುತ್ತ ಬಂದಿದ್ದನು; ಸಂಯುಕ್ತ ಸಂಸ್ಥಾನಾಧ್ಯಕ್ಷತ್ವವೆಂಬ ಸರ್ವೋನ್ನತವಾದ ತುದಿಯ ಹಂತವೊಂದೇ ಉಳಿದಿದ್ದಿತು. ಅವನು ಶೀಘ್ರದಲ್ಲಿಯೇ ಅದನ್ನೂ ಏರುವವನಾದನು.

ಜೇಮ್ಸ್ ಸಂಯುಕ್ತ ರಾಜ್ಯಕಾರ್ಯ ನಿರ್ವಾಹ ಸಭೆಯ ಸದಸ್ಯನಾದ ಐದೇ ತಿಂಗಳ ಮೇಲೆ ಸಂಯುಕ್ತ ಸಂಸ್ಥಾನಗಳ ದಾಸ್ಯ ವಿರುದ್ಧ ಪ್ರಮುಖರೆಲ್ಲರೂ ಸೇರಿ ಮಾಡಿದ ಮಹಾ ಸಭೆಯೊಂದು ನಡೆಯಿತು;

ಏಳುನೂರು ಮಂದಿ ಸದಸ್ಯರುಗಳೂ ಹದಿನೈದು ಸಾವಿರ ಮಂದಿ ಪ್ರೇಕ್ಷ
ಕರೂ ನೆರೆದಿದ್ದರು. ಸಂಯುಕ್ತ ಸಂಸ್ಥಾನಾಧ್ಯಕ್ಷ ಪದವಿಯನ್ನೇರಲು
ಯಾವ ಮಹನೀಯನು ಅರ್ಹನೆಂದು ಗೊತ್ತುಮಾಡುವುದು ಆ ಮಹಾ
ಸಭೆಯ ಉದ್ದೇಶವಾಗಿದ್ದಿತು. ಆ ಮಹಾ ಸಭೆಯ ನಿರ್ಣಯಾನು
ಸಾರವಾಗಿ ಬೇರೆ ಬೇರೆಯ ಸಂಸ್ಥಾನಗಳ ಪ್ರಮುಖರು ಅವರವರ
ಸಂಸ್ಥಾನಗಳ ರಾಜಧಾನಿಗಳಿಗೆ ತೆರಳಿ, ಅಲ್ಲಲ್ಲಿ ನವೆಂಬರು ತಿಂಗಳ ಮೊದ
ಲನೆಯ ಮಂಗಳವಾರದಲ್ಲಿ ಚುನಾವಣೆಯ ಕೆಲಸಗಳನ್ನು ನಿರ್ವಹಿಸ
ಬೇಕೆಂಬ ನಿಯಮವಿದ್ದಿತು. ಆಗ ಸಂಯುಕ್ತ ಸಂಸ್ಥಾನಗಳ ಸಂಖ್ಯೆಯು
ಮೂವತ್ತೊಂಟಾಗಿದ್ದಿತು. ಸಂಯುಕ್ತ ಸಂಸ್ಥಾನಾಧ್ಯಕ್ಷ ಪದವಿಗೆ
ಬರುವುದಕ್ಕೆ ವರಿದ್ರು ಪಕ್ಷ ಇಪ್ಪತ್ತು ಸಂಸ್ಥಾನಗಳ ಒಪ್ಪಿತವು ಅವಶ್ಯಕ
ವಾಗಿದ್ದಿತು. ಇಷ್ಟು ಒಪ್ಪಿತವು ದೊರೆಯುವುದು ದುರ್ಲಭವಾಯಿತು.
ಚುನಾವಣೆಯ ಪ್ರಯತ್ನಗಳು ಮೂವತ್ತ ನಾಲ್ಕು ಬಾರಿ ನಿಷ್ಫಲ
ವಾದುವು. ಸಭೆಯಲ್ಲಿ ಜೇಮ್ಸ್ ಇದ್ದನು. ಇವನು ಎದ್ದು ಮಾತನಾಡಿ
ದಾಗೆಲ್ಲ ಸದಸ್ಯರು ಜಯ ಧ್ವನಿಯಿಂದ ತಮ್ಮ ಸಂತೋಷವನ್ನು ತೋರಿ
ಸುತ್ತಿದ್ದರು. ಇದನ್ನು ನೋಡಿ ಸುಮಾರು ಐವತ್ತು ಮಂದಿ ಸದಸ್ಯರು
ಮೂವತ್ತೈದನೆಯ ಅಭಿಮತ ಪ್ರದರ್ಶನದಲ್ಲಿ ತಮ್ಮ ವೋಟುಗಳನ್ನು
ಜೇಮ್ಸಿಗೆ ಕೊಟ್ಟರು. ಈ ಸಂಗತಿಯು ಪ್ರಕಟವಾಗಲು, ನವೀನ
ಜ್ಞಾನೋದಯವಾದಂತೆ ಸದಸ್ಯರ ಕೋಲಾಹಲ ಧ್ವನಿಯು ಹೆಚ್ಚಿತು.
ಒಂದು ಸಂಸ್ಥಾನದ ಸದಸ್ಯರು ತಮ್ಮ ಧ್ವಜವನ್ನು ತಂದು ಜೇಮ್ಸನ
ತಲೆಯ ಮೇಲೆ ಹಿಡಿದರು. ಕೋಲಾಹಲವು ಇನ್ನೂ ಹೆಚ್ಚಿತು.
ಮತ್ತೊಂದು ಸಂಸ್ಥಾನದವರೂ ಹಾಗೆಯೇ ಮಾಡಿದರು. ಕೋಲಾ
ಹಲವು ಮತ್ತಷ್ಟು ಹೆಚ್ಚಿತು. ಉಳಿದ ಸಂಸ್ಥಾನಗಳು ಒಂದರ ಹಿಂದೊಂದು
ತಂತಮ್ಮ ಧ್ವಜಗಳನ್ನು ಜೇಮ್ಸನೆಡೆಗೆ ತಂದು ಹಿಡಿದುವು. ಆಗ ಏಳು
ನೂರು ಮಂದಿ ಸದಸ್ಯರೂ ಹದಿನೈದು ಸಾವಿರ ಮಂದಿ ಪ್ರೇಕ್ಷಕರೂ
ಎದ್ದು ನಿಂತು ಚಪ್ಪಾಳೆ ಹೊಡೆಯುತ್ತ ಆನಂದಾತಿಶಯದಿಂದ ಕೂಗಿ
ದರು, ಅರಚಿದರು, ಕೀರಿಟ್ಟರು. ಸಭೆಯ ಹೊರಗಿದ್ದ ವಾದ್ಯಗಳು
ಸಂಯುಕ್ತ ಸಂಸ್ಥಾನಗಳ ಜನಾಂಗದ ಹಾಡನ್ನು ಬಾರಿಸಿದುವು.

ಅಲ್ಲಿದ್ದವರೆಲ್ಲರೂ ಆ ಹಾಡನ್ನು ಬಾಯಿಂದಲೂ ಹಾಡಿದರು ; ಹೊರಗೆ ಫಿರಂಗಿಗಳನ್ನು ಹಾರಿಸಿದರು. ಜನರ ಮನಸ್ಸೂ ಆನಂದಮಯ ವಾಯಿತು. ಜೇಮ್ಸ್‌ನ ಮನಸ್ಸಾದರೊ ಮೊದಲಿದ್ದಂತೆಯೇ ಶಾಂತ ವಾಗಿದ್ದಿತು.

ಇಂತಹ ಅತಿಶಯೋತ್ಸವದ ಚುನಾವಣೆ ಹಿಂದೆಂದೂ ನಡೆದಿರಲಿಲ್ಲ; ಮುಂದೆಯೂ ನಡೆಯುವಂತಿಲ್ಲ. ಸಭೆಯು ಪ್ರಾರಂಭವಾದಾಗ ಜೇಮ್ಸನ್ನು ಚುನಾಯಿಸಬೇಕೆಂಬ ಆಲೋಚನೆ ಯಾರಿಗೂ ಇರಲಿಲ್ಲ. ನಡೆದ ಕಾರ್ಯಸಮಾರಂಭವನ್ನು ನೋಡಿದರೆ ಎಲ್ಲವೂ ಜಗದೀಶ ಪ್ರೇರಿತವಾಗಿಯೇ ನಡೆಯಿತೆಂದು ಹೇಳಬೇಕಲ್ಲವೆ?

೧೮೮೦ನೆಯ ನವೆಂಬರ್ ೨ನೆಯ ತಾರೀಖಿನಲ್ಲಿ ನಿಯಮಾನು ಸಾರವಾಗಿ ಜೇಮ್ಸ್ ಸಂಯುಕ್ತ ಸಂಸ್ಥಾನಾಧ್ಯಕ್ಷ ಪದವಿಗೆ ಚುನಾ ವಣೆಯನ್ನು ಪಡೆದನು. ಮೂವತ್ತೆಂಟು ಸಂಸ್ಥಾನಗಳಲ್ಲಿ ಇಪ್ಪತ್ತು ಅವನ ಪರವಾಗಿದ್ದುವು. ಮುನ್ನೂರರುವತ್ತೊಂಬತ್ತು ಮಂದಿ ಚುನಾ ವಣೆದಾರರಲ್ಲಿ ಇನ್ನೂರ ಹದಿಮೂರು ಮಂದಿ ಅವನಿಗೆ ಅಭಿಮತವನ್ನು ಕೊಟ್ಟರು.

ಚುನಾವಣೆಯ ಕಾಲಕ್ಕೂ ಅಧಿಕಾರ ಸ್ವೀಕಾರ ಕಾಲಕ್ಕೂ ಮಧ್ಯದಲ್ಲಿದ್ದ ನಾಲ್ಕು ತಿಂಗಳ ಅಂತರದಲ್ಲಿ ಗಲಭೆಗಳಾವುವೂ ಇರಲಿಲ್ಲ. ಜೇಮ್ಸ್‌ನ ಚುನಾವಣೆಯು ಸರ್ವರಿಗೂ ಸಮ್ಮತವಾಗಿದ್ದಿತು.

೧೮೮೧ನೆಯ ಮಾರ್ಚಿ ೪ನೆಯ ತಾರೀಖಿನ ಮಧ್ಯಾಹ್ನಕ್ಕೆ ಸರಿ ಯಾಗಿ ಅಧಿಕಾರ ಸ್ವೀಕಾರ ಮಹೋತ್ಸವವು ನಡೆಯಬೇಕೆಂದು ನಿಶ್ಚಿತ ವಾಗಿದ್ದಿತು. ಸಂಯುಕ್ತ ಸಂಸ್ಥಾನಾಧ್ಯಕ್ಷನ ನಿವಾಸ ಸ್ಥಾನವಾದ ಧವಳ ಮಂದಿರದಿಂದ (White House) ಮೆರೆವಣಿಗೆಯು ಹೊರಟು ಕ್ಯಾಪಿಟೊಲ್ ಎಂಬ ಆಸ್ಥಾನ ಮಂದಿರದಲ್ಲಿ ಅಧಿಕಾರ ಸ್ವೀಕಾರ ಮಹೋ ತ್ಸವವು ನಡೆಯಬೇಕೆಂದು ವಿಧಾಯಕವಾಗಿದ್ದಿತು. ಆ ದಿನ ಪ್ರಾತಃಕಾಲ ಮಳೆಯೂ ಬಿರುಗಾಳಿಯೂ ಹೆಚ್ಚಾಗಿದ್ದುವು. ಅವುಗಳನ್ನು ಲಕ್ಷ್ಯಕ್ಕೆ ತಾರದೆ ಲಕ್ಷೋಪಲಕ್ಷ ಜನರು ನೋಟಕ್ಕಾಗಿ ಬಂದಿದ್ದರು. ವಾಷಿಂಗ್

ಟನ್ ನಗರವು ಜನರ ಗುಂಪುಗಳಿಂದ ತುಂಬಿ ತುಳುಕುತ್ತಿದ್ದಿತು. ಮೂವ ತ್ತೆಂಟು ಸಂಸ್ಥಾನಗಳಿಂದಲೂ ಪ್ರತಿನಿಧಿಗಳು ಬಂದಿದ್ದರು; ಪೃಥ್ವಿಯ ಮುಖ್ಯ ದೇಶಗಳ ರಾಯಭಾರಿಗಳೂ ನೆರೆದಿದ್ದರು; ಮಹೋತ್ಸವವು ಅತಿ ವಿಜೃಂಭಣೆಯಿಂದ ನಡೆಯುತ್ತಿದ್ದಿತು.

ಪೂರ್ವಾಹ್ಣದ ಹತ್ತೂವರೆ ಗಂಟೆಗೆ ಸರಿಯಾಗಿ ಜೇಮ್ಸ್ ಆಗ ಸಂಯುಕ್ತ ಸಂಸ್ಥಾನಾಧ್ಯಕ್ಷನಾಗಿದ್ದ ಹೇಸ್ ಎಂಬಾತನೊಡನೆ ಧವಳ ಮಂದಿರಕ್ಕೆ ಬಂದನು. ಸ್ವಲ್ಪ ಹೊತ್ತಿನ ಮೇಲೆ ಮಹೋತ್ಸವದ ಗುಂಪು ಧವಳ ಮಂದಿರದಿಂದ ಹೊರಟು ಆಸ್ಥಾನ ಮಂದಿರವನ್ನು ಮಧ್ಯಾ ಹ್ನಕ್ಕೆ ಸರಿಯಾಗಿ ಸೇರಿತು. ಸರ್ವರೂ ಅವರವರ ಸ್ಥಾನಗಳಲ್ಲಿ ಕುಳಿತ ಮೇಲೆ ಜೇಮ್ಸ್ ತನ್ನ ಅಧ್ಯಕ್ಷ ಮಹಾ ಪದವಿಯ ಪ್ರಥಮ ಭಾಷಣ ವನ್ನು ಮಾಡಿದನು. ಘನ ಗಂಭೀರ ಧ್ವನಿಯಿಂದ ಮಾಡಿದ ಆ ಭಾಷಣ ವನ್ನು ಕೇಳಿ ಸರ್ವರೂ ಆನಂದ ಭರಿತರಾದರು. ಆ ಹೊತ್ತಿಗೆ ಸರಿಯಾಗಿ ಸೂರ್ಯನ ತೇಜೋಮಯವಾದ ಕಿರಣಗಳು ಜೇಮ್ಸಿನ ಮೇಲೆ ಪ್ರಸರಿ ಸಿದುವು; ಮೋಡಗಳು ಸರಿದುವು. ಸಂಯುಕ್ತ ಸಂಸ್ಥಾನಗಳ ಮಹಾ ನ್ಯಾಯಸ್ಥಾನದ ನ್ಯಾಯಾಧಿಪತಿಯು ಬೈಬಲ್ ಪುಸ್ತಕವನ್ನು ಜೇಮ್ಸಿನ ಕೈಗೆ ಕೊಟ್ಟನು. ಆತನು ಅದನ್ನು ಸ್ವೀಕರಿಸಿ ವಿಧಾಯಕವಾಗಿದ್ದ ಪ್ರಮಾಣಗಳನ್ನು ನಿಶ್ಚಲ ಚಿತ್ತದಿಂದ ಭಕ್ತಿ ಪೂರ್ವಕವಾಗಿ ಮಾಡಿ, ಆ ದೇವತಾ ಪುಸ್ತಕವನ್ನು ಮುತ್ತಿಟ್ಟುಕೊಂಡು ಅದನ್ನು ನ್ಯಾಯಾಧಿಪತಿಗೆ ಕೊಟ್ಟನು; ಕಣ್ಣುಗಳಿಂದ ಆನಂದ ಬಿಂದುಗಳನ್ನು ಸುರಿಸುತ್ತ ಅಲ್ಲಿ ನಿಂತಿದ್ದ ತನ್ನ ತಾಯಿಗೆ ವಂದಿಸಿ, ಅನಂತರ ತನ್ನ ಭಾರ್ಯೆಯ ಕೆನ್ನೆಗೆ ಮುತ್ತಿಟ್ಟನು. ವಾದ್ಯಗಳು ಭೋರ್ಗರೆದುವು, ಫಿರಂಗಿಗಳು ಹಾರಿ ದುವು, ಜನರ ಜಯ ಜಯ ಧ್ವನಿಯು ದಿಗಂತವನ್ನು ವ್ಯಾಪಿಸಿತು, ಲಕ್ಷೋಪಲಕ್ಷ ಜನರು ಆನಂದ ಭರಿತರಾದರು.

ಧವಳ ಮಂದಿರಕ್ಕೆ ಮರಳಿ ತೆರಳುವ ಮೆರೆವಣಿಗೆಯು ಸಿದ್ಧ ವಾಯಿತು. ಈಗ ಸಂಯುಕ್ತ ಸಂಸ್ಥಾನಗಳ ಸೈನ್ಯದವರೂ ಮೆರೆವಣಿ ಗೆಗೆ ಸೇರಿದರು. ಒಂದು ಸ್ಥಳವನ್ನು ದಾಟಿ ಹೋಗುವುದಕ್ಕೆ ಆ ಮೆರೆ ವಣಿಗೆಗೆ ಮೂರು ಗಂಟೆಯ ಕಾಲವು ಅವಶ್ಯಕವಾಗಿದ್ದಿತು. ಮರದ

ಗುಡಿಸಿಲಿನಲ್ಲಿ ಹುಟ್ಟಿ ಬೆಳೆದ ಜೇಮ್ಸ್ ಏಬ್ರಾಮ್ ಗಾರ್ಫೀಲ್ಡನು ಸಂಯುಕ್ತ ಸಂಸ್ಥಾನಾಧ್ಯಕ್ಷ ಪದವಿಯನ್ನೈದಿ ಮಹೋತ್ಸವದಿಂದ ಧವಳ ಮಂದಿರವನ್ನು ಪ್ರವೇಶಿಸಿದನು! ಸಂಪದ್ಯುಕ್ತವಾದ ಇಂತಹ ಮಹಾ ಸಂಸ್ಥಾನದ ಅಧ್ಯಕ್ಷ ಪದವಿಯನ್ನು ಪ್ರಜಾಭಿಮತದಿಂದೈದುವವನು ಮಹನೀಯನಲ್ಲವೆ?

ಲೋಕ ಹಿತಕ್ಕಾಗಿ ಅನೇಕ ಕಾರ್ಯಗಳನ್ನು ನಿರ್ವಹಿಸಬೇಕೆಂದು ಜೇಮ್ಸನು ಸಂಕಲ್ಪಿಸಿದ್ದನು. ಆದರೆ ಆ ಮಹಾ ಪದವಿಯನ್ನೈದಿದ ನಾಲ್ಕು ತಿಂಗಳೊಳಗೆ ನೀಚನೊಬ್ಬನು, ತನಗೆ ದೊಡ್ಡ ಪದವಿಯು ಕೈಸೇರುವುದೆಂದು ಭಾವಿಸಿಕೊಂಡು, ೧೮೮೧ನೆಯ ಜೂಲೈ ೨ರಲ್ಲಿ ಜೇಮ್ಸನನ್ನು ಪಿಸ್ತೂಲಿನಿಂದ ಹೊಡೆಯಲು, ಗುಂಡು ಅವನ ಪಕ್ಕವನ್ನು ಪ್ರವೇಶಿಸಿತು; ಸೆಪಟಂಬರ್ ತಿಂಗಳಲ್ಲಿ ಆತನು ದೈವಾಧೀನನಾದನು.

ಸತ್ತು ಇಷ್ಟು ವರ್ಷಗಳಾದರೂ ಜೇಮ್ಸನ ಯಶಸ್ಸು ಸ್ವಲ್ಪವೂ ಕಡಿಮೆಯಾಗಿಲ್ಲ. ಯುವಕರಿಗೆಲ್ಲ ಜೇಮ್ಸನೂ, ಮಾತೆಯರಿಗೆಲ್ಲ ಎಲಿಜಿಯೂ ಮೇಲುಪಙ್ಕ್ತಿಯಾಗಿರುವರು. ಕೋಟ್ಯಂತರ ಜನರು ಈ ಮಹಾ ಪುರುಷನ ಚರಿತ್ರೆಯನ್ನು ನಾನಾ ಭಾಷೆಗಳಲ್ಲಿ ಈಗಲೂ ಓದುತ್ತಿರುವರು, ಮುಂದಕ್ಕೂ ಓದುವರು. ಮಹನೀಯರ ಚರಿತ್ರೆಯು ಎಂದೆಂದೂ ಪವಿತ್ರವಾಗಿಯೇ ಇರುವುದು.



798—30. ಬೆಂಗಳೂರು ಪ್ರೆಸ್, ಮೈಸೂರು ರೋಡ್, ಬೆಂಗಳೂರು ಸಿಟಿ